

ತೈಲವರ್ಣ ಕಲಾಕೃತಿ

# ದೃಶ್ಯಕಾವ್ಯ ಮತ್ತು ತೇಲಾಡುವ ರೂಪಗಳು



ಬಿಜಾಪುರದ ಕಲಾವಿದ ಬಿ. ಎಸ್. ದೇಸಾಯಿಯವರ ಕಲಾಕೃತಿಗಳೆಂದರೆ ಅದೊಂದು ಅಮೂರ್ತ ಶೈಲಿಯ ದೃಶ್ಯಕಾವ್ಯ. ಅವರು ಹಾಸನದ ಬಾಲಕರ ಸರ್ಕಾರಿ ಪದವಿಪೂರ್ವ ಕಾಲೇಜಿನಲ್ಲಿ ಚಿತ್ರಕಲಾ ಅಧ್ಯಾಪಕರಾಗಿದ್ದಾರೆ. ಅವರ ತೈಲವರ್ಣ ಕಲಾಕೃತಿಗಳು ಕಲಾವಿದನ ಭಾವನೆಗಳನ್ನು ಹಲವು ನೆಲೆಗಳಲ್ಲಿ ಅಭಿವ್ಯಕ್ತಿಸಿವೆ. ಸುತ್ತಲಿನ ಜೀವನದಲ್ಲಿನ ಚೈತನ್ಯವನ್ನು ಅಮೂರ್ತವಾಗಿಸಿ, ಅದೇನೋ ಹುಡುಕಾಟಕ್ಕೆ ಹೊರಟವರಂತೆ ಕಲಾವಿದ ತಮ್ಮ ಕಲಾಕೃತಿಗಳಲ್ಲಿ ಬಣ್ಣಗಳ ದೃಶ್ಯಕಾವ್ಯವನ್ನು ತೆರೆದಿಟ್ಟಿದ್ದಾರೆ. ತೇಲಾಡುವ ರೂಪಗಳೆಂದು ಅವರ ಕಲಾಕೃತಿಗಳ ಬಗ್ಗೆ ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ.

*ಲೇಖನ :* **ಜಿ. ಎಂ. ಬೊಮ್ನಳ್ಳಿ**
*ಬೊಮ್ನಳ್ಳಿ, ತಾ : ಶಿರಸಿ ( ಉ. ಕ.) - ೫೮೧ ೪೦೨*



ತೈಲವರ್ಣ ಕಲಾಕೃತಿ



ತೈಲವರ್ಣ ಕಲಾಕೃತಿ



ತೈಲವರ್ಣ ಕಲಾಕೃತಿ

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಮೋನಪ್ಪ, ಬಿ. ವಿಲ್ಸನ್, ಶ್ರೀಹರಿ, ಎನ್. ಆರ್. ಬೊಮ್ನಳ್ಳಿ, ರಾಂಚಂದ್ರ ಕೊಪ್ಪಲು

ಮುಖಚಿತ್ರ : ೧೯೧೭ರ ನವೆಂಬರ್ ೭ರಂದು ರಷ್ಯಾದಲ್ಲಿ ಜರುಗಿದ ಅಕ್ಟೋಬರ್ ಸಮಾಜವಾದಿ ಕ್ರಾಂತಿಯ ಸಂದರ್ಭದಲ್ಲಿ ಲೆನಿನ್ ಕ್ರಾಂತಿಕಾರಿ ಜನತೆಯನ್ನುದ್ದೇಶಿಸಿ ಮಾತನಾಡುತ್ತಿರುವುದು.
(ಕಲೆಗಾರ : ವಿ. ಸೆರೊವ್)

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ನಮ್ಮ ರಾಜ್ಯದ ಜನ ಎಷ್ಟು ನಿರ್ಲಿಪ್ತರಾಗಿದ್ದಾರೆಂದರೆ ಯಾರು ಬೇಕಾದರೂ ಸರ್ಕಾರ ರಚಿಸಲಿ ಅಥವಾ ರಚಿಸದಿರಲಿ, ಮುಖ್ಯಮಂತ್ರಿಯಾಗಲಿ ಅಥವಾ ಆಗದಿರಲಿ, ಅವರಿಗೆ ಅದರಿಂದೇನೂ ಆಗಬೇಕಾಗಿಲ್ಲ ಎಂಬ ಭಾವನೆ ತಳೆದಿದ್ದಾರೆ. ಆಳಿದ ಮೂರು ರಾಜಕೀಯ ಪಕ್ಷಗಳು ಅವರಿಗೆ ಬೇಸರ ತಂದಿವೆ, ಅವರ ಕಸರತ್ತುಗಳಿಂದ ಜನ ರೋಸಿಹೋಗಿದ್ದಾರೆ. ದೇವೇಗೌಡರ ಇನ್ನೊಬ್ಬ ಮಗ ಮುಖ್ಯಮಂತ್ರಿಯಾಗಲಿಲ್ಲವೆಂದು ಅವರು ಯಾರೂ ಅನ್ನ-ನೀರು ಬಿಟ್ಟು ಕೂತಿಲ್ಲ. ಗಳಗಳನೆ ಅತ್ತುಬಿಡುವ ಅಸಹ್ಯ ನಾಟಕೀಯ ತಂತ್ರದಲ್ಲಿ ಪ್ರವೀಣರಾಗಿರುವ ದೇವೇಗೌಡರ ಬಗ್ಗೆ ಅವರಿಗೆ ಗೌರವ ಉಳಿದಿದ್ದರೆ ಅದೊಂದು ಪವಾಡವೆನಿಸೀತು. ಕೀಳು ಮಟ್ಟದ ರಾಜಕಾರಣವನ್ನು ಅನಿವಾರ್ಯವಾಗಿ ಜನ ಸಹಿಸಿಕೊಳ್ಳಬಹುದು, ಅದರ ಪುನರಾವರ್ತನೆಗೂ ಸೊಪ್ಪು ಹಾಕಬಹುದು, ಆದರೆ ಅದನ್ನು ಮೆಚ್ಚಿಕೊಳ್ಳುವಷ್ಟು ಮೋಸದ ವ್ಯಕ್ತಿತ್ವ ಅವರದಲ್ಲ. ಅದನ್ನು ದೇವೇಗೌಡ-ಕುಮಾರಸ್ವಾಮಿ-ಯಡಿಯೂರಪ್ಪ-ಅನಂತಕುಮಾರ್ ಅಂಥವರ ಏಕಸ್ವಾಮ್ಯಕ್ಕೆ ಬಿಟ್ಟುಕೊಡಲಾಗಿದೆ. ಕಳೆದ ಒಂದು ತಿಂಗಳಲ್ಲಿ ನಮ್ಮ ರಾಜ್ಯ ಕಂಡ ರಾಜಕೀಯ ಕಿತ್ತಾಟವನ್ನು ವಿಶ್ಲೇಷಿಸಲು ಪುಟಗಟ್ಟಲೆ ಬರೆಯುವುದು ಮೂರ್ಖತನವೆನಿಸಿಕೊಳ್ಳುತ್ತದೆ. ಏಕೆಂದರೆ, ಎಲ್ಲ ವಿಶ್ಲೇಷಣೆಗಳ ಆರಂಭ ಮತ್ತು ಮುಕ್ತಾಯವು ಲೂಟಿಗೆ ಅವಕಾಶ ಕಲ್ಪಿಸಿಕೊಳ್ಳುವ ತಂತ್ರ ಯಾವುದೆಂಬುದೊಂದೇ ಆಗಿರುತ್ತದೆ. ಬೆಂಗಳೂರಿನ ಉತ್ತರದ ಪ್ರತಿನಿಧಿ ಕಟ್ಟಾ ಬಿಜೆಪಿ ಮುಖಂಡ ನಾಯ್ಡು ಅವರಿಂದ ಹಿಡಿದು ದಕ್ಷಿಣದ ಅಶೋಕ್‌ವರೆಗೆ, ರಾಮನಗರದ ಕುಮಾರಸ್ವಾಮಿಯಿಂದ ಹಿಡಿದು ಹಾಸನದ ರೇವಣ್ಣವರೆಗೆ, ಬಳ್ಳಾರಿಯ ರೆಡ್ಡಿಯಿಂದ ಧಾರವಾಡದ ಹೊರಟ್ಟಿವರೆಗೆ, ಸಾತನೂರಿನ ಶಿವಕುಮಾರ್‌ನಿಂದ ಗುರ್ಮಿತ್‌ಕಲ್‌ನ ಖರ್ಗೆವರೆಗೆ ಎಲ್ಲಾ ಒಂದೇ ಬಣ್ಣದವರು, ಒಂದೇ ಉದ್ದೇಶದವರು. ಅವರಲ್ಲಿ ಯಾರನ್ನು ಯಾವ ಪಕ್ಷಕ್ಕೆ ಬೇಕಾದರೂ ಸೇರಿಸಬಹುದು, ಅಂಥಾ ವ್ಯತ್ಯಾಸವೇನೂ ಆಗುವುದಿಲ್ಲ. ಅವರನ್ನು ಸಿದ್ಧಾಂತಗಳ ಕಟ್ಟುಪಾಡಿಗೆ ಸಿಲುಕಿಸ ಹೊರಟರೆ ಅದು ಯಾವುದೇ ಸಿದ್ಧಾಂತಕ್ಕೂ ಅಪಚಾರವಾಗುತ್ತದೆ, ಸುಳ್ಳಿನ ಕಂತೆಯಾಗುತ್ತದೆ. ವ್ಯಾಪಾರದಲ್ಲಿ ನಿಸ್ಸೀಮರಾದ ಈ ಟೋಪಿ ಜನಕ್ಕೆ ಸಿದ್ಧಾಂತ ಬೇರೆ ಕೇಡು !

ಇದನ್ನು ಗಮನಿಸಿದರೆ ಯಡಿಯೂರಪ್ಪನವರ ಆಸ್ಥಾನದಲ್ಲಿ ಕೇಳಿಬರುವ ''ವಚನ ಭ್ರಷ್ಟತೆ''ಯ ಮಾತು ಹುರುಳಿಲ್ಲದ್ದು. ಹೇಗೋ ಮತ್ತೆ ಒಂದು ಸರ್ಕಾರ ರಚಿಸಿಬಿಟ್ಟರೆ ಈ ಭ್ರಷ್ಟತೆಯನ್ನೆಲ್ಲಾ ತೊಳೆದು ಪಾವನಗೊಳಿಸಿಕೊಂಡ ಹಾಗೆ ಅದು ಅವರಿಗೆ ರಂಜಿಸುತ್ತದೆ. ಸುವರ್ಣ ಕರ್ನಾಟಕದ ಸಂದರ್ಭದಲ್ಲಿ ಇಂತಹ ಹೀನ ಕೊಡುಗೆ ನೀಡುತ್ತಿರುವ ಮೂರೂ ಪಕ್ಷಗಳನ್ನು ಎಷ್ಟು ಹೀಯಾಳಿಸಿದರೂ ಸಾಲದು. ಅಂಥವರನ್ನು ಇನ್ನೆಷ್ಟು ಕಾಲ ಸಹಿಸ ಬೇಕೆಂಬುದನ್ನು ರಾಜ್ಯದ ಜನತೆ ತೀರ್ಮಾನಿಸಬೇಕಾಗಿದೆ. ಇಪ್ಪತ್ತು ತಿಂಗಳ ಹಿಂದೆ ಸೂತ್ರಧಾರ ಮಾನ್ಯ ದೇವೇಗೌಡರ ಅಘೋಷಿತ ನಿರ್ದೇಶನದಲ್ಲಿ ಸರ್ಕಾರ ರಚಿಸಿದ್ದು ಮೊದಲ ಅಗಾಧ ಭ್ರಷ್ಟತೆಯೆಂದು ಯಡಿಯೂರಪ್ಪನವರು ಮನಗಂಡರೆ ಅವರ ಸಾಂಸ್ಕೃತಿಕ ಆರೋಗ್ಯ ಉತ್ತಮಗೊಳ್ಳಬಹುದು. ಯಾವ ಕೆಲಸ ಮಾಡಲು ಎಷ್ಟು ಚಿತ್ರಾನ್ನ ಕೊಡಬೇಕೆಂದು ತೀರ್ಮಾನಿಸಿ ಅದನ್ನು ಪಡೆಯಲು ಮಗ, ಸೊಸೆ, ಮಗಳು, ಹೀಗೆ ನೆಂಟರಿಷ್ಟರನ್ನೆಲ್ಲಾ ನೇಮಿಸಿಕೊಂಡಿದ್ದ ಯಡಿಯೂರಪ್ಪ ಮತ್ತು ಕುಮಾರಸ್ವಾಮಿ ಸಂಪುಟದ ಇತರ ಸದಸ್ಯರಿಗೆ ಭ್ರಷ್ಟತೆಯ ಮಾತನಾಡಲು ಇನ್ನೂ ನಾಲಿಗೆ ಉಳಿದಿದೆಯೆ ? ಆ ಭ್ರಷ್ಟತೆಯೆದುರು ದೇವೇಗೌಡ ನಿರ್ದೇಶಿತ ಕುಮಾರಸ್ವಾಮಿ ವಚನಭ್ರಷ್ಟತೆಯು ಕುಬ್ಜವಾಗಿ ಕಾಣುತ್ತದೆ. ರಾಜಕೀಯ ಆರ್ಥಿಕತೆಯ ವಿಶ್ಲೇಷಣೆಗೆ ಸವಾಲಾಗುವಂತಹ ಪ್ರಚಂಡ ಮತ್ತು ವಿಪತ್ಕಾರಿ ರಾಜಕಾರಣವು ನಮ್ಮ ರಾಜ್ಯವನ್ನು ಮೆಟ್ಟಿನಿಂತಿದೆ. ರಾಜಭವನದ ಆಡಳಿತವು ಅದನ್ನೆಲ್ಲಾ ಅಳಿಸಿಹಾಕಿಬಿಡುತ್ತದೆಂಬ ಭರವಸೆ ಎಳ್ಳಷ್ಟೂ ಇಲ್ಲ. ಅಲ್ಲಿಂದಲೂ ತಿಮಿಂಗಿಲ ನ್ಯಾಯವೇ ದೊರೆಯಬಹುದೆಂಬ ಆತಂಕವಿದೆ. ಆದ್ದರಿಂದ ಬೇಗನೆ ಚುನಾವಣೆಯು ಘೋಷಿಸಲ್ಪಟ್ಟರೆ ಜನರು ಜವಾಬ್ದಾರಿಯಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳುತ್ತಾರೆಯೇ ಎಂಬುದನ್ನು ಕಾದುನೋಡಬೇಕು. ಯಾವ ಜನಪರ ಹೋರಾಟವನ್ನೂ ಮಾಡದೆ ಮಾತಿನ ಮಿಠಾಯಿ ಹಂಚುವ ಪಕ್ಷಗಳಿಂದ ನಮ್ಮ ರಾಜ್ಯದ ಅಭಿವೃದ್ಧಿ ಸಾಧ್ಯವೇ ಎಂಬುದನ್ನು ಜನ ವಿವೇಚನೆಯಿಂದ ಕಂಡುಕೊಳ್ಳಬೇಕು. ಚುನಾವಣೆಯನ್ನು ಮುಂದೂಡಬೇಕೆಂಬ ಬಯಕೆಯಿಂದ ಮತ್ತೆ ತೇಪೇದಾರಿ ರಾಜಕೀಯ ನಡೆದರೆ ಯಥಾಪ್ರಕಾರ ಮಾತಿನ ಮೌಲ್ಯಗಳ ಮಳೆ ನಮಗೆ ಕಟ್ಟಿಟ್ಟ ಬುತ್ತಿ. ಆಗ ''ಸರ್ವಜ್ಞ ಮತ್ತೊಮ್ಮೆ ಹುಟ್ಟಿ ಬಂದರೂ'' ಕಾರ್ಗತ್ತಲ ನಿವಾರಣೆ ಆಗದು. ದೇವೇಗೌಡರನ್ನು ಭಾರತದ ರಾಯಭಾರಿಯಾಗಿ ಫಿಜಿ ದ್ವೀಪಕ್ಕೆ ರವಾನಿಸಿದರೆ ಮತ್ತು ಯಡಿಯೂರಪ್ಪನವರನ್ನು ಬಾಬಾಬುಡನ್‌ಗಿರಿಯ ಯಾವುದಾದರೂ ಗವಿಯಲ್ಲಿ ಅವಿತುಕೊಳ್ಳುವಂತೆ ಮಾಡಿದರೆ ಸ್ವಲ್ಪ ಉಸಿರಾಟ ಸಾಧ್ಯವಾಗಬಹುದು. ನಮ್ಮ ರಾಜ್ಯಕ್ಕೆ ಇಷ್ಟು ಗಾಢವಾದ ಕಳಂಕ ತಟ್ಟಬಾರದಿತ್ತು. ಅದನ್ನು ಅಳಿಸಿಹಾಕಲು ಪ್ರಬುದ್ಧ ಜನತೆಗೆ ಮಾತ್ರ ಸಾಧ್ಯವಿದೆ. ಹೀಗಿರುವಾಗ ಮೂರೂ

೮ನೇ ಪುಟಕ್ಕೆ




ಸಂಪುಟ-೯ ಸಂಚಿಕೆ-೪ ನವೆಂಬರ್ ೨೦೦೭

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com



# ಕರ್ನಾಟಕಕ್ಕೊಂದು ಪುಸ್ತಕ ನೀತಿ

ನಮ್ಮ ರಾಜ್ಯವು ಕರ್ನಾಟಕವೆಂಬ ಹೆಸರಿನಲ್ಲಿ ಐವತ್ತು ವರ್ಷಗಳನ್ನು ಕಳೆದಿದೆ. ಅದಕ್ಕೆ ಮುನ್ನ ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿದ್ದ ರಾಜ್ಯ ನಮ್ಮದು. ನಮ್ಮ ಜನರ ಸರ್ವತೋಮುಖ ಏಳಿಗೆಗೆ ಶ್ರಮಿಸುವುದಾಗಿ ಈಗ ಐವತ್ತು ವರ್ಷಗಳಿಂದ ದೊಡ್ಡ ದೊಡ್ಡ ನಾಯಕರು ಸಾರ್ವಜನಿಕವಾಗಿ ಹೇಳಿಕೆಗಳನ್ನು ಕೊಡುತ್ತಾ ಬಂದಿದ್ದಾರೆ. ಪ್ರಗತಿಯು ಗಮನಾರ್ಹವಾಗಿರುವ ವಿಭಾಗಗಳು ನಮ್ಮಲ್ಲಿ ಅನೇಕವಿವೆ. ಆದರೆ ಇನ್ನೂ ಆಗಬಹುದಾಗಿದ್ದುದು ಮತ್ತು ಆಗಬೇಕಾದದ್ದು ಬಹಳಷ್ಟಿದೆ. ಶಿಕ್ಷಣ ಕ್ಷೇತ್ರದಲ್ಲಿ ಕನ್ನಡವು ಅನುಭವಿಸಿರುವ ಹಿನ್ನಡೆ ಅನೂಹ್ಯವಾದುದು. ನಮಗೊಂದು ಶಿಕ್ಷಣ ನೀತಿ ಇದೆಯೇ ಎಂಬ ಅನುಮಾನ ಮೂಡುವ ಸಂದರ್ಭ ನಮ್ಮದು. ಕೃಷಿ ನೀತಿ, ವಿಜ್ಞಾನ-ತಂತ್ರಜ್ಞಾನ ನೀತಿ, ಉದ್ಯಮ ನೀತಿ, ಹೀಗೆ ಯಾವಾವುದೋ ನೀತಿಗಳ ಪ್ರತಿಪಾದನೆ ಆಗಿಂದಾಗ್ಗೆ ಆಗುತ್ತಿರುತ್ತದೆ. ಆದರೆ ಕನ್ನಡವನ್ನು ಗಟ್ಟಿಯಾಗಿ ನೆಲವೂರುವಂತೆ ಮಾಡಬಹುದಾದ ನಿರ್ದಿಷ್ಟ ಶಿಕ್ಷಣ ನೀತಿ ಪ್ರಾಯೋಗಿಕವಾಗಿ ನಮ್ಮಲ್ಲಿ ಮೂಡಿಬಂದಿಲ್ಲ. ಅದಕ್ಕೆ ಪೂರಕವಾದ ಪುಸ್ತಕ ನೀತಿಯಂತೂ ಹೇಳ ಹೆಸರಿಲ್ಲದೆ ಅದೃಶ್ಯವಾಗಿ ಅನೇಕ ಅನೀತಿಗಳ ಆಗರವಾಗಿ ಬೆಳೆದು ನಿಂತಿದೆ. ಈಗಲಾದರೂ ಜನಪರ ಮತ್ತು ಭಾಷಾಪರವಾದ ಒಂದು ಪುಸ್ತಕ ನೀತಿಯನ್ನು ಅನುಷ್ಠಾನಕ್ಕೆ ತರುವುದು ಅವಶ್ಯಕವೆನಿಸುತ್ತದೆ.

ಯಾವುದೇ ಭಾಷೆಯ ಪುಸ್ತಕವಾಗಲಿ, ಅದು ಮೌಲ್ಯಯುತವಾಗಿದ್ದರೆ ದೇಶ-ಕಾಲಗಳನ್ನು ಮೀರಿ ಜನರೊಡನೆ ಸಂವಾದ ಬೆಳೆಸುತ್ತದೆ. ಅದು ಸಾಹಿತ್ಯ ಪ್ರಕಾರಕ್ಕೆ ಮಾತ್ರವೇ ಅನ್ವಯಿಸುವುದಿಲ್ಲ. ಒಬ್ಬ ವಿಜ್ಞಾನಿ, ಸಮಾಜ ಶಾಸ್ತ್ರಜ್ಞ, ವೈದ್ಯ ಅಥವಾ ಇತಿಹಾಸಕಾರ ಕೂಡ ವರ್ತಮಾನದೊಡನೆ ಸಂಭಾಷಿಸಲು ಸಾಧ್ಯವಿದೆ. ವೈಯಕ್ತಿಕ ಸಂಪರ್ಕದ ಅಭಾವದಲ್ಲಿ ಸಹ ಲೇಖಕ ಮತ್ತು ಓದುಗರ ನಡುವೆ ಅತ್ಯಂತ ಅರ್ಥವತ್ತಾದ ಸಂಪರ್ಕವನ್ನು ಕಲ್ಪಿಸಿಕೊಡುವುದೆಂದರೆ ಪುಸ್ತಕ ಎನ್ನಬಹುದು. ಸಂವಹನ ಮಾಧ್ಯಮವಾಗಿ ಪುಸ್ತಕಕ್ಕಿರುವ ಮಹತ್ವವನ್ನು ಎಷ್ಟು ಪ್ರಶಂಸಿಸಿದರೂ ಸಾಲದು. ಏಕಕಾಲಕ್ಕೆ ಅದು ಗುರು ಮತ್ತು ಮಿತ್ರನಂತೆ ಕಾರ್ಯ ನಿರ್ವಹಿಸುತ್ತದೆ. ಪ್ರಜ್ಞೆ ಮತ್ತು ಅನುಭವಗಳ ವಿಸ್ತರಣೆಗೆ ಪುಸ್ತಕದ ಕೊಡುಗೆ ಅನನ್ಯವಾದುದು. ಪುಸ್ತಕವನ್ನು ಗೌರವಿಸುವುದೆಂದರೆ ನಮ್ಮ ಸಂಸ್ಕೃತಿಯ ಒಂದು ಅತಿ ಮುಖ್ಯವಾದ ಭಾಗವನ್ನು ನಮ್ಮಲ್ಲಿ ಮೇಳೈಸಿಕೊಳ್ಳುವುದೆಂದರ್ಥ. ಆದ್ದರಿಂದ ಪುಸ್ತಕಗಳನ್ನು ಅವಗಣನೆಗೆ ಗುರಿ ಮಾಡುವುದಾಗಲಿ, ಅವ್ಯವಹಾರಗಳಿಗೆ ತೊಡಗಿಸಿಕೊಳ್ಳುವುದಾಗಲಿ ಶ್ರೇಯಸ್ಕರವಲ್ಲ. ಈ ದೃಷ್ಟಿಯಿಂದ ಪುಸ್ತಕ ನೀತಿಯ ಪ್ರತಿಪಾದನೆ ಮಾಡುವುದು ಸೂಕ್ತವಾಗಿರುತ್ತದೆ.

ಮೂಲಭೂತವಾಗಿ ಓದುಗರೇ ಪುಸ್ತಕಗಳ ಕೇಂದ್ರಬಿಂದುಗಳು. ಆಯಾ ಕಾಲದ ಪ್ರಭುತ್ವ ಅಥವಾ ಸರ್ಕಾರಗಳ ಬೆಂಬಲವಿಲ್ಲದೆಯೂ ಓದುಗರಿಗೆ ಪುಸ್ತಕಗಳನ್ನು ತಲುಪಿಸುವ ಶ್ಲಾಘನೀಯ ಕೆಲಸವನ್ನು ವ್ಯಕ್ತಿಗಳು ಹಾಗೂ ಸಂಸ್ಥೆಗಳು ಮಾಡುತ್ತಲೇ ಬಂದಿವೆ. ಇಂದಿಗೂ ಸಹ ಕೆಲವು ಅಪ್ರಾಮಾಣಿಕ ಸಂಸ್ಥೆಗಳನ್ನು ಹೊರತುಪಡಿಸಿದರೆ ಈ ಮಹತ್ಕಾರ್ಯವನ್ನು ಮುಂದುವರೆಸುತ್ತಿರುವ ಪ್ರಕಾಶನ ಸಂಸ್ಥೆಗಳು ಅನೇಕವಿವೆ. ಅವಿಲ್ಲದಿದ್ದರೆ ಪುಸ್ತಕ ಮತ್ತು ಓದುಗರ ನಡುವಣ ಸಂಬಂಧ ಎಷ್ಟು ನಗಣ್ಯವಾಗಿರುತ್ತಿತ್ತೆಂದು ತಿಳಿಯುವುದು ಸುಲಭ. ಈ ಕಾರಣದಿಂದ ಕೂಡ ಒಂದು ಖಚಿತವಾದ ವೈಜ್ಞಾನಿಕ ಪುಸ್ತಕ ನೀತಿ ನಮಗೆ ತುರ್ತಾಗಿ ಬೇಕಾಗಿದೆ. ಆ ನೀತಿಯನ್ನು ನಿರೂಪಿಸುವಾಗ ಕನ್ನಡಕ್ಕೆ ಏನೆಲ್ಲಾ ಬೇಕಾಗಿದೆಯೆಂಬುದು ಆದ್ಯತೆಯ ವಿಷಯವಾಗಬೇಕು. ನಮಗೆ ಪಂಪನಿಂದ ಹಿಡಿದು ಇಂದಿನವರೆಗಿನ ಎಲ್ಲ ಸಾಹಿತಿಗಳೂ ಬೇಕು, ನಿಜ; ಆದರೆ ಪುಸ್ತಕಗಳೆಂದರೆ ಅವಷ್ಟೇ ಅಲ್ಲ. ಅವುಗಳಷ್ಟರಿಂದಲೇ ಕನ್ನಡದ ವಿಶ್ವವು ಸಮೃದ್ಧವಾಗುವುದಿಲ್ಲ. ಎಲ್ಲ ಜ್ಞಾನಶಾಖೆಗಳನ್ನೂ ಪರಿಚಯಿಸುವ, ವಿಸ್ತರಿಸುವ ಪುಸ್ತಕಗಳು ನಮಗೆ ಬೇಕು. ಅದು ಭೂಗರ್ಭಶಾಸ್ತ್ರವಿರಬಹುದು, ಉತ್ಖನನ ಶಾಸ್ತ್ರವಿರಬಹುದು ಅಥವಾ ಬೇರಾವುದೇ ಇರಬಹುದು. ಇವೆಲ್ಲವನ್ನೂ ವ್ಯಾಪಿಸಿದಂತೆ ನಮ್ಮ ಭಾಷೆಯಲ್ಲಿ ಪುಸ್ತಕಗಳು ಬರಬೇಕು, ಬರುವಂತೆ ಮಾಡಬೇಕು ಮತ್ತು ಬಂದವನ್ನು ಜನರಿಗೆ ತಲುಪಿಸಬೇಕು, ಅವುಗಳನ್ನು ಅಧ್ಯಯನ ಮಾಡಿ ವ್ಯಕ್ತಿತ್ವವನ್ನು ವಿಕಾಸಗೊಳಿಸಿಕೊಳ್ಳುವ ಸಾಮರ್ಥ್ಯವನ್ನು ಎಲ್ಲರಲ್ಲೂ ತುಂಬಬೇಕು. ಪುಸ್ತಕಗಳಲ್ಲಿ ಸಹಜವಾಗಿಯೇ ಸಂಕೀರ್ಣತೆ ಇರುತ್ತದೆ; ಏಕಮುಖವಾದ ಅಭಿಪ್ರಾಯ ಮಂಡನೆ ಇರುವುದಿಲ್ಲ ಮತ್ತು ಇರಬಾರದು ಕೂಡ. ಯಾರನ್ನೇ ಆಗಲಿ ದ್ವೇಷಿಸುವಂತಹ ಅಥವಾ ಯಾರಿಗೇ ಆಗಲಿ ಅಸಹ್ಯ ಹುಟ್ಟಿಸುವಂತಹ ವಿಷಯಗಳನ್ನು ಹಾಗೂ ಶೈಲಿಯನ್ನು ಹೊರತುಪಡಿಸಿ ಪುಸ್ತಕವು ವಿಭಿನ್ನ ನೆಲೆಗಳಲ್ಲಿ ಕಂಗೊಳಿಸುವಂತಿರುವುದು ಅದರ ಸಲ್ಲಕ್ಷಣ. ಯಾವ ಲೇಖಕರು ಇದನ್ನು ಉಪೇಕ್ಷಿಸುತ್ತಾರೋ ಅವರು ಪುಸ್ತಕದ ಮುಖಕ್ಕೆ ಮಸಿ ಬಳಿಯುತ್ತಾರೆ ಎನ್ನಬಹುದು. ಅಂದರೆ, ಪುಸ್ತಕಗಳಿಗೆ ವೈವಿಧ್ಯಮಯವಾದ ಅಂತರಂಗಗಳಿವೆ; ಅವೆಲ್ಲವನ್ನೂ ಓದುಗರು ಪುರಸ್ಕರಿಸುತ್ತಾರೋ ಇಲ್ಲವೋ ಎಂಬುದು ಬೇರೆ ಪ್ರಶ್ನೆ, ಆದರೆ ಅವೆಲ್ಲವನ್ನೂ ಅವರು ಪರಿಚಯಿಸಿಕೊಳ್ಳುವುದು ಆರೋಗ್ಯಕರ.

ನೀತಿಯೆಂದರೆ ಖಾಸಗಿಯಾಗಿ ಒಬ್ಬ ವ್ಯಕ್ತಿ ಅಂಗೀಕರಿಸುವ ಸಂಹಿತೆಯಲ್ಲ. ಅದು ಒಂದು ಸಮೂಹದ ಕಾರ್ಯ ಸೂಚಿ. ಆದ್ದರಿಂದ ಅನಿವಾರ್ಯವಾಗಿ ಸರ್ಕಾರವು ಅದರಲ್ಲಿ ಪಾಲುದಾರನಾಗುತ್ತದೆ, ಜವಾಬ್ದಾರಿ ಹೊರಬೇಕಾಗುತ್ತದೆ. ಎಂತಹ ಪುಸ್ತಕ, ಯಾರಿಗೆ ಪುಸ್ತಕ ಮತ್ತು ಪುಸ್ತಕವನ್ನು ಓದುಗರ ಕೈಗಿಡುವುದು ಹೇಗೆ, ಎಂಬುದೆಲ್ಲಾ ಪುಸ್ತಕ ನೀತಿಯ ಅವಿಭಾಜ್ಯ ಅಂಗಗಳು. ಖಾಸಗಿ ಪ್ರಕಾಶಕರಿಗೆ ಮತ್ತು ವಿತರಕರಿಗಿರಬೇಕಾದ ನೀತಿ ಒಂದೇ : ಅಗತ್ಯವಿರುವವರಿಗೆ ಪುಸ್ತಕಗಳನ್ನು ಸೂಕ್ತ ಬೆಲೆಗೆ ತಲುಪಿಸುವುದು ಮತ್ತು ಸರ್ಕಾರ ಹಾಗೂ ಅದರ ಅಂಗ ಸಂಸ್ಥೆಗಳಿಗೆ ಪುಸ್ತಕಗಳನ್ನು ಸರಬರಾಜು ಮಾಡುವಾಗ ಯಾವುದೇ ಅವ್ಯವಹಾರದಲ್ಲಿ ತೊಡಗದಿರುವುದು. ಸರ್ಕಾರದ ದೃಷ್ಟಿಯಿಂದ ಪುಸ್ತಕ ನೀತಿಯಲ್ಲಿ ಹಲವು ಅಂಶಗಳಿರುತ್ತವೆ. ಸ್ಥೂಲವಾಗಿ ಅವನ್ನು ಹೀಗೆ ನಮೂದಿಸಬಹುದು : (ಅ) ಇಡೀ ರಾಜ್ಯದ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಆಯಾಮಗಳನ್ನು ಗಣನೆಗೆ ತೆಗೆದುಕೊಂಡು ಎಲ್ಲ ಪ್ರಕಾರಗಳ ಪುಸ್ತಕಗಳನ್ನು ಹೊರತರುವುದು ಮತ್ತು ಖಾಸಗಿಯವರು ಹೊರತರುವ ಪುಸ್ತಕಗಳನ್ನು ಸೂಕ್ತ ರೀತಿಯಲ್ಲಿ ಮತ್ತು ಪ್ರಮಾಣದಲ್ಲಿ ಗ್ರಂಥಾಲಯಗಳ ಮೂಲಕ ಓದುಗರಿಗೆ ತಲುಪಿಸುವುದು; (ಆ) ಒಳ್ಳೆಯ ಮತ್ತು ಮೌಲಿಕವಾದ ಪುಸ್ತಕಗಳನ್ನು ಹೊರತರುವ ಖಾಸಗಿ ಪ್ರಕಾಶಕರಿಗೆ ಸಾಧ್ಯವಾದಷ್ಟು

ಬೆಂಬಲ ನೀಡುವುದು ಮತ್ತು ಅದರಲ್ಲಿ ತಾರತಮ್ಯ ಮಾಡದಿರುವುದು; (ಇ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅಕಾಡೆಮಿಗಳು, ಪುಸ್ತಕ ಪ್ರಾಧಿಕಾರ, ವಿಶ್ವವಿದ್ಯಾಲಯಗಳ ಪ್ರಸಾರಾಂಗಗಳು ಮುಂತಾದ ಸರ್ಕಾರಿ ಹಾಗೂ ಅರೆ ಸರ್ಕಾರಿ ಸಂಸ್ಥೆಗಳ ಪ್ರಕಾಶನಗಳಲ್ಲಿ ಪುನರಾವರ್ತನೆ ಉಂಟಾಗದಂತೆ ಸಮನ್ವಯ ಸಮಿತಿಗಳನ್ನು ರಚಿಸಿ ಅಥವಾ ಬೇರಾವುದೇ ಕ್ರಮಗಳಿಂದ ಉಸ್ತುವಾರಿ ವಹಿಸುವುದು; ಏಕೆಂದರೆ, ನಮ್ಮ ರಾಜ್ಯವು ದುಂದುವೆಚ್ಚ ಮಾಡುವಷ್ಟು ಸಂಪದ್ಭರಿತವಾಗಿಲ್ಲ. (ಈ) ಕೇವಲ ಸಾಹಿತ್ಯ ಕೃತಿಗಳನ್ನಲ್ಲದೆ ಬೇರೆ ಶಿಸ್ತುಗಳಲ್ಲಿ ಅಧ್ಯಯನಯೋಗ್ಯವಾದ ಗ್ರಂಥಗಳನ್ನು ಹೊರತರುವುದು; ಕನ್ನಡವು ಶ್ರೀಮಂತವಾಗಿ ಸ್ವಾಯತ್ತ ಬೌದ್ಧಿಕ ಆಗರವಾಗಬೇಕಾದರೆ ಇದು ಅತ್ಯಗತ್ಯ. (ಉ) ಸರ್ಕಾರಿ ಸಂಸ್ಥೆಗಳ ಎಲ್ಲ ಪ್ರಕಾಶನಗಳನ್ನು ರಾಜ್ಯದಲ್ಲೇ ಮುದ್ರಣ ಮಾಡುವುದು ಅಥವಾ ಮಾಡಿಸುವುದು. ಪುಟಕ್ಕೆ ಇಂತಿಷ್ಟು ಬೆಲೆಯೆಂದು ನಿಗದಿಗೊಳಿಸಿಯಾದರೂ ಮುದ್ರಣವನ್ನು ರಾಜ್ಯದಲ್ಲೇ ಆಗುಗೊಳಿಸಬೇಕು ಮತ್ತು ಸ್ಖಾಲಿತ್ಯರಹಿತವಾಗಿ ಹಾಗೂ ಅಂದವಾಗಿ ಮುದ್ರಿಸಬೇಕು. (ಊ) ಪಠ್ಯಪುಸ್ತಕಗಳು, ಮನರಂಜನೆ ನೀಡುವ ಸಾಹಿತ್ಯ ಮತ್ತು ಇತರೆ ವೈಚಾರಿಕ-ವೈಜ್ಞಾನಿಕ-ಸಂಶೋಧನಾತ್ಮಕ ಕೃತಿಗಳೆಂದು ಸಾಮಾನ್ಯವಾಗಿ ಪುಸ್ತಕಗಳನ್ನು ವರ್ಗೀಕರಿಸಬಹುದು. ಅವುಗಳ ಪೈಕಿ ಮೂರನೆಯ ಗುಂಪಿನ ಪುಸ್ತಕಗಳಿಗೆ ಮಾರುಕಟ್ಟೆ ವಿಸ್ತಾರವಾಗಿರುವುದಿಲ್ಲವಾದ್ದರಿಂದ ಅವುಗಳನ್ನು ಹೊರತರಲು ಮತ್ತು ವಿತರಿಸಲು ಸರ್ಕಾರವು ಹೆಚ್ಚಿನ ಮುತುವರ್ಜಿ ವಹಿಸಬೇಕು. ಶೈಕ್ಷಣಿಕ ಅಗತ್ಯಗಳನ್ನು ಪೂರೈಸಲು ಇದು ಅಗತ್ಯ. (ಋ) ಸಗಟು ಖರೀದಿಯಲ್ಲಿ ಅವ್ಯವಹಾರ ಮತ್ತು ತಾರತಮ್ಯವಿಲ್ಲದಂತೆ ವ್ಯವಸ್ಥೆಯನ್ನು ಪುನಾರಚಿಸಬೇಕು. ಅದಕ್ಕಾಗಿ ಗಮನಿಸಬೇಕಾದ ಅಂಶಗಳಲ್ಲಿ ಇವು ಪ್ರಮುಖವಾದುವು : (i) ಆಯ್ಕೆಯು ಪುಸ್ತಕಗಳದ್ದು, ಪ್ರಕಾಶಕರದ್ದಲ್ಲ. ಆದ್ದರಿಂದ ಒಂದೇ ಪ್ರಕಾಶನದ ಹಲವು ಪುಸ್ತಕಗಳನ್ನು ಖರೀದಿಸಬಹುದು ಮತ್ತು ಯಾವುದೋ ಪ್ರಕಾಶನದ ಯಾವ ಪುಸ್ತಕವನ್ನೂ ಖರೀದಿಸದಿರಬಹುದು. ಪುಸ್ತಕದ ಅಗತ್ಯ ಮತ್ತು ಗುಣಮಟ್ಟ ಮುಖ್ಯವೇ ವಿನಾ ಪ್ರಕಾಶಕರ ಹಿನ್ನೆಲೆ ಮತ್ತು ಖ್ಯಾತಿ ಪ್ರಸ್ತುತವಲ್ಲ. ಒಬ್ಬ ಪ್ರಕಾಶಕರಿಗೆ ಇಂತಿಷ್ಟೇ ಹಣವೆನ್ನುವ ಸೂತ್ರವನ್ನು ಪರಿಷ್ಕರಿಸುವುದು ಅನಿವಾರ್ಯ. (ii) ಒಂದೇ ಪುಸ್ತಕವನ್ನು ಎರಡು ಶೀರ್ಷಿಕೆಗಳಲ್ಲಿ ತರುವ ಜಾಣತನಕ್ಕೆ ಮಾರುಹೋಗಕೂಡದು. ಕುಮಾರವ್ಯಾಸ ಭಾರತವೆಂದು ಒಮ್ಮೆ, ಗದುಗಿನ ನಾರಣಪ್ಪನ ಭಾರತವೆಂದು ಒಮ್ಮೆ ಮುದ್ರಣ ಮಾಡಬಹುದಾದ ಪ್ರಕಾಶಕರಿಗೆ ಸರ್ಕಾರವು ಛೀಮಾರಿ ಹಾಕಬೇಕೇ ವಿನಾ ಅಂತಹ ಪುಸ್ತಕಗಳನ್ನು ಕೊಳ್ಳಬಾರದು. (iii) ಒಂದೇ ಪ್ರಕಾಶನ ಸಂಸ್ಥೆಯು ಹಲವು ಹೆಸರುಗಳಲ್ಲಿ ವ್ಯವಹಾರ ನಡೆಸುವುದನ್ನು ಸರ್ವಥಾ ತಡೆಗಟ್ಟಬೇಕು. 'ಅಧಿಕೃತ ವಿತರಕರು' ಎಂಬ ಹೆಸರಿನಲ್ಲಿ ನಡೆಯಬಹುದಾದ ಮಾರಾಟದ ಕುತಂತ್ರಗಳನ್ನು ನಿಷೇಧಿಸಬೇಕು. ಪುಸ್ತಕಗಳನ್ನು ಪ್ರಕಾಶಕರಿಂದ ನೇರವಾಗಿ ಏಕಗವಾಕ್ಷಿ ಪದ್ಧತಿಯಲ್ಲಿ ಕೊಳ್ಳುವುದು ಇದಕ್ಕೆ ಪರಿಹಾರ ಒದಗಿಸಬಹುದು. ಪ್ರಭಾವಿ ಶಕ್ತಿಗಳಿಗೆ ಕಡಿವಾಣ ಹಾಕಿ ಸಾರ್ವಜನಿಕ ಹಣವು ಪೋಲಾಗುವುದನ್ನು ಈ ವಿಧಾನದಿಂದ ತಡೆಗಟ್ಟಬೇಕು. ಪ್ರಕಾಶಕರು ಮಾರುಕಟ್ಟೆಯಲ್ಲಿ ನೇರವಾಗಿ ಓದುಗರಿಗೆ ಪುಸ್ತಕಗಳನ್ನು ಮುಟ್ಟಿಸಲು ವ್ಯವಸ್ಥಿತವಾದ ಪದ್ಧತಿ ಇಟ್ಟುಕೊಂಡಿದ್ದಾರೆಂಬುದನ್ನು ಖಚಿತಪಡಿಸಿಕೊಳ್ಳಬೇಕು. ಕೇವಲ ಗ್ರಂಥಾಲಯಗಳಿಗೆ ತುಂಬಲೆಂದೇ ಪುಸ್ತಕಗಳನ್ನು ಪ್ರಕಟಿಸುವ ಪ್ರಕಾಶಕರನ್ನು ದೂರವಿಡಬೇಕು. (iv) ಕೊಳ್ಳಲಾಗುವ ಪುಸ್ತಕಗಳಲ್ಲಿ ಕರಡು ತಿದ್ದುವಿಕೆಯು ಸಮಾಧಾನಕರವಾಗಿ ನಡೆದಿದೆಯೆಂಬುದನ್ನು ಖಚಿತಪಡಿಸಿಕೊಳ್ಳಬೇಕು. ಭಾಷೆಯನ್ನು ಯದ್ವಾತದ್ವಾ ಬಳಸುವ ಕೆಟ್ಟ ಪದ್ಧತಿಯನ್ನು ಇದರಿಂದ ಸ್ವಲ್ಪಮಟ್ಟಿಗೆ ನಿವಾರಿಸಬಹುದು.

ಸಂಕ್ಷಿಪ್ತವಾಗಿ ಹೇಳುವುದಾದರೆ, ಸರ್ಕಾರದ ಹಂಗಿಲ್ಲದೆಯೂ ಅನೇಕ ಪ್ರಕಾಶನ ಸಂಸ್ಥೆಗಳು ಕನ್ನಡ ಪುಸ್ತಕಗಳನ್ನು ಓದುಗರಿಗೆ ತಲುಪಿಸುತ್ತಿವೆ; ಆದಾಗ್ಯೂ, ಸರ್ಕಾರಕ್ಕೆ ಹೆಚ್ಚಿನ ಪಾತ್ರವೊಂದಿದೆ. ಓದುಗರಲ್ಲಿ ಅಭಿರುಚಿಯನ್ನು ಬೆಳೆಸುವುದು, ಮುಂಚೂಣಿ ಪುಸ್ತಕಗಳನ್ನು ಪರಿಚಯಿಸುವುದು, ಮತ್ತು ಸಾರ್ವಜನಿಕ ಹಣದ ದುರ್ಬಳಕೆಯನ್ನು ತಪ್ಪಿಸುವುದು ಸರ್ಕಾರದ ಮುಖ್ಯ ಜವಾಬ್ದಾರಿ. ಅದು ಪುಸ್ತಕ ನೀತಿಯ ಅವಿಭಾಜ್ಯ ಅಂಗವಾಗಿರಬೇಕು. ನಮ್ಮ ರಾಜ್ಯದ ಶೈಕ್ಷಣಿಕ, ಬೌದ್ಧಿಕ ಮತ್ತು ಸಾಂಸ್ಕೃತಿಕ ವಿಕಾಸಕ್ಕೆ ಪುಸ್ತಕ ನೀತಿಯು ಪೂರಕವಾಗಿರಬೇಕಾದ್ದು ಅವಶ್ಯಕ. ಸುವರ್ಣ ಕರ್ನಾಟಕದ ಸಂಭ್ರಮದ ಸಂದರ್ಭದಲ್ಲಿ ಅಂತಹ ಒಂದು ನೀತಿಯು ಜಾರಿಗೆ ಬರಲೆಂದು ಆಶಿಸಬೇಕಾಗಿದೆ.

## ಬುಷ್‌ಮನ್ – ಮನಮೋಹನ್ ಸಖ್ಯ

ನೈಜೀರಿಯಾಕ್ಕೆ ಹೋದರೂ ಬೆಂಬಿಡದೆ ಪ್ರಧಾನಿ ಮನಮೋಹನ್ ಸಿಂಗರನ್ನು ಅಮೆರಿಕಾದ ಅಧ್ಯಕ್ಷ ದೂರವಾಣಿಯಲ್ಲಿ ಸಂಪರ್ಕಿಸಿರುವುದು ಅಸಹಜವಾದ ವರ್ತನೆ. ಒಂದು ದಿನ ತಡೆದು ದೆಹಲಿಗೆ ಹಿಂದಿರುಗಿದ ನಂತರ ಅವರೊಡನೆ ಸಂಭಾಷಣೆ ನಡೆಸುವುದು ಸಭ್ಯತೆಯ ನಡವಳಿಕೆಯಾಗುತ್ತಿತ್ತು. ಪರಮಾಣು ಒಪ್ಪಂದವು ನಮ್ಮ ದೇಶಕ್ಕೆ ಮಾರಕವೆಂದು ಎಷ್ಟು ತಿಳಿಯ ಹೇಳಿದರೂ ಕೇಳದೆ, ಬುಷ್-ಭೂತವನ್ನು ಆಲಂಗಿಸಲು ಕಾತುರರಾಗಿರುವ ಮನಮೋಹನ ಸಿಂಗ್ ಅವರಿಗೆ ದೇಶಕ್ಕಿಂತಲೂ ಅಮೆರಿಕಾದ ವಾಣಿಜ್ಯ ವ್ಯವಹಾರಗಳ ಪ್ರಭುಗಳ ಹಿತವು ಆದ್ಯತೆಯ ವಿಷಯವಾಗಿದೆ. ಇಂತಹ ಪ್ರಧಾನಿ ರಾಜೀನಾಮೆ ನೀಡಿದರೆ ಕಣ್ಣೀರು ಸುರಿಸಬೇಕಾದ ಪ್ರಸಂಗವೇನೂ ಇಲ್ಲ. ಬುಷ್ ಉದ್ಧಟತನಕ್ಕೆ ನಿದರ್ಶನವೇನಾದರೂ ಬೇಕಾಗಿದ್ದರೆ ಅಧ್ಯಕ್ಷ ಕ್ಯಾಸ್ಟ್ರೋ ಬಗ್ಗೆ ಆತನಾಡಿರುವ ಮಾತನ್ನು ನೋಡಬಹುದು. ಐವತ್ತು ವರ್ಷಗಳ ಕಾಲ ಕ್ಯೂಬಾದಲ್ಲಿ ದುರಾಡಳಿತ ನಡೆಸಿದ್ದು ಕ್ಯಾಸ್ಟ್ರೋ ಎಂದಿರುವ ಬುಷ್ ಪ್ರಕಾರ ಕ್ಯಾಸ್ಟ್ರೋ ಇಷ್ಟು ವರ್ಷಗಳಲ್ಲಿ ಒಮ್ಮೆಯೂ ತಮ್ಮ ದೇಶದ ಜನತೆಯೊಡನೆ ಸಂವಾದ ನಡೆಸಲಿಲ್ಲವಂತೆ! ಇಂತಹ ಅಪ್ಪಟ ಸುಳ್ಳು ಒದರುವ ಬುಷ್ ನಮ್ಮ ದೇಶಕ್ಕೆ ಪರಮ ಮಿತ್ರನೆಂದು ಮನಮೋಹನ ಸಿಂಗ್ ಭಾವಿಸುತ್ತಾರೆ.

ಪರಮಾಣು ಒಪ್ಪಂದವನ್ನು ಕೈಬಿಡುವ ಬದಲು ಒಂದಷ್ಟು ಕಾಲ ಅದನ್ನು ಮುಂದೂಡಿ ನಂತರ ಹಿಂಬಾಗಿಲಿನಿಂದ ಬರಮಾಡಿಕೊಳ್ಳುವ ಉದ್ದೇಶ ಪ್ರಧಾನಿಯವರದ್ದು. ಈ ತಂತ್ರವನ್ನು ಸ್ವತಃ ಕೋಂಡಲಿಸ್ಸ ರೈಸ್ ರೂಪಿಸಿರುವುದಾಗಿ ತಿಳಿಯ

ಮುಂದಿನ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

*ಹಿಂದಿನ ಪುಟದಿಂದ*

ಬರುತ್ತದೆ. ಎಡ ಪಕ್ಷಗಳು ನಮ್ಮ ದೇಶವನ್ನು ಅಮೆರಿಕಾದ ಕಪಿಮುಷ್ಟಿಯ ಹಿಡಿತಕ್ಕೆ ಹೋಗದಂತೆ ತಡೆಯುತ್ತಿರುವುದು ಏನೋ ಮಹಾನ್ ಅಪರಾಧವೆಂಬಂತೆ ಬುಷ್ ಪಡೆಯು ನಮ್ಮನ್ನು ತೆಗಳುತ್ತಿರುವಾಗ ಅಮೆರಿಕಾದ ಆಣತಿಯನ್ನು ಶಿರಬಾಗಿ ನಡೆಸಿ ಕೊಡುವ ನಮ್ಮ ಮಾಧ್ಯಮಗಳ ಒಂದು ವಿಭಾಗ ಸಹ ತೆಗಳಿಕೆಗೆ ದನಿಗೂಡಿಸುತ್ತಿದೆ. ಅಮೆರಿಕಾದ ಪ್ರಜಾಪ್ರತಿನಿಧಿ ಸಭೆಯ ಸದಸ್ಯ ಗ್ಯಾರಿ ಆಕರ್ಮನ್ ಎಂಬುವನು ನಮ್ಮ ಎಡಪಕ್ಷಗಳನ್ನು ಹೀಯಾಳಿಸಿ ಆ ''ಅಲ್ಪಸಂಖ್ಯಾತ ಪಕ್ಷಗಳಿಗೆ'' ಹೆದರಬಾರದೆಂದು ಮನಮೋಹನ ಸಿಂಗರ ಬೆಂಗಾವಲಿಗೆ ನಿಂತಿದ್ದಾನೆ. ಅರ್ಜುನ ಸ್ವರೂಪದ ಪ್ರಧಾನಿಗೆ ಆತ ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನೇ ಇರಬೇಕು! ಭಾರತದ ನೈಜ ಮಿತ್ರನೆಂದು ಆತನನ್ನು ನಮ್ಮ ಕೆಲವು ಪತ್ರಿಕೆಗಳು ಹೊಗಳುತ್ತಿರುತ್ತವೆ. ಅಂತಹ ಮಿತ್ರನಿದ್ದರೆ ಸಾಕು, ಇನ್ನು ಬೇರೆ ಶತ್ರು ಏಕೆ ತಾನೆ ಬೇಕು, ಎಂದು ಅದಕ್ಕೆ ಪ್ರತಿಕ್ರಿಯಿಸಬೇಕಾಗಿದೆ. ಆಕರ್ಮನ್ ಭಾರತ-ಅಮೆರಿಕಾ ವ್ಯಾಪಾರ ವಹಿವಾಟು ಸಮಿತಿಯನ್ನುದ್ದೇಶಿಸಿ ಮಾತನಾಡುತ್ತಿದ್ದಾಗ ನಮ್ಮ ದೇಶದ ಉದ್ಯಮಿಗಳು ಹಾಗೂ ವ್ಯಾಪಾರಿಗಳು ಉಪಸ್ಥಿತರಿದ್ದರು. ಆದರೆ ಅವರ ಗಂಟಲು ಹೂತುಹೋಗಿತ್ತಾದ್ದರಿಂದ ಆತನ ದರ್ಪದ ಮಾತುಗಳಿಗೆ ಅವರು ಪ್ರತಿಕ್ರಿಯಿಸಲಿಲ್ಲ.

''ಪರಮಾಣು ಒಪ್ಪಂದವು ಭಾರತಕ್ಕೆ ಮಾತ್ರವೇ ಏಕೆ, ಇಡೀ ವಿಶ್ವಕ್ಕೆ ಒಳ್ಳೆಯದು ಮಾಡುತ್ತದೆಂದು'' ಗ್ಯಾರಿ ಮಹಾಶಯ ಹೇಳಿದ್ದರ ಅರ್ಥ ಇದು : ''ಅಮೆರಿಕಾದ ಉದ್ಯಮಿಗಳಿಗೆ ಇದರಿಂದ ಅತಿ ಹೆಚ್ಚಿನ ಲಾಭವಿದೆ; ಭಾರತ-ಅಮೆರಿಕಾ ಜೊತೆಗೂಡಿ ವಿಶ್ವದ ಬೇರೆ ಸ್ವತಂತ್ರ ರಾಷ್ಟ್ರಗಳನ್ನು ಬಗ್ಗುಬಡಿಯೋಣ, ಅದಕ್ಕೆ ಭಾರತ ಸಹಕಾರ ನೀಡಲಿ.'' ಮುಂದುವರೆದು ಆತನೆಂದ : ''ಪುರೋಗಾಮಿಗಳ ದೃಷ್ಟಿಕೋನದಿಂದ ಭಾರತ ಸರ್ಕಾರವು ಹಿಂಜರಿಯುವುದು ಬೇಡ. ಪ್ರಗತಿಯಲ್ಲಿ ಬೇಕಾದಷ್ಟು ಹಣವು ಲಾಭವಾಗಿ ಸಿಗುತ್ತದೆಂಬುದನ್ನು ಮರೆಯದಿರಿ. ಅಲ್ಪಸಂಖ್ಯಾತರ ದಬಾವಣೆಯಿಂದ ವಿಚಲಿತರಾಗಬೇಡಿ. ಒಳ್ಳೆಯ ಜನ ಅಧಿಕಾರದಲ್ಲಿದ್ದರೆ ಈ ಒಪ್ಪಂದಕ್ಕೆ ಬರುವ ಅಡಚಣೆಯನ್ನು ಎದುರಿಸುತ್ತಾರೆ.'' ಆಕರ್ಮನ್ ಒಳ್ಳೆಯವನಾದರೆ ಇನ್ನು ಕೆಟ್ಟವರನ್ನು ಎಲ್ಲಿಂದ ಹುಡುಕಿ ತರಲು ಸಾಧ್ಯ ! ಆಕರ್ಮಾನ್‌ಗೆ ಹಣದ ಗಂಟು ಹುಚ್ಚು ಹಿಡಿಸಿದೆ.

ಒಟ್ಟಿನಲ್ಲಿ ಹೇಳುವುದಾದರೆ ಆಕರ್ಮನ್ ಎಂಬ ಅಧಿಕ ಪ್ರಸಂಗಿಯು ನಮ್ಮ ದೇಶದ ಆಂತರಿಕ ಪ್ರಜಾಪ್ರಭುತ್ವವನ್ನು ಧಿಕ್ಕರಿಸುವ ಆಕ್ರಮಣಕಾರಿ ಮನೋಭಾವದವನು. ಪರಮಾಣು ಒಪ್ಪಂದವು ಅಮೆರಿಕಾದ ಹಲವು ಯೋಜನೆಗಳಿಗೆ ಸತ್ವ ತುಂಬುವಂತಹುದು. ಆದ್ದರಿಂದಲೇ ಅದನ್ನು ಕುರಿತಂತೆ ಇಷ್ಟೊಂದು ಕಾಳಜಿ ಮತ್ತು ಕಮ್ಯುನಿಸ್ಟರ ಮೇಲೆ ಕ್ರೋಧ. ಇದನ್ನರಿತು ಭಾರತ ಹೆಜ್ಜೆಗಳನ್ನಿಡಬೇಕು : ಇಂದಲ್ಲ, ಎಂದೆಂದಿಗೂ ಈ ಪರಮಾಣು ಒಪ್ಪಂದವು ನಮ್ಮ ದೇಶಕ್ಕೆ ಮಾರಕವಾದ್ದು. ಅಮೆರಿಕಾದ ಪಂಜರದಲ್ಲಿ ಮುದ್ದುಗಿಳಿ ಮನಮೋಹನ ಸಿಂಗರಿಗೆ ಸಂತೃಪ್ತಿ ಇರಬಹುದು, ಆದರೆ ಭಾರತದ ಜನತೆಗಲ್ಲ, ಜನತೆಯಿಂದ ಇಷ್ಟು ದೂರವಿರುವ ಪ್ರಧಾನಿ ನಮಗೆ ಬೇಕೆ ?




**ಕೃತಿಚೌರ್ಯ**

'ಹೊಸತು' ಪತ್ರಿಕೆಯ ಆಗಸ್ಟ್ ೨೦೦೭ರ ಸಂಚಿಕೆಯಲ್ಲಿ 'ಬ್ರಿಟಿಷರ ಎದೆ ನಡುಗಿಸಿದ ಅಲ್ಲೂರಿ ಸೀತಾರಾಮರಾಜು' ಎಂಬ ಲೇಖನವನ್ನು ನೋಡಿದೆ. ಲೇಖಕರ ಹೆಸರು ವೀರೇಶ್ ಬಳ್ಳಾರಿ ಎಂದಿದೆ. 'ವಿದ್ಯಾರ್ಥಿ ಸಂಕಲ್ಪ' ಪತ್ರಿಕೆಯ ಅಕ್ಟೋಬರ್ ೧೯೯೭ರ ಸಂಚಿಕೆಯಲ್ಲಿ ಇದೇ ಲೇಖನ ಪ್ರಕಟವಾಗಿದೆ. ಈ ಲೇಖನ ಮೂಲತಃ ತೆಲುಗಿನದ್ದಾಗಿದ್ದು, ನಾನು ವಿದ್ಯಾರ್ಥಿ ಸಂಕಲ್ಪದ ಸಂಪಾದಕ ಮಂಡಳಿಯಲ್ಲಿದ್ದಾಗ ನಾನು ಮತ್ತು ಇತರ ಸದಸ್ಯರು ಇದನ್ನು ಅನುವಾದ ಮಾಡಿ ಪ್ರಕಟಿಸಿದ್ದೆವು. ಈಗ ಅದೇ ಲೇಖನವನ್ನು 'ವೀರೇಶ್ ಬಳ್ಳಾರಿ'ಯವರು ತಮ್ಮ ಲೇಖನವೆಂದು ಅಲ್ಲಲ್ಲಿ ಅಲ್ಪಸ್ವಲ್ಪ ಬದಲಾವಣೆ ಮಾಡಿ ಕಳಿಸಿದ್ದಾರೆ. ವಿದ್ಯಾರ್ಥಿ ಸಂಕಲ್ಪದ ಲೇಖನದ ಜೆರಾಕ್ಸ್ ಪ್ರತಿಯನ್ನು ಇದರೊಂದಿಗೆ ಕಳಿಸುತ್ತಿದ್ದೇನೆ. ಕೃತಿಚೌರ್ಯಕ್ಕಾಗಿ ಅವರನ್ನು ಖಂಡಿಸಬೇಕಾದ್ದು ಅವಶ್ಯಕ.

ಚಿಕ್ಕಬಳ್ಳಾಪುರ — *ಡಾ॥ ಸುಧಾ ಜಿ.*

**ಅಕ್ಟೋಬರ್ ಸಂಚಿಕೆ**

ಸ್ವಾತಂತ್ರ್ಯದ ಅರವತ್ತು ಸಂವತ್ಸರಗಳ ಸವಿಯನ್ನು ಅನುಭವಿಸಿ ಬಲಿಷ್ಠ ಪ್ರಜಾಪ್ರಭುತ್ವದ ಪ್ರೌಢಿಮೆಯ ಹೊಸ್ತಿಲಲ್ಲಿ ನಮ್ಮ ರಾಷ್ಟ್ರ ನಿಂತಿರುವುದಕ್ಕೆ ಕಾರಣ ನಮ್ಮ ಪತ್ರಿಕೋದ್ಯಮ. ಈ ನಿಟ್ಟಿನಲ್ಲಿ ರಾಷ್ಟ್ರಪಿತನ ಕೊಡುಗೆಯನ್ನು ಇಂದಿಗೂ ಪ್ರಸ್ತುತ ಎನ್ನುವ ಮುರಳಿಕೃಷ್ಣರ ಧೋರಣೆ ನಿಜಕ್ಕೂ ನೂರಕ್ಕೆ ನೂರು ಸತ್ಯ. ಜನಪರ ಧೋರಣೆಗಳನ್ನು ಎತ್ತಿಹಿಡಿದು ದೇಶಕ್ಕೆ ಸ್ವಾತಂತ್ರ್ಯವನ್ನು ದೊರಕಿಸಿಕೊಡುವ ಅವರ ಧ್ಯೇಯ 'ಇಂಡಿಯನ್ ಒಪಿನಿಯನ್', 'ಸತ್ಯಾಗ್ರಹ', 'ಯಂಗ್ ಇಂಡಿಯಾ', 'ಹರಿಜನ' ಪತ್ರಿಕೆಗಳಲ್ಲಿ ಬಿಂಬಿತ ಎನ್ನುವುದನ್ನು ಅವರ ಲೇಖನ ತೆರೆದಿಟ್ಟಿದೆ.

''ಸ್ಥಳೀಯ ಸಂಸ್ಕೃತಿಯ ಉಸಿರೆಂದು'' ಪ್ರೊ॥ ಸಣ್ಣಗುಡ್ಡಯ್ಯನವರನ್ನು ಬಣ್ಣಿಸಿರುವ ಬರಗೂರರು ದಿವಂಗತರಿಗೆ ಅಂತರಾಳದ ಶ್ರದ್ಧಾಂಜಲಿಯನ್ನು ಸಲ್ಲಿಸಿ ಅವರ ಧೀಮಂತ ವ್ಯಕ್ತಿತ್ವದ ಕಿರುಪರಿಚಯವನ್ನು ಮಾಡಿರುವ ಶೈಲಿ ಕಣ್ಣಲ್ಲಿ ಎರಡು ಹನಿಗಳನ್ನು ಮೂಡಿಸಿದೆ. ಈ ವ್ಯಕ್ತಿಚೇತನಕ್ಕೆ ಓದುಗನೂ ಸಹ ಬಾಷ್ಪಾಂಜಲಿ ಸಲ್ಲಿಸುತ್ತಾನೆ.




'ಜಾಗತೀಕರಣ ಮತ್ತು ಮಾಧ್ಯಮಗಳು' ಲೇಖನದಲ್ಲಿನ ವಿಚಾರಗಳು ಜಿ. ರಾಮಕೃಷ್ಣ ಅವರ ಲೇಖನಿಯ ಮೂಲಕ ವಾಸ್ತವಿಕತೆಯ ಪ್ರತೀಕವಾಗಿ ಹೊರಹೊಮ್ಮಿವೆ. ಕಡುಬಡವ-ಆಗರ್ಭ ಶ್ರೀಮಂತರ ನಡುವಣ ತಾರತಮ್ಯವನ್ನು ಹೋಗಲಾಡಿಸಲು ಕೇವಲ 'ಸಮಾಜವಾದ' ಮತ್ತು 'ಸಮತಾವಾದ'ಗಳಷ್ಟೆ ಪ್ರಸ್ತುತ; 'ಜಾಗತೀಕರಣ' ಕೇವಲ ಕಣ್ಣೊರೆಸುವಿಕೆ ಎನ್ನುವ ವಾಸ್ತವವನ್ನು ನಮ್ಮ ಜನ ಅರಿತಾಗಲೆ ಮಾಧ್ಯಮಗಳ ಕರ್ತವ್ಯನಿಷ್ಠೆಗೆ ಪ್ರಸ್ತುತತೆ ಮತ್ತು ಆದ್ಯತೆ ದೊರಕುವುದೆಂಬುವುದು ನನ್ನ ಅಭಿಪ್ರಾಯ. ''ನಮ್ಮ ಪ್ರಭುತ್ವದ ಅಂಗಗಳು ಜಾಗತೀಕರಣದ ಅಮಲಿಗೆ ತುತ್ತಾಗಿವೆ'' ಎಂಬ ಸತ್ಯವನ್ನು ಈ ಲೇಖನ ಹೊರಹಾಕಿದೆ.

ಬೆಂಗಳೂರು — *ನೆ. ಲ. ರಾಮಮೂರ್ತಿ*

ಭಾರತದಲ್ಲಿ ಎಸ್ಸೆಮ್ಮೆಸ್ ಮೂಲಕ ಅಭಿಪ್ರಾಯವನ್ನು ವ್ಯಕ್ತಪಡಿಸುವ ಜನರ ಮನಸ್ಸುಗಳು ಅಮೆರಿಕಾದ ಸ್ನೇಹದಿಂದ ಹಾಗೂ ಸಹಾಯದಿಂದ ಮಾತ್ರ ಭಾರತ ಪ್ರಗತಿ ಕಾಣಲು ಸಾಧ್ಯವೆಂದು ಹೇಳುತ್ತಿವೆ. ಅದಕ್ಕೆ ಪೂರಕವಾಗಿ ಕೆಲವು ಮಾಧ್ಯಮದವರೂ ಸಹ ಪ್ರಚಾರ ನೀಡುತ್ತಿದ್ದಾರೆ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಒಗಟಿನಂತೆ ಇರುವ ಇರಾನ್ ಕುರಿತ ಲೇಖನವು ದೇಶವು ತನ್ನಲ್ಲಿನ ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳನ್ನು ದೇಶದ ಪ್ರಗತಿಗೆ ಪೂರಕವಾಗಿ ಉಪಯೋಗಿಸಿದರೆ ಪ್ರಗತಿ ಸಾಧ್ಯ ಹಾಗೂ ದೇಶದ ರಾಜಕಾರಣವು ಬಹುಜನರ ಪರವಾದ (ದುಡಿಯುವ ಜನರ ಪರವಿದ್ದಾಗ) ರಾಜಕಾರಣವಿದ್ದಾಗ ಮಾತ್ರ ಅಂತಹ ಸ್ವಾವಲಂಬಿ ರಾಷ್ಟ್ರವನ್ನು ಕಟ್ಟಲು ಸಾಧ್ಯ ಎನ್ನುವಂತಹ ಸತ್ಯವನ್ನು ಇರಾನ್ ಚರಿತ್ರೆಯಿಂದಲೂ ತಿಳಿಯಲು ಸಾಧ್ಯವಾಗುವಂತೆ ವಿಷಯವನ್ನು ತಿಳಿಸಿದ್ದ ತನು ಮೆಹ್ತಾ ತಿವಾರಿ ಅವರಿಗೆ ಧನ್ಯವಾದಗಳು.

ಮೈಸೂರು — *ಧರ್ಮೇಶ್*

### ಮೂಲಭೂತ ಸೌಲಭ್ಯ

ಆಗೊಂದು ಕಾಲವಿತ್ತು – ಕೊಚ್ಚುಗದ್ದೆ - ಬೈನೆ ಹೆಂಡ
ನಮ್ಮದೇ ಬದುಕು
ಹೀಗೂ ಇತ್ತು ಒಂದಿಷ್ಟು ಅಭಿವೃದ್ಧಿ
ಸೈಟು ಮನೆ, ಆಶ್ರಮ ಶಾಲೆ, ಆಯುರ್ವೇದ ಆಸ್ಪತ್ರೆ.
ಶಿಕ್ಷಕರಿಲ್ಲದ, ವೈದ್ಯರಿಲ್ಲದ ಶಾಲೆ, ಆಸ್ಪತ್ರೆ,
ಕೊಟ್ಟಿಲ್ಲವೇ ಮೂಲಭೂತ ಸೌಲಭ್ಯ,
ಎಂಟು ಕಲಿತ ತಿಮ್ಮ – ಬರೆಯಲಾರ ಎ. ಬಿ. ಸಿ. ಡಿ.
ಎಂಕಮ್ಮನ ಹೆರಿಗೆ - ಸಾವು -
ಈಗ ಮರೆತ ವಿಷಯ.

ಆಮೇಲೆ
ನಮ್ಮ ನೆಲ, ಜಲ – ಪರಕೀಯವಾಯ್ತು,
ಉದ್ಯಾನವಾಯ್ತು – ನಾವಿದ್ದ ತಾವು.
ನ್ಯಾಯ ಕೇಳಿದ್ದಕ್ಕೆ ದಕ್ಕಿದ್ದೇನು ?
ಲಾಠಿ ಏಟು, ಕೋರ್ಟು, ಕೇಸು, ಜೈಲು.
ಹಿಂಸೆ-ಪ್ರತಿಹಿಂಸೆ ಎನ್ನುತ್ತದೆ ಸರ್ಕಾರ.
ಯಾರಿಂದ ?
ಬಲಿಯಾಗುತ್ತಿವೆ ಮುಗ್ಧ ಜೀವಿಗಳು,
ಕಮರುತ್ತಿವೆ ಕಾಡು ಕುಸುಮಗಳು,
ಈಗ ಹೇಳುತ್ತೇವೆ ನಾವೇ,
ಬೇಕಿಲ್ಲ ನಮಗೆ ನಿಮ್ಮ ಅಭಿವೃದ್ಧಿ,
ಬದುಕಿರುತ್ತೇವೆ ಬಿಡಿ – ಇಲ್ಲೇ ಈ ನೆಲದಲ್ಲೇ –
ಬೇಕಷ್ಟೇ ನಮಗಿಲ್ಲಿ ಮೂಲಭೂತ ಸೌಲಭ್ಯ
ಅದೇ ಪ್ರಜಾಪ್ರಭುತ್ವ.

*ಶೃಂಗೇರಿ* — **ಭಾಗ್ಯ ಹಾಗಲಗಂಚಿ**

### ನಿನ್ನದಲ್ಲದ ಹಾದಿ

ಅತ್ತಿತ್ತ ನೋಡದಿರು ಗೆಳೆಯಾ
ನುಗ್ಗು ಮುನ್ನುಗ್ಗು ನಿನಗೆ ನೀನೇ ಎಲ್ಲಾ
ನೀನೇ ಕೇಂದ್ರ ಬಿಂದು ನಿನ್ನಿಷ್ಟವೇ ಸಿಂಧು
ನಿನ್ನುದ್ಧಾರವೇ ಜಗದೋದ್ಧಾರ
ಹಿಡಿ ನಿನ್ನ ದಾರಿ, ಒಂದೇ ಗುರಿ, ಅದೇ ಸರಿ

ನೋಡದಿರಿತ್ತ ಭ್ರಷ್ಟತೆಯ ಕೊಳೆಯ ಹೊಳೆಯ
ಕೊಳೆತು ಮಲೆತು ಹರಡಿದೆ ದುರ್ಗಂಧ
ರೋಗರುಜಿನ

ಬಿಡು ಅದನ, ಮಾಡಿಕೋ ನಿನ್ನ ಜತನ
ಮುಚ್ಚು ಮೂಗು ಪೂಸಿಕೋ ಅತ್ತರು ಪುನುಗು
ಬಾ ಇತ್ತ ಹಾರೀತು ಕೊಚ್ಚೆ, ಮಾಸೀತು ಬಟ್ಟೆ

ನೋಡದಿರಿತ್ತ ಶೂಲ ತ್ರಿಶೂಲಗಳ ಕರಾಮತ್ತ
ಹರಿಯಿತು ನೆತ್ತರು ಯಾರೋ ಸತ್ತರು
ಕೇಸರಿಯ ಅಟ್ಟಹಾಸ
ಅಸಹಾಯ ಬದುಕುಗಳಿಗೆ ಮೋಕ್ಷ
ಹುಗಿಯಲು ಜಾಗ, ಸುಡಲಿಕ್ಕೆ ಸೌದೆ ಸುಭಿಕ್ಷ

ಇಣುಕದಿರಿತ್ತ ಜಿಹಾದಿಗಳತ್ತ
ಅವರ ನಂಬಿಕೆ, ಅವರ ಅಲ್ಲಾ ನಿನಗೆ ಗೊತ್ತಾ ?
ಹಸಿರೇ ಆಸ್ಫೋಟಿಸಿ ನಿಂತ ಉಸಿರೇ

ಒಂದೇ ಎರಡೇ ಹತ್ತೇ ನೂರೇ ?
ಸಾವಿರವಾದರೂ ಏನು ತಗ್ಗೀತೇ ಭೂಮಿ ಭಾರ ?

ನಡೆ ನಡೆ ಮುಂದೆ ನೋಡದಿರಿತ್ತ
ಕಾವಿಯ ಅಮಲು ಖಾಕಿಯ ಗೈರತ್ತು
ಖಾದಿಯ ಹಿಕಮತ್ತು, ಒಟ್ಟಾರೆ ಮಸಲತ್ತು,
ಅವರೆಲ್ಲಾ ಒಂದೇ, ಮಿಕ್ಕದ್ದೆಲ್ಲಾ ಕುರಿ ಮಂದೆ.
ತಿದ್ದುವೆಯಾ ? ಒಂಟಿ ಮೊಟ್ಟೆ ಇಟ್ಟೀತು ಇಂದೇ !

ನಡೆ ನಡೆ ಮುಂದೆ ಇನ್ನೂ ಮುಂದೆ ಮುಂದೆ
ಎಚ್ಚರ ಎಚ್ಚರ ಗೆಳೆಯಾ ನೋಡು ಮುಂದೆ
ಇದೆಂತಾ ದಾರಿ ತುಳಿದೆ ?
ಮುಂದೇನಿಲ್ಲ ಬರೀ ಪ್ರಪಾತ ತಳವಿಲ್ಲದ ಹಳ್ಳ
ಬಾ ಹಿಂದೆ ಇನ್ನು ಹಿಂದೆ
ಅದು ಆಗದಲ್ಲ!
ಅದು ನಿನ್ನದಲ್ಲದ, ನಿನ್ನದೆನ್ನುವ ಹಾದಿ
ಅದಕೆ ಒಂದೇ ಮುಖ, ನೀನೆಲ್ಲಿಯೂ ಸಲ್ಲದವ
ನಿಂತಲ್ಲೆ ಕೊರಗು, ಕರಗು, ಅದೇ ನಿನಗೆ ಮೋಕ್ಷ.

**ತುಮಕೂರು ಚಂದ್ರಕಾಂತ**

### ಪರಮಾಣು ಒಪ್ಪಂದದಿಂದ ಭಾರತಕ್ಕೆ ಗಂಡಾಂತರವಾಗಿದೆ

ವಾಮಪಂಥೀಯರು, ನಿವೃತ್ತ ಅಣು ವಿಜ್ಞಾನಿಗಳಿಬ್ಬರು ಮತ್ತು ಭವಿಷ್ಯದ ಚಿಂತೆಯುಳ್ಳ ಪ್ರಬುದ್ಧ ರಾಜನೀತಿಜ್ಞರು ಅಮೆರಿಕಾದೊಂದಿಗೆ ಪರಮಾಣು ಒಪ್ಪಂದವನ್ನು ಬಲವಾಗಿ ವಿರೋಧಿಸಿದರೂ ಪ್ರಧಾನ ಮಂತ್ರಿ ಮನಮೋಹನ ಸಿಂಗರು ಮತ್ತು ಅವರ ಮಂತ್ರಿ ಮಂಡಲ ಭಾರತವನ್ನು, ಇನ್ನೊಂದು ರಾಷ್ಟ್ರದ ಅಭಿವೃದ್ಧಿಯನ್ನು ಸಹಿಸದ ಕುತಂತ್ರಿ ಬುಷ್ ಪ್ರಭುವಿನ ಅಧೀನಕ್ಕೆ ಒಳಪಡಿಸಿ ಕೈ ತೊಳೆದುಕೊಳ್ಳಲು ಪ್ರತಿಜ್ಞೆ ಮಾಡಿದಂತಿದೆ.

ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳೇ ಸಂದು ಹೋದರೂ, ಎಲ್ಲಾ ಕ್ಷೇತ್ರಗಳಲ್ಲೂ ತನ್ನ ಕಾಲಮೇಲೆ ನಿಲ್ಲುವ ಸಾಮರ್ಥ್ಯವನ್ನು ಭಾರತ ಪಡೆಯಲಿಲ್ಲ. ಆಳುವವರಿಗೆ ತಮ್ಮ ಕುಟುಂಬದ ಯೋಗಕ್ಷೇಮವೇ ಮುಖ್ಯವಾಗಿ ಹೋಗಿದೆ. ಇನ್ನಾದರೂ ಮನಸ್ಸುಮಾಡಿ ದಾಸ್ಯ ಮನೋವೃತ್ತಿಯನ್ನು ಬಡಿದೋಡಿಸಿದರೆ, ಭಾರತ ಯಾವ ರಾಷ್ಟ್ರಕ್ಕೂ ತಲೆಬಾಗದೆ ಅದ್ಭುತ ಪ್ರಗತಿಯನ್ನು ಸಾಧಿಸಬಹುದಾಗಿದೆ.

ಏಷ್ಯಾದಲ್ಲಿ ಚೀನಾ ಮತ್ತು ರಷ್ಯಾಗಳ ಪ್ರಾಬಲ್ಯ ಹೆಚ್ಚಾಗದಂತೆ ನೋಡಿಕೊಳ್ಳುವುದಕ್ಕಾಗಿಯೇ ಬುಷ್ ಈ ನಾಟಕವಾಡುತ್ತಿದ್ದಾನೆ ಎಂಬುದನ್ನು ಅರಿಯದೆ ನಮ್ಮ ಪ್ರಧಾನ ಮಂತ್ರಿಗಳು ಈ ಒಪ್ಪಂದದಿಂದ, ಮುಂದೆ, ಭಾರತ ಇಂತಹ ಅಸಹಾಯಕತೆಗೆ, ಹೀನಸ್ಥಿತಿಗೆ ತಲುಪಲಿದೆ ಎಂಬುದನ್ನು ಅರಿಯದಿರುವುದು ಭಾರತೀಯರಾದ ನಮ್ಮ ದೌರ್ಭಾಗ್ಯವೇ ಸರಿ. ಎಡಪಕ್ಷಗಳು ಸರ್ಕಾರಕ್ಕೆ ನೀಡಿದ ತಮ್ಮ ಬೆಂಬಲವನ್ನು ಹಿಂದಕ್ಕೆ ಪಡೆದರೂ ಚಿಂತಿಲ್ಲ, ಪರಮಾಪ್ತ ಮಿತ್ರ ಬುಷ್‌ನ ಅಪೇಕ್ಷೆಯಂತೆ ಅಣು ಒಪ್ಪಂದ ನೆರವೇರಿಯೇ ತೀರಬೇಕೆಂಬ ಪಣ ಇಡೀ ರಾಷ್ಟ್ರಕ್ಕೆ ಎಸಗುವ ಮಹಾ ದ್ರೋಹ ಎಂಬುದರಲ್ಲಿ ಸಂಶಯವಿಲ್ಲ. ಈಗಾಗಲೇ ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ನಗರೀಕರಣ ಇತ್ಯಾದಿ ಇತ್ಯಾದಿ ಕಾರಣಗಳಿಂದ ನಾವು ಮೆಲ್ಲಮೆಲ್ಲನೆ ಪರತಂತ್ರಕ್ಕೆ ಒಳಗಾಗುತ್ತಿದ್ದೇವೆ. ವಿದೇಶಗಳಿಂದ ಬರುವ, ಅಲ್ಲಿಯವರು ಹೊರತಳ್ಳಿದ ಸರಕುಗಳಿಂದ, ವಿಷಪೂರಿತ ಆಹಾರ ಪದಾರ್ಥಗಳಿಂದ ತ್ಯಾಜ್ಯ ಮದ್ದುಗಳಿಂದ ನಮ್ಮ ಮಾರುಕಟ್ಟೆಗಳು ಸೊರಗಿ ಹೋದರೂ ಪರರ ಏಕಚಕ್ರಾಧಿಪತ್ಯಕ್ಕೆ ಬಲಿಯಾಗುತ್ತಿದ್ದೇವೆ. ಬಡಪೆಟ್ಟಿಗೆ ಅಂಗಡಿಯವ ಬಾಗಿಲು ಮುಚ್ಚಿ ಕೈಕಟ್ಟಿ ಕುಳಿತುಕೊಳ್ಳುವಂತಹ ವಾತಾವರಣ ನಿರ್ಮಾಣವಾಗಿದೆ. ಕಳಪೆ ಬೀಜಗಳಿಂದ ಫಸಲು ಬಾರದೆ ನಷ್ಟ ಅನುಭವಿಸುತ್ತಿರುವ ರೈತರು ಆತ್ಮಹತ್ಯೆ ಮಾಡಿಕೊಂಡರೆ ನಮ್ಮ ಸರ್ಕಾರಕ್ಕೆ ಯಾವ ಚಿಂತೆಯೂ ಇಲ್ಲ. ಪರಿಹಾರ ಘೋಷಿಸಿ ಜಾಗ ಖಾಲಿಮಾಡಿಬಿಡುತ್ತಾರೆ. ಮತ್ತೆ ಅಧಿಕಾರಿಗಳು ಸರ್ಕಾರದಿಂದ ಬಂದ ಪರಿಹಾರದ ಮೊತ್ತದಲ್ಲಿ 'ಮಮಾಪ್ಯರ್ಧಂ ತವಾಪ್ಯರ್ಧಂ' ಎಂದು ಪಾಲುಮಾಡಿಕೊಂಡು ಮನೆಸೇರಿಬಿಡುತ್ತಾರೆ. ಮೂಲ ಕಾರಣಕ್ಕೆ ಮಾತ್ರ ಪರಿಹಾರವೇ ಇಲ್ಲವಾಗಿದೆ.

ವಿಶೇಷ ಆರ್ಥಿಕ ವಲಯಗಳಿಗಾಗಿ ರೈತರ ಫಲವತ್ತಾದ ಸಾವಿರಾರು ಎಕರೆ ಜಮೀನು ಟೌನ್‌ಶಿಪ್‌ಗಳಂತಹ ನಾನಾ ಯೋಜನೆಗಳಿಗಾಗಿ ಕೈತಪ್ಪಿಹೋಗಿದೆ, ಹೋಗುತ್ತಿದೆ. ಹಳ್ಳಿಗಳ ಮುಗ್ಧ ಜನರನ್ನು, ಕಪಟವನ್ನು ಅರಿಯದ ರೈತರನ್ನು ದೋಚುವುದು ಸುಲಭವಲ್ಲವೆ ? ಇದರ ಹಿಂದೆ ಇರುವ ಕುತಂತ್ರವನ್ನು ಪಾಪ, ನಮ್ಮ ಬೋರೇಗೌಡರು ಹೇಗೆ ಅರ್ಥಮಾಡಿಕೊಳ್ಳಬೇಕು ?

ವಿದೇಶೀ ವಸ್ತುಗಳ ಬಹಿಷ್ಕಾರಕ್ಕೆ ಸತ್ಯಾಗ್ರಹ ಹೂಡಿದವರು ನಾವು ! ಇಂದಿನ ಸ್ಥಿತಿಯನ್ನು ನಮ್ಮನ್ನಾಳುವವರು ಇನ್ನೂ ಅರ್ಥ ಮಾಡಿಕೊಳ್ಳದಿರುವುದು ನಮ್ಮ ದೊಡ್ಡ ದುರಂತ. ಹಾಗೆಂದು ಅಜ್ಜ ನೆಟ್ಟ ಆಲದ ಮರಕ್ಕೇ ಜೋತುಬೀಳಬೇಕೆಂದು ಯಾರೂ ಹೇಳುವುದಿಲ್ಲ. ಮುಂದಿನ ಹೆಜ್ಜೆ ಇಡುವಾಗ ಯುಕ್ತಾಯುಕ್ತ ವಿವೇಚನೆ ಇರಲಿ ಎಂದೇ ಎಲ್ಲರ ಬಯಕೆ, ಆಕಾಂಕ್ಷೆ.

ಒಟ್ಟಿನಲ್ಲಿ ಹೇಳುವುದಾದರೆ ಇರಾನಿನೊಂದಿಗೆ ಇರುವ ನಮ್ಮ ಸ್ನೇಹ ಸಂಬಂಧ ಮತ್ತು ಸಂಪರ್ಕವನ್ನು ವಿರೋಧಿಸುತ್ತಿರುವ, ಅದಕ್ಕೆ ಅಡ್ಡಗಾಲು ಹಾಕುತ್ತಿರುವ ಬುಷ್ ಪಾಪಿ ಎಂತಹ ಮತ್ಸರಿ ಎಂಬುದನ್ನು ನಮ್ಮ ನಾಯಕರು ಇನ್ನಾದರೂ ತಿಳಕೊಳ್ಳಲಿ. ದೇಶವನ್ನು ನರಕಕ್ಕೆ ತಳ್ಳುವ ಕೆಲಸಕ್ಕೆ ಕೈಹಾಕದಿರಲಿ. ಇಲ್ಲವಾದರೆ ದೇಶದ ಪ್ರಪ್ರಥಮ ಪ್ರಧಾನ ಮಂತ್ರಿ ಪಂಡಿತ ಜವಾಹರಲಾಲ್ ನೆಹರೂ ಅವರು ಇಂದಿಗೂ ಬಗೆಹರಿಯದೆ ಸಮಸ್ಯೆಯಾಗಿಯೇ ಉಳಿದಿರುವ ಕಾಶ್ಮೀರ ವಿಷಯದಲ್ಲಿ ಮಾಡಿದ ಪ್ರಮಾದವೇ ಅಣು ಒಪ್ಪಂದದಲ್ಲೂ ಆಗದಿರದು. ಆದರೆ ಒಂದೇ ಒಂದು ಬೇಸರದ ಸಂಗತಿ ಅಂದರೆ, ಇಂತಹ ಆತ್ಮಘಾತುಕ ಒಪ್ಪಂದವನ್ನು ಸಹಾ ನಮ್ಮ ಜನರು ಎಚ್ಚತ್ತು ವಿರೋಧಪಡಿಸದಿರುವುದು ಭಾರತಮಾತೆಗೆ ನಾವು ಮಾಡುತ್ತಿರುವ ಬಹುದೊಡ್ಡ ದ್ರೋಹವಾಗಿದೆ.

ಚಿಕ್ಕಬಾಣಾವರ, ಬೆಂಗಳೂರು - ೯೦ — **ಎಂ. ವಿ. ಭಟ್**

### ಪ್ರವಾಸಿಯೊಬ್ಬ ಕಂಡ ರಾಣಿ ಅಬ್ಬಕ್ಕದೇವಿ

ಹದಿನೇಳನೆಯ ಶತಮಾನದ ಪಿಯೆತ್ರೊ ದೆಲ್ಲಾ ವಲ್ಲೆ ಎಂಬ ಇಟಲಿ ದೇಶದ ಪ್ರವಾಸಿಗನು ಇಕ್ಕೇರಿ ಸಂಸ್ಥಾನ ಮತ್ತು ಮಂಗಳೂರು ಬಳಿ ಇರುವ ಉಲ್ಲಾಳದ ರಾಣಿ ಅಬ್ಬಕ್ಕದೇವಿ ಕುರಿತು ಬರೆದಿರುವ ದಾಖಲೆಯು ಬಹು ಸ್ವಾರಸ್ಯವೂ, ಅಪೂರ್ವವೂ ಆಗಿದೆ. ಇದರ ಸಂಕ್ಷಿಪ್ತ

ವಿವರಣೆಯನ್ನು ಹೆಚ್. ಎಲ್. ನಾಗೇಗೌಡರು 'ಪ್ರವಾಸಿ ಕಂಡ ಇಂಡಿಯಾ'ದಲ್ಲಿ ನೀಡಿದ್ದಾರೆ :

ದೋಣಿಯಿಂದಿಳಿದು ತಂಗಲಿಕ್ಕಾಗಿ ಮನೆಯನ್ನು ಹುಡುಕುತ್ತಾ ಬಜಾರಿನಲ್ಲಿ ಹೋಗುತ್ತಿರುವಾಗ ರಾಣಿಯೇ ಬೀದಿಯಲ್ಲಿ ನಡೆದುಕೊಂಡು ಬರುತ್ತಿದ್ದುದನ್ನು ಕಂಡೆ. ಜೊತೆಯಲ್ಲಿ ಹೆಂಗಸರ್ಯಾರೂ ಇರಲಿಲ್ಲ. ಇದ್ದವರು ನಾಲ್ಕಾರು ಸಿಪಾಯಿಗಳು. ಅವರು ರಾಣಿಯ ಮುಂದೆ ನಡೆದುಕೊಂಡು ಬರುತ್ತಿದ್ದರು. ಇಲ್ಲಿಯ ಪದ್ಧತಿಯಂತೆ ಹೆಚ್ಚು ಬಟ್ಟೆ ಹಾಕದೆ ಅರೆಬೆತ್ತಲೆಯಾಗಿದ್ದರು. ಸೊಂಟಕ್ಕೆ ಒಂದು ತುಂಡು ಬಟ್ಟೆ ಮತ್ತು ಹೆಗಲಮೇಲೆ ಅಡ್ಡ ಹೊದಿಕೆಯಾಗಿ ಕಟ್ಟಿಕೊಂಡ ಒಂದು ವಸ್ತ್ರ ಇಷ್ಟೇ ಅವಳ ಉಡುಪು. ಅವಳ ಕೈಲಿ ಕತ್ತಿ ಮತ್ತು ಗುರಾಣಿ ಇದ್ದವು. ರಾಣಿಯ ಹಿಂದೆಯೂ ಐದಾರು ಜನ ಸಿಪಾಯಿಗಳಿದ್ದರು. ಅವರಲ್ಲಿ ಒಬ್ಬ ರಾಣಿಯ ಮೇಲೆ ತಾಳೆಗರಿಯ ಕೊಡೆ ಹಿಡಿದಿದ್ದ. ರಾಣಿಯ ಬಣ್ಣ ಇಥಿಯೋಪಿಯನ್ನರ ಬಣ್ಣದಷ್ಟೇ ಕಪ್ಪು. ಬೊಜ್ಜು ಬೆಳೆದು ಗುಡಾಣದಂಥ ಹೊಟ್ಟೆ ಇದ್ದರೂ ನಡಿಗೆ ಚುರುಕಾಗಿತ್ತು. ಆಕೆಯ ವಯಸ್ಸು ಸುಮಾರು ನಲವತ್ತು ಇದ್ದಿರಬಹುದು. ಸೊಂಟದಿಂದ ಕೆಳಕ್ಕೆ ಮಂದವಾದ ಬಿಳಿಯ ಹತ್ತಿಯ ಸೀರೆ ಉಟ್ಟಿದ್ದಳು. ಕಾಲಿಗೆ ಪಾದರಕ್ಷೆಗಳಿರಲಿಲ್ಲ. ಆಕೆಯನ್ನು ಕಂಡು ಸ್ಪೆಯ್ನ್ ರಾಜನ ಸೈನ್ಯಗಳನ್ನು ನಿರ್ನಾಮ ಮಾಡಿದವಳೆಂದು ಯೂರೋಪಿನಲ್ಲಿ ಹೊಗಳಿಸಿಕೊಂಡವಳು ಇವಳೋ ಅಲ್ಲವೋ ಎಂದು ಮನಸ್ಸಿನಲ್ಲೇ ಅಂದುಕೊಂಡೆ. ಆಕೆ ದಪ್ಪವಾಗಿದ್ದರೂ ವಕ್ರವಾಗಿ ಕಾಣಿಸುತ್ತಿರಲಿಲ್ಲ ಎಂದು ಹೇಳದಿದ್ದರೆ ತಪ್ಪಾದೀತು. ಯೌವನದಲ್ಲಿ ಆಕೆ ರೂಪವತಿ ಯಾಗಿದ್ದಿರಬೇಕು. ಆಕೆಯ ಗಂಭೀರ ಸೌಂದರ್ಯದ ಕಾರಣವಾಗಿ ಸ್ವಲ್ಪ ಗಡಸಿನ ಹೆಣ್ಣು ಎಂದು ಪ್ರತೀತಿ ಇದೆ. ಆಕೆ ಬರುತ್ತಿದ್ದುದನ್ನು ನೋಡಿದ ನಾನು ನಿಂತೆ. ನನ್ನ ಸೇವಕರು ಸಾಮಾನುಗಳನ್ನು ಕೆಳಗಿಟ್ಟು ಒಂದು ಪಕ್ಕಕ್ಕೆ ಸರಿದರು. ಪರದೇಶದ ಉಡುಪನ್ನು ಧರಿಸಿದ್ದ ನನ್ನನ್ನು ಕಂಡು ಆಕೆ ಅಲ್ಲಿಯ ಭಾಷೆ ನನ್ನ ಜೊತೆಯಲ್ಲಿದ್ದ ವರ್‍ಯಾರಿಗಾದರೂ ಬರುವುದೇ ಎಂದು ಕೇಳಿದರು. ಆಗ ನಮ್ಮ ಸೇವಕ ಬ್ರಾಹ್ಮಣ 'ನರಸು' ಮುಂದೆ ಹೋಗಿ ತಮಗೆ ಬರುತ್ತದೆ ಎಂದರು. ಆಕೆಗೆ ನಾನು ನಮ್ಮ ದೇಶದ ಪದ್ಧತಿಯಂತೆ ನಮಸ್ಕರಿಸಿ ಗೌರವ ಸೂಚಿಸಿದೆ. ಬೀದಿಯಲ್ಲಿ ಎಲ್ಲರ ಮುಂದೆ ನಿಂತು ಆಕೆ ನನ್ನೊಡನೆ ಸಂಭಾಷಿಸಿದಳು.

ನೀವು ಯಾರು ? ಎಂದು ರಾಣಿ ಕೇಳಿದಳು. ''ನಾನು ಪಾಶ್ಚಾತ್ಯ ದೇಶದ ದೊಡ್ಡ ಮನುಷ್ಯ. ನನ್ನ ದೇಶ ಬಹಳ ದೂರ ಇದೆ ಎಂದು ಹೇಳಿ ಪೋರ್ಚುಗಲ್ಲರಲ್ಲದೆ ಬೇರೆ ಯೂರೋಪಿಯನ್ನರನ್ನು ಆಕೆ ನೋಡದಿರುವ ಕಾರಣ ನಾನು ಪೋರ್ಚುಗಲ್ಲನೆಂದೂ ನಾನೊಬ್ಬ ರೋಮನ್'' ಎಂದೆ. 'ರುಮೀ' ಎಂದರೆ ಕಾನ್‌ಸ್ಟಾಂಟಿನೋಪಲ್ ತುರುಕನೆಂಬ ಭಾವನೆ ಬರಬಹುದಾದ ಕಾರಣ ನಾನು ಕ್ರೈಸ್ತರ ಗುರುವಾದ ಪೋಪರಿರುವ 'ರೋಮಿನ ಕ್ರೈಸ್ತ' ಎಂದು ವಿವರಿಸಿದೆ. ''ನಿಮ್ಮ ಕೀರ್ತಿಯನ್ನು ಬಹಳ ಹಿಂದೆಯೇ ಕೇಳಿ ಈಗ ನಿಮ್ಮನ್ನು ನೋಡಿ ನನ್ನ ಗೌರವ ಸಲ್ಲಿಸಲು ಬಂದಿದ್ದೇನೆ'' ಎಂದು ಹೇಳಿದೆ.

ಆಗ ಆಕೆ ''ಯಾವ ದೇಶಗಳನ್ನು ಯಾವ ಆಸ್ಥಾನ ಗಳನ್ನು ನೀವು ನೋಡಿರುವಿರಿ ?'' ಎಂದು ಕೇಳಿದಳು.

ನಾನು ನೋಡಿದ ದೇಶಗಳ ವರ್ಣನೆಯನ್ನು ಸಂಕ್ಷಿಪ್ತವಾಗಿ ಹೇಳಿದ ನಂತರ ''ಹಾಗಿದ್ದರೆ ಮಹಾ ತುರುಕ ಪರ್ಷಿಯಾ ಚಕ್ರವರ್ತಿ, ಮೊಗಲ್ ಸಾಮ್ರಾಜ್ಯ ಮತ್ತು ವೆಂಕಟಪ್ಪ ನಾಯಕ – ಇಂಥವರನ್ನು ನೋಡಿದ ಮೇಲೆ ಈ ನಾಡಿನಲ್ಲಿ ಮತ್ತೇನು ನೋಡಲು ಬಂದಿರಿ ?'' ಎಂದು ಕೇಳಿದಳು. ''ಅಂಥ ಚಕ್ರವರ್ತಿ ಸಾರ್ವಭೌಮರನ್ನು ಕಂಡ ಮೇಲೆ ನನ್ನ ರಾಜ್ಯ ನೋಡುವಂತಹುದಲ್ಲ'' ಎಂದಳು ಆಕೆ.

ಇದಕ್ಕುತ್ತರವಾಗಿ ನಾನು ''ಹೆಸರಾಂತ ತಮ್ಮನ್ನು ನೋಡುವುದೇ ಸಾಕು. ಅದಕ್ಕೋಸ್ಕರವೇ ಇಲ್ಲಿಗೆ ಬರುವ ಮನಸ್ಸು ಮಾಡಿದೆ. ಅದು ಸಾರ್ಥಕವಾಯಿತು'' ಎಂದೆ.

ನನ್ನ ಮಾತಿನಿಂದ ಸುಪ್ರೀತಳಾದ ರಾಣಿ ತನ್ನ ಕೃತಜ್ಞತೆಯನ್ನು ತಿಳಿಸಿದಳು. ''ಅನೇಕ ದೇಶಗಳಲ್ಲಿ ಅಲೆದಾಡುವ ಒಬ್ಬಂಟಿಗರಾದ ನಿಮಗೆ ಕಾಯಿಲೆ ಕಸಾಲೆ ಬಂದರೆ ನೋಡಿಕೊಳ್ಳುವರ್‍ಯಾರು ?'' ಎಂದು ಕನಿಕರದಿಂದ ಕೇಳಿದಳು.

ಇದಕ್ಕುತ್ತರವಾಗಿ ನಾನು ''ಹೋದ ಕಡೆಗಳಲ್ಲೆಲ್ಲಾ ನಾನು ನಂಬಿದ ದೇವರು ನನ್ನೊಡನಿದ್ದಾನೆ'' ಎಂದೆ.

''ನೀವು ಏಕೆ ಊರು ಬಿಟ್ಟಿರಿ ? ಬೇಸರದಿಂದಲೊ ? ಅಚ್ಚುಮೆಚ್ಚಿನವರು ಯಾರಾದರೂ ತೀರಿಕೊಂಡರೆ'' ಎಂದು ಕೇಳಿದಳು ರಾಣಿ. ಇಂಡಿಯಾದಲ್ಲಿ ಹಾಗೂ ಪೌರ್ವಾತ್ಯ ದೇಶಗಳಲ್ಲಿ ಮನಸ್ಸಿಗೆ ಅತೃಪ್ತಿ, ಭಗ್ನಪ್ರೇಮ, ಮೆಚ್ಚಿದವರ ಮರಣ ಅಥವಾ ದುರದೃಷ್ಟಗಳ ಕಾರಣ ಗಳಿಂದಾಗಿ ಊರುಬಿಟ್ಟು ಹೋಗುವುದುಂಟು. ಜೆಂಟೈಲ ರಾದರೆ ಜೋಗಿಗಳಾಗುತ್ತಾರೆ. ಮಹೋಮೆಡನ್ ಗಳಾದರೆ ದರ್ವೇಸಿಗಳಾಗುತ್ತಾರೆ. ಹೀಗೆ ಭಿಕ್ಷಾಟನೆ ಮಾಡುತ್ತಾ ಕಾಲ ತಳ್ಳುತ್ತಾರೆ. ನಾನು ನನಗೊದಗಿದ ದುರದೃಷ್ಟ ಹೇಳಿಕೊಳ್ಳದೆ ಆ ಯಾವ ಕಾರಣಗಳಿಂದಲೇ ಆಗಲಿ ನನ್ನ ದೇಶ ಬಿಡಲಿಲ್ಲವೆಂದೂ, ವಿವಿಧ ದೇಶಗಳನ್ನು ಅಲ್ಲಿಯ ನಡೆನುಡಿಗಳನ್ನು ನೋಡಿ ಪ್ರವಾಸದಿಂದ ಕಲಿಯಬೇಕಾದ್ದನ್ನು ಕಲಿಯಲು ಬಂದೆನೆಂದೂ ತಿಳಿಸಿದೆ. ''ನಮ್ಮ ದೇಶಗಳಲ್ಲಿ ನಾನಾ ದೇಶಗಳನ್ನು ನೋಡಿ ಬಂದವರಿಗೆ ಬಹಳ ಮರ್ಯಾದೆ'' ಎಂದು ಹೇಳಿದೆ. (ನಾಗೇಗೌಡರ ಪುಸ್ತಕದಿಂದ ಉದ್ಧೃತ).

ಕನ್ನಡಿಗರು ಹೆಮ್ಮೆಪಡುವಂತಹ ಉಲ್ಲಾಳದ ರಾಣಿ ಅಬ್ಬಕ್ಕದೇವಿ ಹೊರಗಿನ ಪ್ರವಾಸಿಗರಿಗೆ ಕೂಡ ತಮ್ಮ ನಡೆನುಡಿಗಳಿಂದ ಹಾಗೂ ಭಾಷೆಯಿಂದ ಹೇಗೆ ಪ್ರಭಾವ ಬೀರುತ್ತಿದ್ದರು ಎಂಬುದಕ್ಕೆ ಇದು ದೃಷ್ಟಾಂತವಾಗಿದೆ.

ತುಮಕೂರು **ಆರ್. ರವೀಂದ್ರ ನಾಯಕ್**

---

*೩ನೇ ಪುಟದಿಂದ (ಈ ತಿಂಗಳು)*

ಪಕ್ಷಗಳ ನಾಯಕರು ಜನರ ಬಳಿ ಹೋಗುವ ಬದಲು ಕಂಡ ಕಂಡ ಮುನಿಗಳ ಬಳಿಗೆ ಧಾವಿಸುತ್ತಿರುವುದು ಶೋಚನೀಯ.

* * *

ಕಳೆದ ತಿಂಗಳ ಇನ್ನೊಂದು ವಿಶೇಷವೆಂದರೆ ಸರ್ವೋಚ್ಚ ನ್ಯಾಯಾಲಯದಲ್ಲಿ ತಮಿಳು ನಾಡಿನ ಕೆಲವು ಬೆಳವಣಿಗೆಗಳ ವಿಚಾರಣೆ ಮಾಡುವಾಗ ಸಂವಿಧಾನದ ಎಲ್ಲೆಗಳನ್ನು ಸಂಪೂರ್ಣವಾಗಿ ಮೀರಿ ಒಂದು ರೀತಿಯ ಸರ್ವಾಧಿಕಾರಿ ಧೋರಣೆಯನ್ನು ಕೆಲವು ನ್ಯಾಯಮೂರ್ತಿಗಳು ಪ್ರಕಟಿಸಿದ್ದು. ಆ ಮಾತುಗಳು ಕಡತದ ಭಾಗವಾಗುವುದಿಲ್ಲವೆಂಬ ಔಪಚಾರಿಕ ವಿವರಣೆ ಅರ್ಥರಹಿತವಾದ್ದು. ಒಂದು ಪ್ರಜಾಪ್ರಭುತ್ವದಲ್ಲಿ ಮುಷ್ಕರ, ಮೆರವಣಿಗೆ, ಉಪವಾಸ ಸತ್ಯಾಗ್ರಹ, ಯಾವುದಕ್ಕೂ ಅವಕಾಶ ಕೊಡದೆಂದು ತೀರ್ಮಾನ ನೀಡುವ ಹಕ್ಕು ಯಾರಿಗೂ ಇಲ್ಲ. ಮೆರವಣಿಗೆಗಳಿಂದ ಜನಕ್ಕೆ ತೊಂದರೆಯಾಗುತ್ತದೆಂಬ ಸಬೂಬು ಶುಷ್ಕವಾಗಿ ತೋರುತ್ತದೆ. ಅಷ್ಟಕ್ಕೂ ಆ ''ತೊಂದರೆ'' ಉಂಟಾಗುವುದು ಸಹ ಇನ್ನೂ ಹೆಚ್ಚು ಕಠಿಣವಾದ ತೊಂದರೆಗಳಿಗೆ ಸಿಲುಕಿರುವುದರಿಂದ ಎಂಬುದನ್ನು ನ್ಯಾಯಾಲಯದ ಪ್ರಭುಗಳು ಅರಿತುಕೊಳ್ಳದಿದ್ದರೆ ಆಗ ಸಮಾಜದಲ್ಲಿ ನ್ಯಾಯವು ಲಯವಾಗುತ್ತದೆ. ಸ್ವಾತಂತ್ರ್ಯ ಹೋರಾಟ ನಡೆದಾಗ ಮತ್ತು ಕರ್ನಾಟಕ ಏಕೀಕರಣ ಹೋರಾಟ ನಡೆದಾಗ ಸಹ ಕೆಲವರಿಗೆ ಎಂಥದೋ ತೊಂದರೆಯಾಗಿರಬಹುದು. ಹಾಗೆಂದು ಅವನ್ನು ನಿಕೃಷ್ಟವಾಗಿ ಕಾಣುವುದು ಪ್ರಜಾಪ್ರಭುತ್ವದ ಯಾವ ಅಂಗಸಂಸ್ಥೆಗೂ ಶೋಭಿಸುವುದಿಲ್ಲ.

* * *

ಅಕ್ಟೋಬರ್ ೧೬ರಂದು ಬೆಂಗಳೂರಿನಲ್ಲಿ ''ಬ್ಲ್ಯಾಕ್ ಐಡ್ ಪೀಸ್'' ಎಂಬ ವಿದೇಶಿ ತಂಡದ ಗಾಯನ ಏರ್ಪಟ್ಟಿದ್ದು ಅದರ ವರದಿಗಳು ಕೆಲವು ಇಂಗ್ಲಿಷ್ ಪತ್ರಿಕೆಗಳ ಮುಖಪುಟದಲ್ಲಿ ದೀರ್ಘವಾಗಿ ಅಚ್ಚಾಗಿದ್ದುವು. ಗಾಯನವು ಚೆನ್ನಾಗಿದ್ದಿತೋ, ರಸಾನುಭವ ನೀಡಿತೋ ಅಥವಾ ಗಾರ್ದಭ ಗಾಯನವಾಗಿದ್ದಿತೋ ಎಂಬ ಪ್ರಶ್ನೆ ಒಂದೆಡೆ. ಅದಕ್ಕೆ ಉತ್ತರ ನೀಡಬೇಕಾದವರು ಸಹಸ್ರ ಸಂಖ್ಯೆಯಲ್ಲಿ ಸೇರಿ ಕುಣಿದಿದ್ದ ''ರಸಿಕರು''. ಇನ್ನೊಂದು ಪ್ರಶ್ನೆ ಇದೆ : ನಮ್ಮ ದೇಶದ ಸಂಗೀತಗಾರರು ಲಂಡನ್ನಿನಲ್ಲೋ ನ್ಯೂಯಾರ್ಕಿನಲ್ಲೋ ಹೋಗಿ ಹಾಡಿದರೆ ಅಲ್ಲಿಯ ಯಾವ ಪತ್ರಿಕೆ ಅದನ್ನು ವರದಿ ಮಾಡುತ್ತದೆ ? ನಮ್ಮ ಮಾಧ್ಯಮಗಳಿಗೆ ಬಿಳಿ ತೊಗಲಿನವರ ದೇಶಗಳ ಎಲ್ಲ ವಿಚಾರಗಳೂ ಪ್ರಮುಖವೇ. ಡಯಾನಾ ಗತಿಸಿ ಎಷ್ಟೋ ವರ್ಷಗಳು ಕಳೆದಿದ್ದರೂ ನಮ್ಮ ಪತ್ರಿಕೆಗಳು ಅದನ್ನು ಕುರಿತು ಇನ್ನೂ ಬರೆಯುತ್ತಿರುತ್ತವೆ. ನವವಸಾಹತುಶಾಹಿಗೆ ತುತ್ತಾಗಿರುವ ಸಂದರ್ಭದ ಒಂದು ಮಹತ್ವದ ಸೂಚನೆ ಇದು. ಅಮೆರಿಕಾದ ಸಿನಿಮಾ ನಟಿಯೊಬ್ಬಳು ತುಂಡು ಬಟ್ಟೆ ಧರಿಸಿದರೆ ಅದೂ ಸಮಾಚಾರವಾಗ ಬಹುದಾದ ದೇಶ ನಮ್ಮದೆಂದರೆ ನಾಚಿಕೆಪಡುವವರು ಇನ್ನೂ ಇದ್ದಾರೆಂದು ಭಾವಿಸಬಹು ದಾಗಿದೆಯೆ ? ಗಾಂಭೀರ್ಯವಿಲ್ಲದ ಮಾಧ್ಯಮಗಳು ಹಾಕಿಕೊಳ್ಳಬಹುದಾದ ಪ್ರಶ್ನೆ ಇದು : ನಮ್ಮ ದೇಶದ ಎಷ್ಟು ಸಂಗತಿಗಳನ್ನು ಲಂಡನ್ ಮತ್ತು ನ್ಯೂಯಾರ್ಕ್ ಪತ್ರಿಕೆಗಳು ವರದಿ ಮಾಡುತ್ತವೆ ? ನಮ್ಮ ಇಂಗ್ಲಿಷ್ ಪತ್ರಿಕೆಗಳು ಗಾರ್ಡಿಯನ್, ಟೈಮ್ಸ್, ನ್ಯೂಯಾರ್ಕ್ ಟೈಮ್ಸ್, ವಾಷಿಂಗ್‌ಟನ್ ಪೋಸ್ಟ್ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾದ ಹಳಸಲು ಲೇಖನಗಳನ್ನು ಪ್ರತಿದಿನ ಮುದ್ರಿಸಿ ಆನಂದ ಅನುಭವಿಸುತ್ತವೆ. ಅವೇ ಪತ್ರಿಕೆಗಳ ಎಷ್ಟು ಲೇಖನಗಳನ್ನು ಈ ವಿದೇಶಿ ಪತ್ರಿಕೆಗಳು ಎತ್ತಿಹಾಕಿಕೊಳ್ಳುತ್ತವೆಂದು ನಮಗೆ ತಿಳಿಯದು. ಬಹುಶಃ ಸೊನ್ನೆ ಎಂಬುದು ಸರಿಯುತ್ತರವಿರಬೇಕು. ವಿದೇಶಗಳ ಮಹಾ ಮಹಿಮರು ನಮಗೂ ಮಹಾಮಹಿಮರೆಂಬ ಕಲ್ಪನೆ ನಮ್ಮ ಪತ್ರಿಕೆಗಳದ್ದು. ಅಂತಹ ಪ್ರತಿಭಾ ಸಂಪನ್ನರು ಯಾರು ? ಸಿನೆಮಾ ತಾರೆಯರು, ಹಾಡುಗಾರರು, ಶ್ರೀಮಂತ ಮಹಿಳೆಯರು ಮತ್ತು ಗೋಜಲು ಜೀವನ ನಡೆಸುತ್ತಿರುವ ಹಲವು ಮೋಸಗಾರ

ಬಂಡವಳಿಗರು. ಬೇಜವಾಬ್ದಾರಿ ಪತ್ರಿಕಾ ನೀತಿಗೆ ಇವೆಲ್ಲಾ ಉದಾಹರಣೆಗಳು.

ಸೆಪ್ಟೆಂಬರ್ ೨೪ರಂದು ಮಲಯೇಷ್ಯಾದ ''ನ್ಯೂ ಸ್ಟ್ರೇಟ್ಸ್ ಟೈಮ್ಸ್'' ಮತ್ತು ೨೭ರಂದು ವಿಯೆಟ್ನಾಮಿನ ''ವಿಯೆಟ್ನಾಂ ನ್ಯೂಸ್'' ಪತ್ರಿಕೆಗಳನ್ನು ನೋಡಿದಾಗ ಇದೆಲ್ಲಾ ಮನಸ್ಸಿನಲ್ಲಿ ಹಾದುಹೋಯಿತು. ಅವುಗಳ ಸ್ಥೂಲ ಪರಿಚಯವು ಅಪ್ರಸ್ತುತವಾಗಲಾರದೆಂದು ಭಾವಿಸಿ ಪ್ರಸ್ತಾಪ ಮಾಡಲಾಗುತ್ತಿದೆ. ಕೌಲಾಲಂಪುರದಲ್ಲಿ ಯಾವನೋ ವಕೀಲನು ನ್ಯಾಯಮೂರ್ತಿಯೊಬ್ಬರಿಗೆ ದೂರವಾಣಿಯಲ್ಲಿ ಮಾತನಾಡಿ ತೀರ್ಪನ್ನು ತನ್ನ ಪರವಾಗಿ ಮಾಡಿಕೊಳ್ಳಲು ಯತ್ನಿಸಿದ್ದು ಮುಖಪುಟದ ಸುದ್ದಿ. ನಮ್ಮ ಯಾವುದೋ ಪತ್ರಿಕೆ ಓದುತ್ತಿದ್ದೇವೆಂಬ ಭಾವನೆಗೆ ಇದು ಸಾಲದೆ ? ಜೊತೆಗೆ ಹುಡುಗಿಯೊಬ್ಬಳ ಅಪಹರಣ, ಅಂತರರಾಷ್ಟ್ರೀಯ ವ್ಯಾಪಾರದ ನಿರ್ಬಂಧಗಳು, ಏಷ್ಯಾದ ವ್ಯವಹಾರಗಳಲ್ಲಿ ಚೀಣಾದ ಪಾತ್ರ, ಯಾರೋ ಉದ್ಯಮಿ ನೀಡಿದ್ದ ಚೆಕ್ಕು ಮಾನ್ಯವಾಗದಿರುವುದು, ಯಾವುದೋ ಪ್ರತಿಮೆಯ ಧ್ವಂಸ (ನಮ್ಮಲ್ಲಿ ಗಾಂಧೀಜಿ ಪ್ರತಿಮೆಯ ಮೇಲೆ ಯಾವನೋ ಅಡಕೆಲೆ ರಸ ಉಗಿದಂತೆ), ಕಾನೂನುಬಾಹಿರವಾಗಿ ದೇಶದೊಳಕ್ಕೆ ನುಸುಳಿರುವವರಿಂದ ಉಂಟಾದ ಸಮಸ್ಯೆಗಳು, ವಿದೇಶಿ ಮಹಿಳೆಯೊಬ್ಬಳ ಮಾನಭಂಗ, ಇಫ್ತರ್ ಸಮಾರಂಭಗಳು, ಹೀಗೆ ೯೬ ಪುಟಗಳಲ್ಲಿ ಪತ್ರಿಕೆಯು ಮಲಯೇಷ್ಯದ ವಿದ್ಯಮಾನಗಳನ್ನು ವರದಿಮಾಡಿದೆ. ಇನ್ನು ಬೇರೆ ಕೆಲವು ವಿಷಯಗಳೆಂದರೆ, ಎಲ್ಲೋ ನೀರಿನ ಸರಬರಾಜು ಇಲ್ಲದಿರುವುದು, ದಿನನಿತ್ಯದ ಬಳಕೆ ವಸ್ತುಗಳ ಅಭಾವ, ರಷ್ಯಾದ ಹುಡುಗಿಯರು ಭಾರತದ ಗಂಡಂದಿರ ಹುಡುಕಾಟದಲ್ಲಿರುವುದು, ಇರಾನಿನ ಮೇಲೆ ಯುದ್ಧ ಹೂಡಲು ಅಮೆರಿಕಾ ವಿಮಾನದಳದಲ್ಲಿ ವಿಶೇಷ ತರಬೇತಿ ನೀಡಲಾಗುತ್ತಿರುವುದು, ಇತ್ಯಾದಿ. ಇಂತಹ ಆತ್ಮೀಯವೆನಿಸುವ ಪತ್ರಿಕೆಗಳು ನಮ್ಮ ಮಾಧ್ಯಮದ ದೊರೆಗಳಿಗೆ ರುಚಿಸುವುದಿಲ್ಲ. ಅವರಿಗೆ ಕ್ರುಗ್‌ಮನ್, ಫ್ರೀಡ್‌ಮನ್ ಮತ್ತು ಮಾರ್ಟಿನ್‌ಗಳೇ ಬೇಕು !

ಸೆಪ್ಟೆಂಬರ್ ೨೭ರ ''ವಿಯೆಟ್ನಾಂ ನ್ಯೂಸ್'' ಪತ್ರಿಕೆಯ ಮುಖಪುಟದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷದ ಕಾರ್ಯದರ್ಶಿ ಎ. ಬಿ. ಬರ್ಧನ್, ವಿಯೆಟ್ನಾಂ ಕಮ್ಯುನಿಸ್ಟ್ ಪಕ್ಷದ ಕಾರ್ಯದರ್ಶಿ ನೋಂಗ್ ಡ್ಯುಕ್ ಮನ್‌ರೊಡನೆ ಮಾತುಕತೆ ನಡೆಸುತ್ತಿರುವ ಚಿತ್ರ ಹಾಗೂ ವರದಿಗಳಿವೆ. ವಿಯೆಟ್ನಾಂನಲ್ಲಿ ಉರುಳಿಬಿದ್ದ ಸೇತುವೆಯದು ಇನ್ನೊಂದು ಚಿತ್ರ; ಅಪಘಾತದಲ್ಲಿ ಮಡಿದವರು ೫೯ ಮಂದಿ. ವಿಶ್ವ ಸಂಸ್ಥೆಯ ಸಾಮಾನ್ಯ ಸಭೆಯಲ್ಲಿ ವಿಯೆಟ್ನಾಂ ಪ್ರಧಾನಿ ಮಾಡಿದ ಭಾಷಣದ ವರದಿಯೂ ಮುಖಪುಟದಲ್ಲಿದೆ. ಸಾಮಾಜಿಕ ಸಮಸ್ಯೆಗಳಿರುವೆಡೆ ನ್ಯಾಯಾಲಯವು ಶೀಘ್ರವಾಗಿ ವಿಚಾರಣೆ ನಡೆಸಬೇಕೆಂದು ವಿಯೆಟ್ನಾಂ ಅಧ್ಯಕ್ಷರು ಸೂಚಿಸಿರುವುದು ಸಹ ಮುಖಪುಟದಲ್ಲಿದೆ. ವಿಶ್ವ ವ್ಯಾಪಾರ ಸಂಸ್ಥೆಯ ಸಂದರ್ಭದಲ್ಲಿ ದೇಶವು ಎದುರಿಸುವ ಸಮಸ್ಯೆಗಳ ಬಗ್ಗೆ ವಿಜ್ಞಾನಿಗಳು, ವೈದ್ಯರು ಮತ್ತು ಪ್ರಾಧ್ಯಾಪಕರು ನೀಡಿರುವ ವಿಶ್ಲೇಷಣೆ ಎರಡನೆಯ ಪುಟದಲ್ಲಿದೆ. ಅಂತೆಯೇ ವಿಶ್ವಬ್ಯಾಂಕ್ ವಿಯೆಟ್ನಾಮಿನ ಆರ್ಥಿಕತೆಯ ಬಗ್ಗೆ ನೀಡಿರುವ ಹೇಳಿಕೆಯೂ ಅಲ್ಲಿದೆ. ವಿಯೆಟ್ನಾಂ ಮೇಲೆ ಅಮೆರಿಕಾ ನಡೆಸಿದ್ದ ಆಕ್ರಮಣದ ವರ್ಷಗಳಲ್ಲಿ ಉಂಟಾದ ಭೀಕರ ಹತ್ಯೆಗಳು, ಏಜೆಂಟ್ ಆರೆಂಜ್ ಮತ್ತು ಡಯಾಕ್ಸಿನ್ ಉಂಟುಮಾಡಿದ್ದ ವಿನಾಶಗಳನ್ನು ಕುರಿತಂತೆ ಅಮೆರಿಕಾದ ಒಂದು ಸಂಸ್ಥೆ ಸಂವಾದ ನಡೆಸಲು ಮುಂದಾಗಿರುವುದು, ಯುದ್ಧ ಕಾಲದಲ್ಲಿ ಅಪೂರ್ವ ಸಾಹಸ ಮೆರೆದಿದ್ದ ಕೆಲವು ಮಹಿಳೆಯರ ಅಭಿಪ್ರಾಯ ಸಂಗ್ರಹದ ಒಂದು ವರದಿ, ಲಾವೋ ಕೈ ಎಂಬಲ್ಲಿರುವ ಗಣಿಯೊಂದನ್ನು ಪರಿಸರಕ್ಕೆ ಧಕ್ಕೆಯಾಗದಿರುವಂತೆ ಮಾರ್ಪಡಿಸುವ ಪ್ರಯತ್ನಗಳು, ಇವು ಎರಡು ಪುಟಗಳಲ್ಲಿ ಅಡಕವಾಗಿವೆ. ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಶುಲ್ಕವನ್ನು ಹೆಚ್ಚಿಸುವ ಬಗ್ಗೆ ಒಬ್ಬ ನಿರ್ದೇಶಕರೊಡನೆ ಸಂದರ್ಶನವು ಆರನೆಯ ಪುಟದಲ್ಲಿದೆ. ವಿದ್ಯಾರ್ಥಿಗಳಿಗೆ ಸಾಲ ಕೊಟ್ಟು ಸಮಸ್ಯೆಯನ್ನು ಎದುರಿಸಲು ಸಾಧ್ಯವೇ ಎಂಬ ಪ್ರಶ್ನೆಗೆ ಈತನ ಉತ್ತರ ಹೀಗಿದೆ: ''ಅದಕ್ಕೆ ನನ್ನ ಬೆಂಬಲವಿದೆ; ಆದರೆ ಹಿಂದೆ ಇಂತಹ ಪ್ರಯತ್ನಗಳು ಉಪಯುಕ್ತ ಫಲ ನೀಡಿಲ್ಲವೆಂಬುದನ್ನು ಮರೆಯುವಂತಿಲ್ಲ.'' (ನಮ್ಮಲ್ಲಿ ಡಾ॥ ಡಿ. ಎಂ. ನಂಜುಂಡಪ್ಪನವರು ಇದೇ ಪರಿಹಾರವೆಂದು ವಾದಿಸುತ್ತಿದ್ದರು ಮತ್ತು ವೌಚರ್ ಅಥವಾ ಕೂಪನ್‌ಗಳನ್ನು ಕೊಟ್ಟು ಸಮಸ್ಯೆಗಳನ್ನು ಇಲ್ಲವಾಗಿಸಬಹುದೆಂದು ನಾರಾಯಣಮೂರ್ತಿ ಸೂಚಿಸುತ್ತಾರೆ. ಬ್ರಿಟ್ನಿ ಸ್ಪಿಯರ್ಸ್ ತೊಡುವ ಅಥವಾ ತೊಡದಿರುವ ಒಳಉಡುಪಿನ ಬಗ್ಗೆ ಆಸಕ್ತಿ ತೋರುವ ನಮ್ಮ ಪತ್ರಿಕೆಗಳು ವಿಯೆಟ್ನಾಮಿನ ಈ ಸಂದರ್ಶನವನ್ನು ವರದಿ ಮಾಡಿದ್ದರೆ ಅರ್ಥವತ್ತಾಗಿರುತ್ತಿರಲಿಲ್ಲವೆ ?)

ಚೀಣಾದಲ್ಲಿ ಮೂರು ಕಣಿವೆಗಳನ್ನು ಒಟ್ಟುಮಾಡಿ ನಿರ್ಮಿಸಿರುವ ಅಣೆಕಟ್ಟಿನಿಂದ ಉಂಟಾಗಿರುವ ಪರಿಸರ ನಾಶದ ಬಗ್ಗೆ ಚೀಣಾದ ಪರಿಣತರು ನೀಡುತ್ತಿರುವ ಅಭಿಪ್ರಾಯಗಳ ಸಂಗ್ರಹವು ಎಂಟನೆಯ ಪುಟದಲ್ಲಿದೆ. ನಮ್ಮ ದೇಶದ ಲಡಾಖ್ ಪ್ರದೇಶದಲ್ಲಿ ಹಿಮಕಲ್ಲುಗಳು ಶೀಘ್ರವಾಗಿ ಕರಗುತ್ತಿರುವುದರಿಂದ ಉಂಟಾಗುವ ದುಷ್ಪರಿಣಾಮಗಳನ್ನು ೧೩ನೆಯ ಪುಟದಲ್ಲಿ ಪ್ರಸ್ತಾಪಿಸಲಾಗಿದೆ. ದೊಡ್ಡ ವಿದೇಶಿ ಕಂಪನಿಗಳು ವಿಯೆಟ್ನಾಂನಲ್ಲಿ ತೆರೆದಿರುವ ಮತ್ತು ತೆರೆಯಲಿರುವ ವ್ಯಾಪಾರಿ ಮಳಿಗೆಗಳ ಬಗ್ಗೆ ೧೫ನೆಯ ಪುಟದಲ್ಲಿ ವರದಿಯೊಂದಿದೆ. ಅವುಗಳಿಂದ ಸ್ಥಳೀಯರಿಗೆ ಒಳ್ಳೆಯ ಗುಣಮಟ್ಟದ ಸರಕುಗಳು ಸೂಕ್ತ ಬೆಲೆಗೆ ದೊರೆಯುವಂತಾಗುತ್ತದೆಂದು ಕೆಲವು ಪರಿಣತರು ಹೇಳಿದ್ದಾರೆಂಧು ಅಲ್ಲಿ ತಿಳಿಸಲಾಗಿದೆ. (ಇದು ನಿಜವೆ ? ಹೌದಾದರೆ ಅದು ಸಾಧ್ಯವಾದದ್ದು ಹೇಗೆ ? ನಮ್ಮ ದೇಶದೊಳಕ್ಕೂ ಈ ಕಂಪನಿಗಳು ನುಸುಳುತ್ತಿವೆ. ಆದರೆ ಇದಕ್ಕೆ ನಮ್ಮಲ್ಲಿ ವಿರೋಧವಿದೆ. ವಾಲ್‌ಮಾರ್ಟ್ ಘಟಕಗಳು ವಿಯೆಟ್ನಾಂನಲ್ಲಿ ಒಟ್ಟು ಎಂಟಿವೆ. ಅವನ್ನು ನಿಯಂತ್ರಿಸಲು ವಿಯೆಟ್ನಾಂ ಕೈಗೊಂಡಿರುವ ಕ್ರಮಗಳನ್ನು ನಮ್ಮ ದೇಶವು ಪರಿಶೀಲಿಸುವ ಅಗತ್ಯವಿದೆ ಮತ್ತು ಅವನ್ನು ನಮ್ಮ ಸಂದರ್ಭಕ್ಕೆ ಅಳವಡಿಸಿಕೊಳ್ಳುವ ಪ್ರಯತ್ನವೂ ಆಗಬೇಕಾಗಿದೆ. ಅದನ್ನು ಮಾಡದೆಯೇ ನಾವು ವಾಲ್‌ಮಾರ್ಟ್‌ನಂತಹ ವ್ಯಾಪಾರಿ ಸಂಸ್ಥೆಗಳನ್ನು ಬರಮಾಡಿಕೊಂಡು ಅನಾಹುತವನ್ನು ಆಹ್ವಾನಿಸಿಕೊಳ್ಳುತ್ತಿದ್ದೇವೆ.) ಭಾರತದ ಷೇರುಪೇಟೆಯ ವಿವರಗಳನ್ನು ೨೦ನೆಯ ಪುಟದಲ್ಲಿ ನೋಡಬಹುದು. ಮುಂಬೈನಲ್ಲಿ ಗಣೇಶನ ವಿಸರ್ಜನೆಯ ದೀರ್ಘ ವರದಿಯೊಂದು ಚಿತ್ರಗಳೊಡನೆ ೨೪ನೆ ಪುಟದಲ್ಲಿ ಪ್ರಕಟವಾಗಿದೆ. ಜಾಹಿರಾತುಗಳು ಒಟ್ಟು ೧೧ ಪುಟಗಳು. ಇಂತಹ ''ವಿಯೆಟ್ನಾಂ ನ್ಯೂಸ್'' ನಮ್ಮ ದೇಶಕ್ಕೆ ಪ್ರಸ್ತುತವೋ, ನಮ್ಮನ್ನು ಅವಗಣನೆಗೆ ಗುರಿ ಮಾಡುವ ನ್ಯೂಯಾರ್ಕ್ ಟೈಮ್ಸ್ ಪ್ರಸ್ತುತವೋ ಎಂಬುದನ್ನು ನಮ್ಮ ಪತ್ರಿಕೆಗಳು ಪರಿಶೀಲಿಸಬೇಕು. ಯಾವ ಪತ್ರಿಕೆಗಳ ಲೇಖನಗಳನ್ನು ನಮ್ಮಲ್ಲಿ ಪ್ರಚುರಪಡಿಸಬೇಕೆಂಬುದು ಅದರಿಂದ ಗೊತ್ತಾಗುವುದು ಖಚಿತ. ೩೨ ಪುಟಗಳ ಟ್ಯಾಬ್ಲಾಯ್ಡ್ ಸ್ವರೂಪದ ಪತ್ರಿಕೆಯ ಬೆಲೆ ೧೨ ರೂಪಾಯಿಗಳು. ವಿಯೆಟ್ನಾಮಿನ ಜನರ ಜೀವನಮಟ್ಟವು ಇದರಿಂದಲೂ ಸ್ವಲ್ಪಮಟ್ಟಿಗೆ ತಿಳಿಯುತ್ತದೆ.

* * *

ಒಂದು ಆಟದಲ್ಲಿ ಭಾರತದ ಕ್ರಿಕೆಟ್ ಬೋರ್ಡಿನ ತಂಡವು ಗೆದ್ದರೆ ದೇಶಕ್ಕೆ ಮೋಕ್ಷ, ಇಲ್ಲದಿದ್ದರೆ ಭೂಕಂಪವಾದಂತೆ, ಎಂದು ಭಾವಿಸುವ ಕ್ರಿಕೆಟ್ ಮಾದಕದ್ರವ್ಯ ವ್ಯಸನಿಗಳಿಗೆ ವಡೋದರದಲ್ಲಿ ನಡೆದ ಪಂದ್ಯದಲ್ಲಿ ಆಸ್ಟ್ರೇಲಿಯಾ ತಂಡವು ವಡೆಗಳನ್ನು ಚೆನ್ನಾಗಿ ತಿನ್ನಿಸಿ ಕ್ರಿಕೆಟ್ಟಿನ ಅಂತಿಮ ಸಂಸ್ಕಾರ ನೆರವೇರಿಸಿತೆಂದು ಕೆಲವು ಸಿನಿಕರು ಸಂಭ್ರಮಿಸಿದ್ದಾರೆ. ಆ ಪಂದ್ಯದ ವೀಕ್ಷಕ ವಿವರಣೆ ನೀಡುತ್ತಿದ್ದವರು ಹೀಗೆ ಹೇಳಬೇಕಾಗಿತ್ತೆಂದು ಅವರ ಅಂಬೋಣ: ''ನರಮೇಧೇಂದ್ರ ಮೋದಿಯವರು ಗುಜರಾತಿನಲ್ಲಿ ರುಂಡಗಳನ್ನು ಚೆಂಡಾಡಿದಂತೆ ಬರೋಡದಲ್ಲಿ ಪೋಂಟಿಂಗ್ ಭೂಪರು ಧೋನಿ ಧಾಂಡಿಗರನ್ನು ಒಂದೊಂದೇ ಏಟಿಗೆ ಉರುಳಿಸಿಬಿಟ್ಟರು.'' ಇವರು ಹೇಗೆ ಉರುಳಿದರೂ ಜಾಹಿರಾತುಗಳಿಂದ ಲಭಿಸುವ ದಂಡದ ಧನ ಕಡಿಮೆಯಾಗುವುದಿಲ್ಲವೆಂಬ ಸಮಾಧಾನ ಆಟಗಾರರದು. ಕ್ರಿಕೆಟ್ಟಿಗೆ ಚಾಪೆಲ್ ಬಂದು ''ಕೀರ್ತಿ'' ತಂದುಕೊಟ್ಟ. ಈಗ ಹಾಕಿಗೆ ಅದೇ ಆಸ್ಟ್ರೇಲಿಯಾದ ಚಾರ್ಲ್ಸ್‌ವರ್ತ್ ಕಿರೀಟ ತೊಡಿಸಲು ಬರುತ್ತಿದ್ದಾನೆ. ''ಫೋರಿನ್ ಟಚ್'' ಇಲ್ಲದೆ ನಮ್ಮ ದೇಶದಲ್ಲಿ ಏನೂ ಕಂಗೊಳಿಸುವುದಿಲ್ಲ!

* * *

ಬೇನಜೀರ್ ಭುಟ್ಟೋ ಪಾಕಿಸ್ತಾನಕ್ಕೆ ಹಿಂದಿರುಗಲು ಮುಷರಫ್‌ರೊಡನೆ ಮಾಡಿಕೊಂಡ ಒಪ್ಪಂದವು ಅನೀತಿಯುತವೆಂದು ತೋರುತ್ತದೆ. ಬಹುಶಃ ಅನ್ಯಮಾರ್ಗವಿಲ್ಲದೆ ಇಬ್ಬರೂ ಪರಸ್ಪರ ಕುಕೃತ್ಯಗಳನ್ನು ಮರೆತುಬಿಡುವ ಒಡಂಬಡಿಕೆ ಮಾಡಿಕೊಂಡಿದ್ದಾರೆ. ಅದರಿಂದ ಮಿಲಿಟರಿ ಆಡಳಿತ ಕೊನೆಯಾಗಿ, ಜನಾಭಿಪ್ರಾಯಕ್ಕೆ ಮನ್ನಣೆ ಸಿಗಬಹುದೆಂಬ ಆಶಯವಿದೆ. ಅಪರಿಮಿತ ಉತ್ಸಾಹದ ಸ್ವಾಗತದ ಜೊತೆಗೆ ಬೇನಜೀರ್‌ಗೆ ಬಾಂಬುಗಳ ರುಚಿಯೂ ದೊರೆಯುವಂತಾಗಿ ೧೫೦ ಜನ ಹತರಾದ್ದು ಆ ದೇಶದಲ್ಲಿ ಒಳಗೇ ಕುದಿಯುತ್ತಿರುವ ದ್ವೇಷ ಮತ್ತು ಜಡ್ಡು ಮತಾಂಧತೆಯ ಸೂಚನೆಯಾಗಿದೆ. ತಾಲಿಬಾನನ್ನು ಬೆಳೆಸಿದ ಅಮೆರಿಕಾ ಭೌಗೋಳಿಕವಾಗಿ ದೂರದಲ್ಲಿದೆ. ಅದಕ್ಕೆ ನೇರ ಪೆಟ್ಟು ಬೀಳುವುದು ವಿರಳ. ಆದರೆ ಆಫ್ಘಾನಿಸ್ತಾನದಲ್ಲಿ ದಿನನಿತ್ಯ ಅಮೆರಿಕಾ ಮತ್ತು ತಾಲಿಬಾನ್, ಹೀಗೆ ಇಬ್ಬರ ಧಾಳಿಯನ್ನೂ ಜನ ಸಹಿಸಬೇಕಾಗಿದೆ. ಮಹಿಳೆಯು ಸ್ವತಂತ್ರವಾಗಿ ದಿಟ್ಟತನದಿಂದ ಬೆಳೆಯುವುದನ್ನು ಸಹಿಸದ ತಾಲಿಬಾನ್ ಜೊತೆ ಹಿಂದಿನ ಪಾಕಿಸ್ತಾನಿ ಮಿಲಿಟರಿ ಆಡಳಿತಗಾರರ ಒಂದು ವಿಭಾಗವೂ ಸೇರಿ ಬೇನಜೀರ್ ಅವರಿಗೆ ಪ್ರತಿರೋಧ ಒಡ್ಡುತ್ತಿದೆ, ಕೊಲೆಯ ಯತ್ನವನ್ನೂ ಮಾಡುತ್ತಿದೆ. ಆಕೆ ಅಧಿಕಾರಕ್ಕೆ ಬಂದರೆ ತಾಲಿಬಾನ್‌ನ ವ್ಯಾಪ್ತಿ ಕುಗ್ಗುತ್ತದೆಯೆಂಬ ಆತಂಕವು ಮುಲ್ಲಾಗಳಿಗೆ ಮುಳ್ಳಾಗಿದೆ. ತಾಲಿಬಾನ್ ಮತ್ತು ಅಮೆರಿಕಾ ಆಫ್ಘಾನಿಸ್ತಾನದಿಂದ ತೊಲಗುವ ತನಕ ಅಲ್ಲಿ ಮತ್ತು ಪಾಕಿಸ್ತಾನದಲ್ಲಿ ಶಾಂತಿ ಮತ್ತು ಪ್ರಜಾಪ್ರಭುತ್ವ ನೆಲೆಸಲಾರವು.

''**ಯಾ**ವುದೇ ಶಕ್ತಿಯ ಮೂಲವು 'ಕತ್ತಲಿನ ಜಗತ್ತಿನಷ್ಟು' ತುಟ್ಟಿಯಲ್ಲ'' ಎಂದು ಭಾರತದ ಪರಮಾಣು ಕಾರ್ಯಕ್ರಮದ ರೂವಾರಿಗಳಾದ ಹೋಮಿ ಭಾಭಾ ಒಮ್ಮೆ ಹೇಳಿದ್ದರು. ಈ ಹೇಳಿಕೆಯನ್ನು ನಾವು ಗ್ರಹಿಸಿಕೊಳ್ಳಬೇಕಾದರೆ ಜಗತ್ತಿನ ಸುತ್ತಲೂ ಒಮ್ಮೆ ಕಣ್ಣು ಹಾಯಿಸಬೇಕು. ವಿಶ್ವದ ಒಟ್ಟು ಜನಸಂಖ್ಯೆಯಲ್ಲಿ ಶೇ. ೨೦ರಷ್ಟು ಪಾಲು ಹೊಂದಿರುವ ಮುಂದುವರೆದ ರಾಷ್ಟ್ರಗಳು ವಿಶ್ವದ ಶೇ. ೮೦ರಷ್ಟು ಇಂಧನವನ್ನು ಬಳಸುತ್ತಿವೆ. ಅದೇ ವೇಳೆ, ಭಾರತದ ಒಟ್ಟಾರೆ ಆಮದು ವೆಚ್ಚದಲ್ಲಿ ಶೇ. ೮೦ರಷ್ಟು ತೈಲ ಆಮದಿಗಾಗಿ ವ್ಯಯವಾಗುತ್ತಿದ್ದು, ವಿಶ್ವ ತೈಲ ಬಳಕೆಯಲ್ಲಿ ಶೇ. ೨ರಷ್ಟು ಪಾಲನ್ನು ಮಾತ್ರವೇ ಭಾರತ ಹೊಂದಿದೆ. ಇರಾನ್ ಮೇಲೆ ತನ್ನ ಪಾರುಪತ್ಯ ಸ್ಥಾಪಿಸ ಹೊರಟಿರುವ ಅಮೆರಿಕಾ ಮತ್ತು ಭಾರತ-ಅಮೆರಿಕಾ ಪರಮಾಣು ಸಹಕಾರ ಒಪ್ಪಂದದ ವಿಷಯಗಳನ್ನು ಈ ಹಿನ್ನೆಲೆಯಲ್ಲಿ ನೋಡಬೇಕಿದೆ.

ಭಾರತದ ಇಂಧನ ಅವಶ್ಯಕತೆಗಳು ಮತ್ತು ಸಂಪನ್ಮೂಲಗಳನ್ನೊಮ್ಮೆ ಪರಿಶೀಲಿಸೋಣ. ಮುಂದುವರೆದ ರಾಷ್ಟ್ರಗಳಿಗೆ (ವಾರ್ಷಿಕ ೧೨,೦೦೦ ಕಿ.ವ್ಯಾ. ಘಂ.) ಹೋಲಿಸಿದಲ್ಲಿ ಭಾರತದ (೬೨೦ ಕಿ.ವ್ಯಾ.ಘಂ.) ತಲಾ ವಿದ್ಯುತ್ ಬಳಕೆ ತೀರಾ ಕಡಿಮೆ. ಪಶ್ಚಿಮ ರಾಷ್ಟ್ರಗಳ ''ಮುಂದುವರೆದ ಜೀವನ ಶೈಲಿ''ಯು ಭೂಮಿಯ ಇಂಧನ, ಖನಿಜಗಳು ಮತ್ತು ಜೈವಿಕ ಸಂಪತ್ತು ಎಲ್ಲವನ್ನು ಅನಗತ್ಯ ಖಾಲಿ ಮಾಡುತ್ತಿದ್ದು, ವಾಸ್ತವವಾಗಿ ''ಅದೆಷ್ಟು ಹಿಂದುಳಿದ ಶೈಲಿ''ಯೆಂದು ತೋರಿಸುತ್ತದೆಂಬುದು ಬೇರೆಯ ಮಾತು. ಆದರೂ, ನಮ್ಮ ಪ್ರಜೆಗಳಿಗೆ ಉತ್ತಮ ಜೀವನ ಮತ್ತು ಉದ್ಯೋಗಗಳನ್ನು ಒದಗಿಸಬೇಕಾದರೆ ರಾಷ್ಟ್ರದ ಕೈಗಾರಿಕೀಕರಣದಿಂದ ಮಾತ್ರ ಸಾಧ್ಯವೆಂಬುದು ಸತ್ಯ. ಭಾರತದಲ್ಲಿ ಕೃಷಿಯ ಕಾಯಕದಲ್ಲಿ ತೊಡಗಿರುವವರ ಸಂಖ್ಯೆ ಶೇ. ೭೦ರಷ್ಟಿದ್ದರೆ, ಇಂಗ್ಲೆಂಡ್ ಮತ್ತು ಯೂರೋಪಿನ ಔದ್ಯಮಿಕ ರಾಷ್ಟ್ರಗಳಲ್ಲಿ ಆ ಸಂಖ್ಯೆ ಶೇ. ೫ರಿಂದ ೧೦. ಯೂರೋಪಿನ ಕೈಗಾರಿಕಾ ಕ್ರಾಂತಿಯು ಉಗಿಯಂತ್ರದಿಂದ ಉಂಟಾಗಲು ಸಾಧ್ಯವಿದ್ದಿತೇ ಹೊರತು ಭಾರತದ ಎತ್ತಿನಬಂಡಿ ಅಥವಾ ನೂಲುವ ಚರಕದಿಂದ ಉದ್ಭವಿಸಲು ಅಸಾಧ್ಯವಿತ್ತು. ಭಾರತದ ಪೂರ್ವಭಾಗದಲ್ಲಿ ಅಗಾಧ ಕಲ್ಲಿದ್ದಲು ದೊರಕುವುದಾದರೂ, ಉಷ್ಣ ವಿದ್ಯುತ್ ಸ್ಥಾವರಗಳು ಬೇರೆಡೆ ಇರುವುದರಿಂದ ಕಲ್ಲಿದ್ದಲಿನ ಸಾಗಾಣಿಕೆಗಾಗಿ ತಗಲುವ ದುಬಾರಿ ವೆಚ್ಚದಿಂದಾಗಿಯೇ ವಿದ್ಯುತ್ ಬಲು ತುಟ್ಟಿಯೆನಿಸಿದೆ. ನಮ್ಮ ಒಟ್ಟಾರೆ ಜಲವಿದ್ಯುತ್ ಸಾಮರ್ಥ್ಯದಲ್ಲಿ ಕೇವಲ ಶೇ. ೧೦ರಷ್ಟನ್ನು ಮಾತ್ರ ನಾವು ಬಳಸಿಕೊಳ್ಳುತ್ತಿದ್ದೇವೆ.

ಇಂತಹ ಪರಿಸ್ಥಿತಿಯಲ್ಲಿ ಪರಮಾಣು ವಿದ್ಯುತ್ ಮಾತ್ರವೇ ಪರಿಹಾರವೆಂದು ಹೇಳುವ ಬದಲು ಅದರ ಸಾಮರ್ಥ್ಯವನ್ನು ನಾವು ಕೆಲಮಟ್ಟಿಗೆ ಬಳಸಿಕೊಳ್ಳುವ ನಿಟ್ಟಿನಲ್ಲಿ ಆಲೋಚಿಸಬೇಕು.

ಯಾವುದೇ ಪರಮಾಣು ಉಪಕರಣಕ್ಕೆ ಅತ್ಯಗತ್ಯವಾಗಿರುವುದು ಪರಮಾಣು ಇಂಧನ. ಯುರೇನಿಯಂ-೨೩೫ ಎಂಬ ವಿಕಿರಣ ವಸ್ತುವಿನ ನ್ಯೂಕ್ಲಿಯಸ್ ಎರಡಾಗಿ ವಿಭಜನೆ ಹೊಂದುವ ಪರಮಾಣು ಪ್ರಕ್ರಿಯೆಯು ಅತ್ಯುಪಕಾರಿಯಾಗಿದೆ. ಒಂದೇ ಒಂದು ಯುರೇನಿಯಂ-೨೩೫ ನ್ಯೂಕ್ಲಿಯಸ್ ಎರಡು ನ್ಯೂಟ್ರಾನ್‌ಗಳನ್ನು ಬಿಡುಗಡೆ ಮಾಡುತ್ತದೆ. ಹೀಗೆ ಬಿಡುಗಡೆಯಾದ ಈ ಪ್ರತಿ ನ್ಯೂಟ್ರಾನ್ ಮತ್ತೆ ಎರಡಾಗಿ ವಿಭಜನೆ ಹೊಂದುತ್ತದೆ. ಈ ಪ್ರಕ್ರಿಯೆಯು ನಿರಂತರವಾಗಿ ಸರಣಿಯೋಪಾದಿಯಲ್ಲಿ ಜರುಗುತ್ತದೆ. ಹೊಸ ಹೊಸ ನ್ಯೂಟ್ರಾನುಗಳು ಬಿಡುಗಡೆಯಾಗುತ್ತಾ ವೇಗವಾಗಿ ಹೊರ ಹೊಮ್ಮುವುದನ್ನು ನಿಯಂತ್ರಿಸಲು ನಿಯಂತ್ರಣ ರಾಡ್‌ಗಳನ್ನು ಬಳಸಲಾಗುತ್ತದೆ. ಬೋರಾನ್, ಕ್ಯಾಡ್ಮಿಯಂ, ಗ್ಯಾಡೋಲಿನಿಯಂ ಇತ್ಯಾದಿಯಿಂದ ತಯಾರಿಸಲ್ಪಟ್ಟ ನಿಯಂತ್ರಣ ರಾಡ್‌ಗಳು ನ್ಯೂಕ್ಲಿಯರ್ ಸ್ಥಾವರದಲ್ಲಿ ಸರಣಿ ಪ್ರಕ್ರಿಯೆಯು ಒಂದು ನಿರ್ದಿಷ್ಟ ಮಿತಿಯಲ್ಲಿರುವಂತೆ ನಿಯಂತ್ರಿಸುತ್ತವೆ. ನ್ಯೂಟ್ರಾನ್ ಬಿಡುಗಡೆ ಹೊಂದುವ ಸಂದರ್ಭದಲ್ಲಿ ಅಗಾಧ ಪ್ರಮಾಣದ ಶಾಖ ಬಿಡುಗಡೆಯಾಗುತ್ತದೆ. ಸ್ಥಾವರಗಳ ಸುತ್ತಲೂ ತಣ್ಣಗಿನ ನೀರನ್ನು ಹಾಯಿಸಿ ಶಾಖವನ್ನು ವಿದ್ಯುತ್ ತಯಾರಿಸಲು ಬಳಸಲಾಗುತ್ತದೆ. ಬಾಂಬು ತಯಾರಿಸಲು ಕೂಡ ಯುರೇನಿಯಂ-೨೩೫ಅನ್ನು ಬಳಸುತ್ತಾರೆ. ಯುರೇನಿಯಂ ಅದಿರಿನಲ್ಲಿ ಯುರೇನಿಯಂ-೨೩೫ ಪ್ರಮಾಣ ಕೇವಲ ೦.೭೧೫ ಮಾತ್ರವಿದ್ದು ಹೆಚ್ಚಾಗಿ ಯುರೇನಿಯಂ-೨೩೮ ಇರುತ್ತದೆ. ಯುರೇನಿಯಂ-೨೩೮ನಿಂದ ವಿದಳನ ಕ್ರಿಯೆ ನಡೆಸಲು ಸಾಧ್ಯವಿದ್ದಲ್ಲಿ ಹೆಚ್ಚು ಲಾಭಕರವಾಗುತ್ತದೆ. ಅದೃಷ್ಟವಶಾತ್ ನಿಸರ್ಗ ನಮಗೆ ಪರೋಕ್ಷವಾದ ಅವಕಾಶ ನೀಡಿದ್ದು, ಯುರೇನಿಯಂ-೨೩೮ಅನ್ನು ವಿದಳನಗೊಳಿಸಬಲ್ಲ ನ್ಯೂಕ್ಲಿಯಸ್ ಎಂದು ಪರಿಗಣಿಸಬಹುದು. ಒಂದು ನ್ಯೂಟ್ರಾನ್‌ನಿಂದ ಅದನ್ನು ತಾಗಿಸಿದಾಗ ಅದು ಪ್ಲುಟೋನಿಯಂ-೨೩೯ ಎಂದು ಕರೆಯುವ ನ್ಯೂಕ್ಲಿಯಸ್‌ಅನ್ನು ನೀಡುತ್ತದೆ. ಇದು ವಿದಳನವಾಗಬಲ್ಲ ನ್ಯೂಕ್ಲಿಯಸ್, ಮತ್ತೊಂದು ವಿದಳನಗೊಳ್ಳಬಲ್ಲ ನ್ಯೂಕ್ಲಿಯಸ್ ಎಂದರೆ ಥೋರಿಯಂ-೨೩೨ ಆಗಿದ್ದು, ಇಂಧನವಾಗಿ ಬಳಸಲಾಗುವ ಯುರೇನಿಯಂ -೨೩೩ಅನ್ನು ಪಡೆಯಬಹುದು.

ನಮ್ಮ ಯುರೇನಿಯಂ ನಿಕ್ಷೇಪಗಳು ತೀರಾ ಕಡಿಮೆ ಪ್ರಮಾಣದಲ್ಲಿದ್ದು, ಥೋರಿಯಂ ನಿಕ್ಷೇಪಗಳು ಹೇರಳವಾಗಿವೆ. ನಮ್ಮ ಖನಿಜ ಸಂಪನ್ಮೂಲಗಳಲ್ಲಿ ೭೮,೦೦೦ ಟನ್‌ಗಳಷ್ಟು ನೈಸರ್ಗಿಕ ಯುರೇನಿಯಂ ಇದ್ದು, ೫,೧೮,೦೦೦ ಟನ್‌ಗಳಷ್ಟು ಥೋರಿಯಂ ಇದೆ. ಒಂದು ಕೆ.ಜಿ. ಯುರೇನಿಯಂ-೨೩೫ಅನ್ನು ಪರಮಾಣು ವಿದಳನಕ್ಕೊಳಪಡಿಸಿ ಪಡೆಯಬಹುದಾದ ಪ್ರಕ್ರಿಯೆಯ ಶಾಖ ೨೬೦೦ ಟನ್‌ಗಳಷ್ಟು ಕಲ್ಲಿದ್ದಲನ್ನು ಸುಡುವುದಕ್ಕೆ ಸಮ. ಆದರೂ ಯುರೇನಿಯಂ ಗಣಿ ಕೆಲಸ ಸಂಸ್ಕರಣೆಯು ಕಲ್ಲಿದ್ದಲು ಸಂಸ್ಕರಣೆಗೆ ಹೋಲಿಸಿದಲ್ಲಿ ಭಾರಿ ಶ್ರಮದಾಯಕ. ಇದಲ್ಲದೆ ಕಲ್ಲಿದ್ದಲು ಮತ್ತು ತೈಲವನ್ನು ಇತರೆ ಕೈಗಾರಿಕಾ ಬಳಕೆಗಳಿಗಾಗಿ ಸಂರಕ್ಷಿಸುವ ಅಗತ್ಯವಿದೆ. ವಿಶ್ವದಲ್ಲಿ ಒಟ್ಟಾರೆ ೪೩೯ ಪರಮಾಣು ಸ್ಥಾವರಗಳಿದ್ದು, ವಿಶ್ವದ ಇಂಧನ ಉತ್ಪಾದನೆಯಲ್ಲಿ ಶೇ. ೧೬ರಷ್ಟು ಪಾಲು ಹೊಂದಿವೆ. ಹೆಚ್ಚಿನ ಪರಮಾಣು

**ಡಾ|| ಎಸ್. ಚಟರ್ಜಿ**

# ಭಾರತ-ಅಮೆರಿಕಾ ಪರಮಾಣು ಸಹಕಾರ ಒಪ್ಪಂದ

## ತಿರುಚಿದ ಕಥೆಯನ್ನು ಸರಿಪಡಿಸುವತ್ತ

ಭಾರತ–ಅಮೆರಿಕಾ ಪರಮಾಣು ಒಪ್ಪಂದ ವಿಷಯದಲ್ಲಿ ಅಡಗಿರುವ ಕುತೂಹಲಕಾರಿ ಅಂಶವೆಂದರೆ, ಮೂರು ಹಂತಗಳಲ್ಲಿ ಯಾವುದೊಂದು ಭಾಗಕ್ಕೆ ಈ ಒಪ್ಪಂದದಿಂದ ಭಾರತಕ್ಕೆ ಲಾಭದಾಯಕವಾಗುತ್ತದೆ ಹಾಗೂ ನಿರೀಕ್ಷಿತ ಫಲಿತಾಂಶ ದೊರೆಯಲು ಅವಶ್ಯವಿರುವ ಕಾಲಾವಧಿ ಎಷ್ಟು ಎಂಬುದನ್ನು ಸರ್ಕಾರ ಹೇಳದೇ ಇರುವುದು. ಅತ್ಯಂತ ಪ್ರಮುಖ ಪ್ರಶ್ನೆಯೆಂದರೆ : ಇದು ಸಂಶೋಧನೆ ಮತ್ತು ಅಭಿವೃದ್ಧಿಗೆ ವರವಾಗುತ್ತದೆಯೋ ಅಥವಾ ಪೂರ್ಣಗೊಳಿಸಿದ ತಂತ್ರಜ್ಞಾನವನ್ನು ತರುತ್ತದೆಯೋ ಎಂಬುದು. ಇದೇನೇ ಇರಲಿ, ಭಾರತ ಮಾತ್ರ ತನ್ನ ನಾಗರಿಕ ಪರಮಾಣು ಕಾರ್ಯಕ್ರಮವನ್ನು ಮಿಲಿಟರಿಯಿಂದ ಬೇರ್ಪಡಿಸಬೇಕೆಂಬ ಷರತ್ತಿದೆ. ನಾಗರಿಕ ಪರಮಾಣು ಕಾರ್ಯಕ್ರಮವನ್ನು ಅಂತರರಾಷ್ಟ್ರೀಯ ಅಣು ಶಕ್ತಿ ಸಂಸ್ಥೆ (ಐ.ಎ.ಇ.ಎ.)ಯು ಪರಿವೀಕ್ಷಣೆ ಮಾಡುತ್ತದೆ.

ಸಾಮರ್ಥ್ಯವನ್ನು ಹೊಂದಿರುವ ರಾಷ್ಟ್ರಗಳೇ ತೈಲವನ್ನು ಬಳಸುತ್ತಿದ್ದು ಆ ರಾಷ್ಟ್ರಗಳ ಬಹುರಾಷ್ಟ್ರೀಯ ಕಂಪನಿಗಳು ಬೃಹತ್ ತೈಲ ವ್ಯಾಪಾರದಲ್ಲಿ ತೊಡಗಿವೆ.

ಅತಿ ಪ್ರಮುಖ ಅಂಶವೆಂದರೆ, ಇಂಧನ ಬಿಕ್ಕಟ್ಟು ತೀವ್ರಗೊಳ್ಳುತ್ತಿದ್ದು, ಭೂಮಿಯ ತಾಪಮಾನ ಹೆಚ್ಚಾಗುತ್ತಿರುವುದು ವಾಸ್ತವವೇ. ತೈಲದ ಭೌಗೋಳಿಕ - ರಾಜಕೀಯ ಮತ್ತು ಪರಿಸರ ಸೂಕ್ಷ್ಮತೆಗಳು ಇಂಗಾಲರಹಿತ ಶಕ್ತಿಯ ಮೂಲಗಳನ್ನು ಶೋಧಿಸಲು ಆಗ್ರಹಿಸುತ್ತವೆ. ತೈಲ ಮತ್ತು ಕಲ್ಲಿದ್ದಲಿನ ಮೂಲಗಳಿಗೆ ಹೋಲಿಸಿದಾಗ, ತುಟ್ಟಿ ಎನಿಸಿದರೂ ಪರಮಾಣು ಇಂಧನ ಅಂಥದರಲ್ಲೊಂದು. ಈ ಪರ್ಯಾಯವನ್ನು ಸಂಪೂರ್ಣವಾಗಿ ಕೈಬಿಡದೆ ಇತರೆ ಪರ್ಯಾಯಗಳನ್ನೂ ಶೋಧಿಸಬೇಕಿದೆ. ತೈಲ ಮತ್ತು ಕಲ್ಲಿದ್ದಲಿನ ಮೂಲಗಳ ಬೆಲೆಯು ಮುಂದೊಂದು ದಿನ ಪರಮಾಣು ಮೂಲದ ಬೆಲೆಯ ಮಟ್ಟವನ್ನು ತಲುಪಬಹುದು. ಸೌರಶಕ್ತಿಯು ಎಲ್ಲ ಸಮಸ್ಯೆಗಳಿಗೂ ಪರಿಹಾರ ಎಂಬುದಾಗಿ ಕೆಲವರು ವಾದಿಸುತ್ತಾರೆ. ಸೌರಕೋಶಗಳನ್ನು ಬಳಸಲು ಯಾವುದೇ ಇಂಧನದ ಅವಶ್ಯಕತೆಯಿಲ್ಲವಾದರೂ ಅವು ಬಲು ತುಟ್ಟಿ. ಇದರರ್ಥವೇನೆಂದರೆ ಸೌರಕೋಶಗಳನ್ನು ತಯಾರಿಸಲು ನಮಗೆ ಅತಿ ಹೆಚ್ಚಿನ ಇಂಧನ ಬೇಕಾಗುತ್ತದೆ. ಅಲ್ಲದೆ ಇದಕ್ಕಾಗಿ ತಯಾರಿಸಲು ವ್ಯಯ ಮಾಡಿದ್ದಕ್ಕಿಂತ ಹೆಚ್ಚಿನ ಇಂಧನವನ್ನು ಈ ಕೋಶಗಳು ನೀಡಬೇಕಾಗುತ್ತದೆ. ಅಂದರೆ, ಅವು ಪೂರ್ಣ ಸಾಮರ್ಥ್ಯದಲ್ಲಿ ಕನಿಷ್ಠ ೨೦ ವರ್ಷಗಳ ಕಾಲ ಬಳಕೆಯಲ್ಲಿರಬೇಕು ಮತ್ತು ಸೂರ್ಯನೂ ಪ್ರಕಾಶಮಾನ ಬೆಳಕನ್ನು ನೀಡುತ್ತಲೇ ಇರಬೇಕು. ವಾಯುಶಕ್ತಿಯ ವಿಷಯದಲ್ಲೂ ಇದೇ ಆಗಿದ್ದು, ಸದಾ ಗಾಳಿಯು ವೇಗವಾಗಿ ಬೀಸುತ್ತಿರಬೇಕು. ಇವುಗಳಿಗೂ ಹೆಚ್ಚಿನ ಆರಂಭಿಕ ಬಂಡವಾಳದ ಅಗತ್ಯವಿದೆ.

ಪರಮಾಣು ಇಂಧನವಾಗಿ ಅಥವಾ ಬಾಂಬು ತಯಾರಿಕೆಯಲ್ಲಿ ಬಳಸಲು ಯುರೇನಿಯಂ-೨೩೮ಅನ್ನು ನೈಸರ್ಗಿಕ ಅದಿರಿನಿಂದ ಬೇರ್ಪಡಿಸಬೇಕು. ಪರಮಾಣು ಇಂಧನದಲ್ಲಿ ಯುರೇನಿಯಂ-೨೩೫ ಪ್ರಮಾಣ ಶೇ. ೨.೦-೩.೦ ರಷ್ಟಿದ್ದರೆ, ಅಣು ಬಾಂಬಿನಲ್ಲಿ ಶೇ.೯೦ರಷ್ಟಿರುತ್ತದೆ. ಭಾರತವು ತಾರಾಪುರ ವಿದ್ಯುತ್ ಘಟಕದಲ್ಲಿ ಯುರೇನಿಯಂ ಬಳಸಿದರೆ ಪೋಕ್ರಾನ್‌ನಲ್ಲಿ ನಡೆಸಿದ ಅಣು ಪರೀಕ್ಷೆಯಲ್ಲಿ ಯುರೇನಿಯಂ ಮತ್ತು ಪ್ಲುಟೋನಿಯಂ ಅನ್ನು ಬಳಸಿತು. ಹೀಗಾಗಿ ಪರಮಾಣು ಕಾರ್ಯಕ್ರಮವು ತುಂಬಾ ಸಂಕೀರ್ಣದ್ದಾಗಿದ್ದು, ಭೌತಶಾಸ್ತ್ರಜ್ಞರು, ರಸಾಯನ ಶಾಸ್ತ್ರಜ್ಞರು, ಗಣಿ ತಂತ್ರಜ್ಞರು, ಮೆಕ್ಯಾನಿಕಲ್ ತಂತ್ರಜ್ಞರೇ ಅಲ್ಲದೆ ಇಲೆಕ್ಟ್ರಿಕಲ್, ಇಲೆಕ್ಟ್ರಾನಿಕ್ಸ್, ರೋಬೋಟಿಕ್ಸ್ ಇತ್ಯಾದಿ ವಿಭಾಗಗಳ ಸೂಕ್ಷ್ಮ ಸಂಯೋಜನೆಗಳ ಅವಶ್ಯಕತೆಯಿದೆ. ಇದರ ಪರಿಣಾಮಕಾರಿ ಕಾರ್ಯನಿರ್ವಹಣೆಗೆ ಮೂಲಭೂತ ಸೌಕರ್ಯ ಹಾಗೂ ಅಗತ್ಯ ಮಾನವ ಸಂಪನ್ಮೂಲಗಳ ಅವಶ್ಯವಿದೆ (ಪ್ರಸಕ್ತದಲ್ಲಿ ಭಾರತ ೬೫,೦೦೦ ಮಂದಿಯನ್ನು ಹೊಂದಿದೆ). ಭಾರತದ ಪರಮಾಣು ಯೋಜನೆಯು ಸ್ವಾವಲಂಬಿಯಾಗಿದೆ. ಆರಂಭದಲ್ಲಿ ಕೆನಡಾದೊಂದಿಗೆ ಮೈತ್ರಿ ಹೊಂದಿದ್ದರೂ, ನಾವೇ ಸ್ವತಃ ೨೩೫ ಮೆಗಾವ್ಯಾಟ್ ಮತ್ತು ೫೦೦ ಮೆಗಾವ್ಯಾಟ್ ಜನರೇಟರ್‌ಗಳನ್ನು ವಿನ್ಯಾಸಗೊಳಿಸಿ ನಿರ್ಮಿಸಿದ್ದೇವೆ. ನಮ್ಮ ಲೋಹ ಸಂಸ್ಕರಣಾ ವಿಧಾನಗಳು ಉನ್ನತ ಹಂತದಲ್ಲಿವೆ. ೧೯೫೯ರಲ್ಲೇ ನಾವು ಪ್ರಥಮ ಯುರೇನಿಯಂಅನ್ನು ಉತ್ಪಾದಿಸಿದೆವು ಮತ್ತು ಭಾರ ಜಲ, ಪ್ಲುಟೋನಿಯಂ, ಮುಂತಾದವುಗಳನ್ನು ತಯಾರಿಸುವ ತಂತ್ರಜ್ಞಾನ ಹೊಂದಿದ್ದೇವೆ. ಇತ್ತೀಚೆಗೆ, ೩೦ ವರ್ಷ ಹಳೆಯದಾದ ಸ್ಥಾವರವನ್ನು ಮತ್ತೆ ಅಳವಡಿಸಿ ಅದರ ಬಳಕೆಯನ್ನು ಇನ್ನೂ ೩೦ ವರ್ಷ

# ದೇವರಿಗೊಂದು ಬೇವರ್ಸಿಯೊಬ್ಬನ ಅರ್ಜಿ

ನನ್ನನ್ನೊಮ್ಮೆ ಕ್ಷಮಿಸಿ ಬಿಡು ದೇವರೆ
ಧರೆ ಮೇಲೆ ಉರಿಪಾದ ಊರಿ ನಡೆದಂತೆಲ್ಲಾ
ಯಾರೋ ನನ್ನ ತಲೆ ಮೇಲೂ ನಡೆದಂತಾಗುತ್ತಿದೆ
ಜಗದ ಆಗಲದ ನಡುವಿನಿಂದ ಯಾರೆ ಕರೆದರು
ಬಂದೂಕು, ಬಾಂಬ್ ಎಂತಲೆ ಕೇಳಿಸುತ್ತಿದೆ ನನಗೆ

ನಮ್ಮದಲ್ಲದ ಯಾರದೋ ಸಮಾಧಿಗಳನ್ನು ಮೃದುವಾಗಿ ಸವರುತ್ತಿದ್ದರೆ
ಜೀವಂತ ವ್ಯಕ್ತಿಗಳನ್ನು ಬಚ್ಚಿಟ್ಟುಕೊಂಡ
ಆ ಅಮೃತಶಿಲೆಯ ಗೋಡೆಗಳು ನನ್ನ ಕೈಗುರುತುಗಳನ್ನು
ಅಪ್ಪಿಕೊಳ್ಳುತ್ತಿವೆ

ಸುಮ್ಮನಿರಲಾರದೆ ಗುಲಾಬಿಗೆ ಮುತ್ತಿಡೋಣವೆಂದರೆ
ಎಚ್ಚೆತ್ತ ಗುಲಾಬಿ ಯಾವ ಕುಲ ? ಯಾವ ಮತ ? ವೆಂದು
ಪ್ರಶ್ನೆ ಕೇಳುತ್ತ ದಿಟ್ಟಿಸಿ ನೋಡುತ್ತಿದೆ.

ಒಂದಷ್ಟು ಸಮಾಧಾನಪಡೋಣವೆಂದು
ಬೊಗಸೆಯೊಳಗೊಂದಷ್ಟು ನೀರು ತುಂಬಿಕೊಂಡು
ಆ ಚಂದಿರನನ್ನು ಬಂಧಿಸಿ ಕುಡಿಯೋಣವೆಂದರೆ
ಬೊಗಸೆಯೊಳಗಿನ ನೀರು ಬೆರಳ ಸಂದಲ್ಲಿ ಸೋರಿಹೋಗಿ
ನಗುವ ಚಂದಿರ ಕೈಗಂಟಿಕೊಳ್ಳುತ್ತಿದ್ದಾನೆ

ದೂರಕ್ಕೆಲ್ಲಾದರು ಹೊರಟು ಬಿಡೋಣವೆಂದು
ದಿಕ್ಕು ಬಂದ ಕಡೆ ನಡೆದಂತೆಲ್ಲಾ
ಅವರಿವರು ಉದಾಸೀನವಾಗಿ ಬಿಟ್ಟಂತಹ ಬಿಸಿಯುಸಿರು
ನನ್ನ ಗುಂಡಿಗೆಯನ್ನು ಹಿಚುಕುತ್ತಿದೆ

ಇದು ಯಾವುದು ಬೇಡವೆಂದು
ಎಲ್ಲಾದರು ನೆಲಕ್ಕೆ ಬೆನ್ನು ಮುಟ್ಟಿಸೋಣವೆಂದರೆ
ನಗುವ ಅಮೃತಶಿಲೆಯ ಸಮಾಧಿಗಳು
ಮುಳ್ಳುಗಳಾಗಿ ಕೊಂಚ-ಕೊಂಚವೆ ಬೆನ್ನನ್ನು ಚುಚ್ಚುತ್ತಿವೆ

ನನ್ನನ್ನು ಈಗಲಾದರು ಕ್ಷಮಿಸಿಬಿಡು ದೇವರೆ
ಇವರನ್ನೆಲ್ಲಾ ಮುಟ್ಟಿ-ಮುಟ್ಟಿ ಅಪವಿತ್ರನಾಗುವುದಕ್ಕಿಂತ
ಮುಟ್ಟಿಸಿಕೊಳ್ಳದೆ ಪವಿತ್ರನಾಗಿರಬೇಕೆಂದುಕೊಂಡಿದ್ದೇನೆ.

ಲಕ್ಕೂರು ಸಿ. ಆನಂದ
'ಪದ್ಮಗೌರಿ', ಪೊಲೀಸ್ ಠಾಣೆ ಎದುರು, ಲಕ್ಕೂರು ಅಂಚೆ,
ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ - ೫೬೩ ೧೬೦





ಗೌಡರ ದಾಳಿ, 'ಬಿ.ಜೆ.ಪಿ'ಗೆ ಗಾಯ ಎಂಬ ಸುದ್ದಿ ಸದ್ಯ ಬರುವ ಲಕ್ಷಣ ಕಾಣುತ್ತಿದೆ...

ನಿಸರಿಸಿರುವುದು ನಮ್ಮ ಅದ್ಭುತ ತಂತ್ರಜ್ಞಾನ. ಭಾರತ-ಅಮೆರಿಕಾ ಪರಮಾಣು ಒಪ್ಪಂದದ ಪರಿಣಾಮಗಳನ್ನು ಅರ್ಥಮಾಡಿಕೊಳ್ಳಬೇಕಾದರೆ, ಮೊದಲಿಗೆ ನಮ್ಮ ದೇಶದ ಪರಮಾಣು ಕಾರ್ಯಕ್ರಮದ ಯೋಜನೆಗಳನ್ನು ಅರಿಯ ಬೇಕು. ಭಾರತವು ಮೂರು ಹಂತದ ಕಾರ್ಯಕ್ರಮವನ್ನು ಹೊಂದಿದೆ. ಮೊದಲ ಹಂತದಲ್ಲಿ ನೈಸರ್ಗಿಕವಾಗಿ ದೊರೆಯುವ ಯುರೇನಿಯಂ ಇಂಧನದಿಂದ ಸ್ಥಾವರ ಗಳನ್ನು ನಿರ್ಮಿಸಲಾಗುತ್ತದೆ. ಎರಡನೇ ಹಂತದಲ್ಲಿ ಯುರೇನಿಯಂ-೨೩೮ಅನ್ನು ಪ್ಲುಟೋನಿಯಂ-೨೩೯ಆಗಿ ಪರಿವರ್ತಿಸುವ ಪ್ರದಳನ ಸ್ಥಾವರಗಳನ್ನು (breeder reactors) ನಿರ್ಮಿಸಲಾಗುತ್ತಿದೆ. ಮೂರನೇ ಹಂತದಲ್ಲಿ, ಥೋರಿಯಂ-೨೩೨ಅನ್ನು ಯುರೇನಿಯಂ-೨೩೩ ಆಗಿ ಪರಿವರ್ತಿಸುವ ಥೋರಿಯಂ ಸ್ಥಾವರಗಳು (fast breeder) ಅಸ್ತಿತ್ವಕ್ಕೆ ಬರಲಿವೆ. ಭಾರತ ಈಗಾಗಲೇ ಎರಡನೇ ಹಂತದಲ್ಲಿ ಮೊದಲ ಹೆಜ್ಜೆಯಿಟ್ಟಿದೆ. ಸೂರ್ಯ ಶಕ್ತಿಯನ್ನು ಬಳಸಿಕೊಳ್ಳುವ ಸಂಶೋಧನೆಗಳನ್ನು ಮತ್ತಷ್ಟು ಹಿಗ್ಗಿಸುವ ಯೋಜನೆಗಳೂ ಇವೆ.

ಭಾರತ-ಅಮೆರಿಕಾ ಪರಮಾಣು ಒಪ್ಪಂದ ವಿಷಯದಲ್ಲಿ ಅಡಗಿರುವ ಕುತೂಹಲಕಾರಿ ಅಂಶವೆಂದರೆ, ಮೂರು ಹಂತಗಳಲ್ಲಿ ಯಾವುದೊಂದು ಭಾಗಕ್ಕೆ ಈ ಒಪ್ಪಂದದಿಂದ ಭಾರತಕ್ಕೆ ಲಾಭದಾಯಕವಾಗುತ್ತದೆ ಹಾಗೂ ನಿರೀಕ್ಷಿತ ಫಲಿತಾಂಶ ದೊರೆಯಲು ಅವಶ್ಯವಿರುವ ಕಾಲಾವಧಿ ಎಷ್ಟು ಎಂಬುದನ್ನು ಸರ್ಕಾರ ಹೇಳದೇ ಇರುವುದು. ಅತ್ಯಂತ ಪ್ರಮುಖ ಪ್ರಶ್ನೆಯೆಂದರೆ: ಇದು ಸಂಶೋಧನೆ ಮತ್ತು ಅಭಿವೃದ್ಧಿಗೆ ವರವಾಗುತ್ತದೆಯೋ ಅಥವಾ ಪೂರ್ಣಗೊಳಿಸಿದ ತಂತ್ರಜ್ಞಾನವನ್ನು ತರುತ್ತದೆಯೋ ಎಂಬುದು. ಇದೇನೇ ಇರಲಿ, ಭಾರತ ಮಾತ್ರ ತನ್ನ ನಾಗರಿಕ ಪರಮಾಣು ಕಾರ್ಯಕ್ರಮವನ್ನು ಮಿಲಿಟರಿಯಿಂದ ಬೇರ್ಪಡಿಸಬೇಕೆಂಬ ಷರತ್ತಿದೆ. ನಾಗರಿಕ ಪರಮಾಣು ಕಾರ್ಯಕ್ರಮವನ್ನು ಅಂತರರಾಷ್ಟ್ರೀಯ ಅಣು ಶಕ್ತಿ ಸಂಸ್ಥೆ (ಐ.ಎ.ಇ.ಎ.)ಯು ಪರಿವೀಕ್ಷಣೆ ಮಾಡುತ್ತದೆ.

ಅಣ್ವಸ್ತ್ರ ಪ್ರಸರಣ ನಿಷೇಧ ಒಪ್ಪಂದಕ್ಕೆ ಭಾರತವನ್ನು ದೂಡಲಾಗುತ್ತಿದ್ದು, ಇದರಿಂದ ಮತ್ತಷ್ಟು ನಿಬಂಧನೆಗಳಿಗೆ ಒಳಗಾಗಬೇಕಾಗುತ್ತದೆ. ಅದರ ಪ್ರಕಾರ ೧೯೬೮ರ ಹೊತ್ತಿಗೆ ಯಾವುದಾದರೂ ರಾಷ್ಟ್ರ ಅಣ್ವಸ್ತ್ರಗಳನ್ನು ಹೊಂದಿಲ್ಲದಿದ್ದರೆ, ಮುಂದಿನ ಭವಿಷ್ಯತ್ತಿನಲ್ಲಿ ಹೊಂದಲು ಅದಕ್ಕೆ ಅವಕಾಶವಿರುವುದಿಲ್ಲ. ಹೀಗಾಗಿ, ಅಮೆರಿಕಾ, ರಷ್ಯಾ, ಇಂಗ್ಲೆಂಡ್, ಫ್ರಾನ್ಸ್ ಮತ್ತು ಚೀಣಾ ದೇಶಗಳು ಮಾತ್ರವೇ ಇಚ್ಛೆಪಟ್ಟಷ್ಟು ಅಣ್ವಸ್ತ್ರಗಳನ್ನು ಹೊಂದಬಹುದು. ಇಂಥ ತಾರತಮ್ಯದಿಂದಾಗಿ ನಮ್ಮ ದೇಶವು ಅಣ್ವಸ್ತ್ರ ಪ್ರಸರಣ ನಿಷೇಧ ಒಪ್ಪಂದಕ್ಕೆ ಸಹಿ ಹಾಕಿಲ್ಲ. ಸಹಿ ಹಾಕದಿದ್ದ ರಿಂದಾಗಿಯೇ ಐ.ಎ.ಇ.ಎ. ಸಂಸ್ಥೆಯಿಂದ ನಮ್ಮ ರಾಷ್ಟ್ರ ತಪಾಸಣೆಗೊಳಗಾಗಬೇಕಿಲ್ಲ ಮತ್ತು ಅಣುಬಾಂಬುಗಳನ್ನು ನಾವು ಸಿದ್ಧಪಡಿಸುವ ಹಕ್ಕನ್ನು ಉಳಿಸಿಕೊಂಡಿದ್ದೇವೆ. ಇಂಥ ತಾರತಮ್ಯ ಒಪ್ಪಂದಗಳಿಗೆ ಸಹಿ ಹಾಕಿಸಿ ಶಾಂತಿಮಂತ್ರದ ನೆಪವೊಡ್ಡುವ ಅಣ್ವಸ್ತ್ರ ರಾಷ್ಟ್ರಗಳು, ಅದರ ಬದಲು ತಾವು ರಾಶಿಗಟ್ಟಲೆ ಸಂಗ್ರಹಿಸಿರುವ ಎಲ್ಲ ಅಣ್ವಸ್ತ್ರಗಳನ್ನು ನಾಶಗೊಳಿಸಿ ಶಾಂತಿ ನೆಲೆಸುವಂತೆ ಮಾಡುವ ಇಚ್ಛಾಶಕ್ತಿ ತೋರಲು ಮೊದಲು ಮುಂದಾಗಬೇಕು. ಅದರಲ್ಲೂ ಕ್ಷಿಪಣಿ ರಕ್ಷಣಾ ವ್ಯವಸ್ಥೆ ಯೋಜನೆಯನ್ನು ಅಮೆರಿಕಾ ಆರಂಭಿಸಿರುವುದರಿಂದ ಇಡೀ ಭೂಮಿಯಲ್ಲಿ ಶಾಂತಿ ಎನ್ನುವ ಪದಕ್ಕೆ ಅರ್ಥವೇ ಇಲ್ಲದಂತಾಗಿದೆ. ಐ.ಎ.ಇ.ಎ. ಸಂಸ್ಥೆಯು ನಾಗರಿಕ ಪರಮಾಣು ಕಾರ್ಯಕ್ರಮವನ್ನು ಮಾತ್ರವೇ ತಪಾಸಣೆ ಮಾಡುತ್ತದೆ ಎನ್ನಲಾಗುತ್ತಿದ್ದರೂ ಅಂತಿಮವಾಗಿ ಇದು ಸಂಶೋಧನೆ ಮತ್ತು ಅಭಿವೃದ್ಧಿಗಳಿಗೆ ತಡೆಗೋಡೆಯಾಗಿ ಪರಿಣಮಿಸುತ್ತದೆ.

ಭಾರತದಷ್ಟೇ ಪ್ರಮಾಣದ ಪರಮಾಣು ವಿದ್ಯುತ್ ಅನ್ನು ಉತ್ಪಾದಿಸುತ್ತಿರುವ ಅಮೆರಿಕಾ ೧೦೪ ಅಣುವಿದ್ಯುತ್ ಸ್ಥಾವರಗಳನ್ನು ಹೊಂದಿದ್ದು, ಶೇ. ೧೯ರಷ್ಟು ವಿದ್ಯುಚ್ಛಕ್ತಿಯನ್ನು ಉತ್ಪಾದಿಸುತ್ತಿದ್ದರೂ ಕಳೆದ ೨೦ ವರ್ಷಗಳಿಂದೀಚೆಗೆ ಯಾವುದೇ ಪ್ರಧಾನ ಸ್ಥಾವರ ವನ್ನು ಅದು ನಿರ್ಮಿಸಿಲ್ಲ, ಆದ್ದರಿಂದ ಈ ಒಪ್ಪಂದವು ಅಮೆರಿಕಾಗೆ ಲಾಭದಾಯಕವೋ ಅಥವಾ ಭಾರತಕ್ಕೆ ಲಾಭದಾಯಕವೋ ಎಂಬ ಪ್ರಶ್ನೆ ಉದ್ಭವಿಸುತ್ತದೆ.

ಭಾರತ-ಅಮೆರಿಕಾ ಪರಮಾಣು ಒಪ್ಪಂದಕ್ಕೆ ಚಾಲನೆ ನೀಡಿ ಈಗಾಗಲೇ ಎರಡು ವರ್ಷ ಸಂದಿದ್ದರೂ ಯುರೇನಿಯಂಅನ್ನು ಇದುವರೆಗೂ ಭಾರತಕ್ಕೆ ನೀಡಲು ಅಮೆರಿಕಾ ಮುಂದೆ ಬಂದಿಲ್ಲ. ಅಣ್ವಸ್ತ್ರ ಪ್ರಸರಣ ನಿಷೇಧ ಒಪ್ಪಂದಕ್ಕೆ ಭಾರತ ಸಹಿ ಹಾಕದ್ದರಿಂದ ಅಮೆರಿಕಾ ತಾನು ಭಾರತದ ಮೇಲೆ ವಿಧಿಸಿರುವ ೧೧೫೪ ಸಾಮಗ್ರಿಗಳ ಆಮದಿನ ದಿಗ್ಬಂಧನವನ್ನು ಹಿಂತೆಗೆದು ಕೊಂಡಿಲ್ಲ. ಇದಕ್ಕಿಂತಲೂ ಅಪಾಯಕಾರಿಯೆಂದರೆ, ಪ್ರದಳನ ಸ್ಥಾವರ ಯೋಜನೆಗಳನ್ನು ಭಾರತ ತಪಾಸಣೆಗೆ ನೀಡಬೇಕೆಂದು ಅಮೆರಿಕಾ ಒತ್ತಾಯಿಸುತ್ತಿರುವುದು.

ಈ ತಪಾಸಣೆಯ ಹಿಂದೆ ಅಡಗಿರುವ ಅಮೆರಿಕಾದ ಮೂರು ಹಿತಾಸಕ್ತಿಗಳೆಂದರೆ ಮೊದಲನೆಯದಾಗಿ, ಪ್ರದಳನ ಸ್ಥಾವರಗಳಲ್ಲಿನ ಅಮೆರಿಕಾದ ಅನುಭವ ಭಾರತಕ್ಕಿಂತ ಸೀಮಿತವಾದುದು. ಎರಡನೆಯದು, ಅಮೆರಿಕಾದ ಕೈಗಾರಿಕೆಗಳ ಉತ್ಪನ್ನಗಳಿಗೆ ಭಾರತದಲ್ಲಿ ಮಾರುಕಟ್ಟೆ ಒದಗಿ ಸುವುದು. ಮೂರನೆಯದಾಗಿ, ರಷ್ಯಾ ಮತ್ತು ಚೀನಾಗಳತ್ತ ವಾಲದಂತೆ ಭಾರತವನ್ನು ತನ್ನ ಹಿಡಿತದಲ್ಲಿ ಇರಿಸಿ ಕೊಳ್ಳುವುದು. ವಿಶ್ವದ ತೈಲ ನಿಕ್ಷೇಪಗಳಲ್ಲಿ ಶೇ. ೬೪ರಷ್ಟು ಪಾಲನ್ನು ಹೊಂದಿರುವ ಮಧ್ಯಪ್ರಾಚ್ಯದಲ್ಲಿ ತನ್ನ ಏಕಸ್ವಾಮ್ಯ ಸ್ಥಾಪಿಸಬೇಕಾದರೆ ಇರಾಕ್‌ಅನ್ನು ಬಗ್ಗುಬಡಿದಂತೆ ಇರಾನ್‌ಅನ್ನು ಕೂಡ ತನ್ನ ಅಂಕೆಯಲ್ಲಿಟ್ಟುಕೊಳ್ಳ ಬೇಕೆಂಬುದು ಅಮೆರಿಕಾದ ಹಂಚಿಕೆ. ಜಾಗತಿಕವಾಗಿ ಇರಾನ್‌ಅನ್ನು ಮೂಲೆಗುಂಪು ಮಾಡಲು ಭಾರತದ ಮೈತ್ರಿಯ ಅವಶ್ಯಕತೆ ಅಮೆರಿಕಾಗೆ ಬೇಕಾಗಿದೆ. ಅಮೆರಿಕಾದ ಆಣತಿಯಂತೆ ಈಗಾಗಲೇ ಭಾರತ ಎರಡು ಬಾರಿ ಐ.ಎ.ಇ.ಎ.ಯಲ್ಲಿ ಇರಾನ್ ವಿರುದ್ಧ ಮತ ಚಲಾಯಿಸಿದೆ. ಭಾರತ-ಇರಾನ್ ಅನಿಲ ಒಪ್ಪಂದವನ್ನು ಕೂಡ ಕೈಬಿಡುವಂತೆ ಕೊಂಡೋಲೀಸಾ ರೈಸ್ ಭಾರತದ ಮೇಲೆ ಒತ್ತಡ ತರುತ್ತಿದ್ದು, ಭಾರತದ ಭವಿಷ್ಯತ್ತಿನ ಇಂಧನ ಅವಶ್ಯಕತೆಗಳನ್ನು ಅಮೆರಿಕಾ ಪೂರೈಸಬಲ್ಲದೆಂದು ರಾಗ ಹಾಡುತ್ತಿದ್ದಾರೆ.

ಅದೃಷ್ಟವಶಾತ್ ಇರಾನ್ ಅನ್ನು ಮೂಲೆಗುಂಪು ಮಾಡುವ ವಿಷಯದಲ್ಲಿ ಭಾರತ ಇರಾನ್‌ಗೆ ಕೈಕೊಟ್ಟರೂ ಕ್ಯೂಬಾದಂಥ ಅಲಿಪ್ತ ರಾಷ್ಟ್ರಗಳು ಇರಾನ್‌ಅನ್ನು ಬೆಂಬಲಿಸಿವೆ. ''ಇರಾನ್ ರಹಸ್ಯವಾಗಿ ಶಸ್ತ್ರಾಸ್ತ್ರಗಳನ್ನು ತಯಾರಿಸುತ್ತಿದ್ದರೂ, ಭಾರತ ಅದರ ಮೇಲೆ ಒತ್ತಡ ತರಲು ಯಾವ ಹಂತಕ್ಕೆ ಹೋಗಬಯಸುತ್ತದೆ?'' ಎಂಬುದು ಎಲ್ಲ ರಾಜತಾಂತ್ರಿಕ ತಜ್ಞರ ಒಕ್ಕೊರಲ ಧ್ವನಿಯಾಗಿದೆ (ದಿ ಹಿಂದೂ, ೭-೨-೨೦೦೬). ಇವೆಲ್ಲ ಹಾದಿಗಳಲ್ಲೂ ಅಮೆರಿಕಾ ಜೊತೆ ಭಾರತ ಏಕೆ ಕೈಜೋಡಿಸಬೇಕು? ನಮ್ಮ ಮಿತ್ರ ರಾಷ್ಟ್ರಗಳು ಮತ್ತು ಜಾಗತಿಕ ಶಾಂತಿ ಬಯಸುವ ಜನತೆಯ ಜೊತೆ ನಾವಿರಬೇಕಲ್ಲವೆ?

ಇಂಥ ಪರಿಸ್ಥಿತಿಯಲ್ಲಿ, ೧೯೯೧ರಲ್ಲಿ ಆರ್. ಕೆ. ಲಕ್ಷ್ಮಣ್ ಅವರು ರಚಿಸಿದ್ದ ವ್ಯಂಗ್ಯ ಚಿತ್ರವೊಂದು ನೆನಪಿಗೆ ಬರುತ್ತದೆ. ಅದರಲ್ಲಿ ಪಿ. ವಿ. ನರಸಿಂಹರಾವ್ ಮತ್ತು ಅಂದಿನ ಹಣಕಾಸು ಮಂತ್ರಿ ಮನಮೋಹನ್ ಸಿಂಗ್ ಐ.ಎಂ.ಎಫ್. ಕಛೇರಿಯಿಂದ ಹೊರ ಬರುತ್ತಿರುವ ದೃಶ್ಯವಿದೆ. ಅವರ ತೋಳುಗಳಿಗೆ ಬ್ಯಾಂಡೇಜ್ ಕಟ್ಟಲಾಗಿದೆ. ನರಸಿಂಹರಾವ್‌ರವರು ಮನಮೋಹನ್ ಸಿಂಗ್ ಅವರಿಗೆ ಹೇಳುತ್ತಾರೆ: ''ನೋಡಿ ಮನಮೋಹನ್ ಸಿಂಗ್, ಅವರು ನಮ್ಮ ತೋಳು ಮುರಿದರು ಎಂದು ಜನರಿಗೆ ಹೇಳುವುದು ಬೇಡ, ನಾವೇ ನಮ್ಮ ತೋಳು ಮುರಿದುಕೊಂಡೆವು ಎಂದು ಹೇಳೋಣ.'' ಒಂದು ಹೆಮ್ಮೆಯ ರಾಷ್ಟ್ರವಾಗಿ ನಮ್ಮ ತೋಳನ್ನು ತಿರುಚಲು ಯಾರಿಗೂ ಅವಕಾಶ ನೀಡಬಾರದು. ಮತ್ತು ಗೌರವಾನ್ವಿತ ಜನರಾಗಿ ನಾವು ಇತರರ ತೋಳನ್ನು ತಿರುಚಬಾರದು. ಆದರೆ ತಮ್ಮ ತೋಳನ್ನು ತಾವೇ ತಿರುಚಿಕೊಂಡು ಹೆಮ್ಮೆಪಡುವ ಅನೇಕ ಮಂದಿ ನಮ್ಮಲ್ಲಿದ್ದಾರೆ. ಅಂಥ ತಿರುಚಿದ ತೋಳುಗಳು ಮತ್ತು ತಿರುಚಿದ ಮನೋಭಾವನೆಗಳನ್ನು ಸರಿಪಡಿಸುವುದು ಹೇಗೆಂದು ರಾಷ್ಟ್ರದ ಜನತೆಗೆ ತಿಳಿದಿದೆ. ಆದರೆ ತಿರುಚಿದ ಕಥೆಯನ್ನು ಮೊದಲಿಗೆ ಸರಿಪಡಿಸುವುದರಿಂದ ಈ ಪ್ರಕ್ರಿಯೆಯನ್ನು ಆರಂಭಿಸಬೇಕಿದೆ.

ಇಂಗ್ಲಿಷ್ ಮೂಲ : ಡಾ|| ಎಸ್. ಚಟರ್ಜಿ
ಹಿರಿಯ ವಿಜ್ಞಾನಿ, ಭಾರತೀಯ ಖಗೋಳ ಭೌತಶಾಸ್ತ್ರ ಸಂಸ್ಥೆ, ಬೆಂಗಳೂರು
ಕನ್ನಡಕ್ಕೆ : ಜಯ

# ಸಬ್‌ಕಾ ಮಾಲಿಕ್ ಏಕ್ ಹೈ

ಉಕ್ಕೇರಿ ಬರುತ್ತಿದ್ದ ಅಲೆಗಳ ಮಧ್ಯೆ ಆ ಪುಟ್ಟ ದೋಣಿ ಹೊಯ್ದಾಡುತ್ತಿತ್ತು. ಬೆಟ್ಟದಂಥ ಒಂದೊಂದು ಅಲೆ ಅಪ್ಪಳಿಸಿದಾಗಲೂ ದೋಣಿ ಎಲ್ಲಿ ಮಗುಚಿ ನೀರಿನ ಪಾಲಾಗುವುದೋ ಎನ್ನಿಸುತ್ತಿತ್ತು. ಅದರಲ್ಲಿದ್ದ ಕೆಲವರ ಬಾಯಿಂದ ''ಹೇ ಅಲ್ಲಾ, ಹೇ ಖುದಾ, ರಕ್ಷಾ ಕರೋ'' ಎನ್ನುವ ಉದ್ಗಾರ ಕೇಳಿಸಿದರೆ, ಇನ್ನು ಕೆಲವರು ''ದೇವರೇ ನಮ್ಮನ್ನು ನೀನೇ ಕಾಪಾಡಬೇಕು'' ಅಂತ ಮೊರೆ ಇಡುತ್ತಿದ್ದರು. ಅದೊಂದು ಮೀನುಗಾರರ ದೋಣಿ. ಮೀನು ಹಿಡಿಯಲು ಹೊರಟಾಗ ಶಾಂತವಾಗಿದ್ದ ಸಮುದ್ರ ಇದ್ದಕ್ಕಿದ್ದಂತೆ ಚಂಡಮಾರುತಕ್ಕೆ ಸಿಕ್ಕಿ ಉಗ್ರ ರೂಪ ತಾಳಿತ್ತು. ಕವಿಯುತ್ತಿದ್ದ ಕತ್ತಲಿನಲ್ಲಿ ದೋಣಿ ಯಾವ ಕಡೆಗೆ ಹೊಡೆದುಕೊಂಡು ಹೋಗುತ್ತಿದೆ ಎನ್ನುವ ಸುಳಿವೇ ಇರಲಿಲ್ಲ. ಈ ಬೆಸ್ತರ ಗುಂಪಿನಲ್ಲಿದ್ದ ಮಂಜನಿಗಂತೂ ಹೆದರಿಕೆಯಿಂದ ಕೈಕಾಲು ನಡುಗಿ ಮೈ ಮೇಲೆ ಪ್ರಜ್ಞೆಯೇ ಇಲ್ಲದಂತಾಗಿತ್ತು. ಅವನ ಮುಚ್ಚಿದ ಕಣ್ಣುಗಳ ಮುಂದೆ ರುಕ್ಕಿಯ ಚಿತ್ರವೇ ಬಂದು ನಿಲ್ಲುತ್ತಾ ಇತ್ತು. ಮಂಜನೂ ಒಬ್ಬ ಬೆಸ್ತ, ಹರೆಯದವನು. ಪ್ರೀತಿಸಿದ ರುಕ್ಕಿಯೊಂದಿಗೆ ಅವನ ಮದುವೆ ನಿಶ್ಚಯವಾಗಿತ್ತು. ತನ್ನ ಊರಿಗಿಂತ ಈ ಊರಿನಲ್ಲಿ ಸಂಪಾದನೆ ಚೆನ್ನಾಗಿದೆ ಎಂದು ತಿಳಿದು, ''ಒಂದು ವರ್ಷ ಅಲ್ಲಿ ದುಡಿದು ಕೈ ತುಂಬಾ ಕಾಸು ಮಾಡ್ಕೊಂಡು ಬರ್ತೀನಿ. ಆಮೇಲೆ ನಾವಿಬ್ಬರೂ ಮದುವೆಯಾಗಿ, ಒಂದು ಪುಟ್ಟ ಗುಡಿಸಲು ಮಾಡಿ, ಜಂ ಅಂತ ಇರೋಣ, ಹಾಗೆ ನಿನಗೆ ಸೀರೆ, ಒಡವೆ ಎಲ್ಲಾ ಮಾಡಿಕೊಂಡು ಬರ್ತೀನಿ ನೋಡ್ತಾ ಇರು'' ಅಂತ ರುಕ್ಕಿಗೆ ಮಾತು ಕೊಟ್ಟು ಇಲ್ಲಿ ಬಂದು ಆರು ತಿಂಗಳಾಗಿತ್ತು. ಕಣ್ಣುಗಳ ತುಂಬಾ ಕನಸುಗಳನ್ನೂ, ಕಣ್ಣೀರನ್ನೂ ತುಂಬಿಕೊಂಡು ಅವನನ್ನು ಬೀಳ್ಕೊಟ್ಟಿದ್ದಳು ರುಕ್ಕಿ. ಹಿರಿಯರೆಲ್ಲರೂ ''ಬೇಡ ಕಣೋ ಮಂಜ, ದೂರದ ಬೆಟ್ಟ ನುಣ್ಣಗೆ ಅಂತ ಕೇಳಿಲ್ಲವಾ ? ಇಲ್ಲೇ ಎಷ್ಟೋ ಅಷ್ಟು ಮರ್ಯಾದೆಯಾಗಿ ಜೀವನ ಮಾಡ್ಕೊಂಡಿರು'' ಅಂತ ಬುದ್ಧಿವಾದ ಹೇಳಿದ್ದರೂ ಅವನ ವಯಸ್ಸಿನವರೇ ಆದ ಕೆಲವು ಜೊತೆಗಾರರು ''ಅಲ್ಲಿ ಸಂಪಾದನೆ ಸಖತ್ ಆಗಿದ್ರೆ ನಮಗೂ ತಿಳಿಸೋ, ನಾವೂ ಬರ್ತೀವಿ'' ಎನ್ನುವ ತಾಕೀತಿನೊಂದಿಗೆ ಅವನನ್ನು ಹುರಿದುಂಬಿಸಿ ಕಳಿಸಿದ್ದರು. ಈ ಊರಿಗೆ ಬಂದ ಹೊಸದರಲ್ಲಿ ಎಲ್ಲರೂ ಅವನನ್ನು ಸಂಶಯಾಸ್ಪದ ರೀತಿಯಲ್ಲಿ ನೋಡಿದ್ದರು. ಹೊರಗಿನವನು ಅನ್ನುವ ಭಾವನೆಯಿಂದ ಅವನನ್ನು ಹತ್ತಿರ ಸೇರಿಸಿರಲಿಲ್ಲ. ಆದರೆ ಅವನ ಸದಾ ನಗುಮುಖ, ಸ್ನೇಹದ ಸ್ವಭಾವ, ಕೆಲಸದಲ್ಲಿಯ ಹುರುಪು, ಚುರುಕುತನ ಬಹು ಬೇಗನೆ ಅವನನ್ನು ಅವರಲ್ಲೊಬ್ಬನಾಗುವುದಕ್ಕೆ ಸಹಾಯ ಮಾಡಿದ್ದವು. ಈಗ ಅವನು ಎಲ್ಲರಿಗೂ ಬೇಕಾದ 'ಮಂಜಣ್ಣ'. ಅವರಲ್ಲಿ ಎಲ್ಲಾ ಥರದ ಜನಗಳೂ ಇದ್ದರು. ಹಸಿವೆಗೆ ಮತಭೇದ ಎಲ್ಲಿದೆ? ಆ ಜನಗಳಲ್ಲಿ ಎಲ್ಲರ ಗೌರವಕ್ಕೂ ಪಾತ್ರರಾಗಿದ್ದವರು ಅಬ್ಬಾಸ್. ವಯಸ್ಸಿನಲ್ಲೂ, ಅನುಭವದಲ್ಲೂ ಹಿರಿಯರಾಗಿದ್ದ ಅವರು ಎಲ್ಲರ ಸಮಸ್ಯೆಗಳಿಗೂ ಸ್ಪಂದಿಸುತ್ತಿದ್ದರು. ತಮ್ಮ ಕೈಲಾದ ಪರಿಹಾರ ಸೂಚಿಸುತ್ತಿದ್ದರಲ್ಲದೇ ಅವಶ್ಯ ಬಿದ್ದಾಗ ಸದ್ದಿಲ್ಲದೆ ಸಹಾಯ ಮಾಡುತ್ತಿದ್ದರು. ಆದರೆ ಅವರು ಮಾತ್ರ ಹೆಚ್ಚು ಮಾತಿಲ್ಲದ, ಗಂಭೀರ ಸ್ವಭಾವದ ಒಂಟಿ ಜೀವಿ. ಅವರ ಹೆಂಡತಿ ಮತ್ತು ಇಬ್ಬರು ಮಕ್ಕಳು ಸುನಾಮಿ ದುರಂತದಲ್ಲಿ ಕೊಚ್ಚಿಕೊಂಡು ಹೋದಷ್ಟು ದಿನದಿಂದ ಒಂದು ತರಹದ ವೈರಾಗ್ಯ ಅವರಲ್ಲಿ ಮನೆ ಮಾಡಿತ್ತು. ಆದರೆ, ಹೊಟ್ಟೆಪಾಡಿಗೆ ಮತ್ತು ಸಮಯ ಕಳೆಯಲು ದುಡಿಯುವುದು ಅನಿವಾರ್ಯವಾಗಿತ್ತು. ತಮ್ಮ ದುಃಸ್ಥಿತಿಗೆ ದೈವವನ್ನು ಹಳಿಯದೆ, ಅಲ್ಪ ತೃಪ್ತರಾಗಿ ತಮ್ಮ ಕಾಯಕವನ್ನು ಮುಂದುವರಿಸಿದ್ದರು. ಮಂಜನ ಕಥೆಯನ್ನೆಲ್ಲಾ ಕೇಳಿದ ಅವರಿಗೆ ಅವನ ಮೇಲೆ ವಿಶೇಷ ಪ್ರೀತಿ. ಅವನನ್ನು ಮಗನಂತೆ ಭಾವಿಸುತ್ತಿದ್ದರು. ಅವನೂ ಎಲ್ಲರಂತೆ ಅವರನ್ನು 'ಅಬ್ಬಾ' ಎಂದು ಕರೆಯುತ್ತಾ ಅವರ ಹಿಂದೆ ಮುಂದೆ ಸುತ್ತುತ್ತಿದ್ದನು. ''ಇನ್ನೊಂದು ಆರೇ ತಿಂಗಳು, ಆಮೇಲೆ ನಾನು ಊರಿಗೆ ಹೋಗಿ ಮದುವೆ ಆಗುವವ. ನೀವೆಲ್ಲಾ ನನ್ನ ಮದುವೆಗೆ ಖಂಡಿತ ಬರಬೇಕು'' ಎಂದಾಗಲೇ ಎಲ್ಲರಿಗೂ ಆಮಂತ್ರಣ ಕೊಟ್ಟಾಗಿತ್ತು. ಚೆನ್ನಾಗಿ ನಡೆಯುತ್ತಿದ್ದ ಸಂಪಾದನೆಯನ್ನು ಪೋಲುಮಾಡದೆ ಅಬ್ಬಾಸ್‌ರ ಸಲಹೆಯಂತೆ ಬ್ಯಾಂಕೊಂದರಲ್ಲಿ ಹಾಕಿಟ್ಟಿದ್ದ.



ಎಲ್ಲೆಂದರಲ್ಲಿ ಹೊಡೆದುಕೊಂಡು ಹೋಗುತ್ತಿದ್ದ ದೋಣಿಯಲ್ಲಿದ್ದ ಮಂಜನಿಗೆ ತನ್ನ ಕನಸುಗಳೆಲ್ಲಾ ಸಮುದ್ರದ ಪಾಲಾಗುತ್ತಿವೆಯೇನೋ, ತಾನಿನ್ನು ಬದುಕುಳಿದು ರುಕ್ಕಿಯನ್ನು ಪುನಃ ನೋಡುವುದೂ ಅಸಂಭವವೇನೋ ಎನ್ನಿಸಿ ಕಣ್ಣೀರು ಕೋಡಿಯಾಗಿ ಹರಿಯಿತು. ಅಬ್ಬಾಸರು ಪಕ್ಕದಲ್ಲಿ ಕೂತು ಹೆಗಲ ಮೇಲೆ ಕೈಹಾಕಿದ್ದೂ ತಿಳಿಯಲಿಲ್ಲ. ದೋಣಿಗೆ ಹುಟ್ಟು ಹಾಕುವುದೂ ಆಗದಷ್ಟು ಉಗ್ರವಾಗಿತ್ತು ಸಮುದ್ರ. ರಾತ್ರಿಯೆಲ್ಲಾ ಈ ರೌದ್ರದೊಂದಿಗೆ ಹೋರಾಡಿದ ದೋಣಿ ಬೆಳಗಿನ ಜಾವ ತೀರಕ್ಕೆ ಬಂದು ಅಪ್ಪಳಿಸಿದಾಗ ಎಲ್ಲರಿಗೂ ಮರುಜೀವ ಬಂದಂತಾಗಿತ್ತು. ಮರಳಿನ ಮೇಲೇ ಸಾಕಷ್ಟು ಹೊತ್ತು ಬಿದ್ದುಕೊಂಡು ಸುಧಾರಿಸಿಕೊಂಡು ಎಲ್ಲರೂ ಮೆಲ್ಲಗೆ ಮೇಲೇಳುತ್ತಿರುವಾಗ, ''ಏಯ್, ಯಾರೋ ಅದು ? ಎಲ್ಲರೂ ಕೈಗಳನ್ನು ಮೇಲೆತ್ತಿ, ಇಲ್ಲದಿದ್ದರೆ ಶೂಟ್ ಮಾಡ್ತೀವಿ'' ಎಂದು ಉರ್ದು ಮಿಶ್ರಿತ ಹಿಂದಿಯಲ್ಲಿ ಒಂದು ಧ್ವನಿ ಬಂದಪ್ಪಳಿಸಿತು. ಭಯದಿಂದ ಎಲ್ಲರೂ ಕೈಗಳನ್ನು ತಕ್ಷಣವೇ ಮೇಲಕ್ಕೆತ್ತಿ ನಿಂತರು. ಮಾರುದ್ದದ ರೈಫಲ್‌ಧಾರಿಗಳ ಗುಂಪೊಂದು ಅವರನ್ನು ಸುತ್ತುವರೆದಿತ್ತು. ''ಯಾರೋ ನೀವು ಸುವ್ವರ್ ಕೇ ಬಚ್ಚೆ? ಎಲ್ಲಿಂದ ಬರ್ತಾ ಇದೀರಿ ? ನನಗೆ ಗೊತ್ತು, ನೀವೆಲ್ಲಾ ಹರಾಮಿ ಹಿಂದೂಸ್ತಾನಿಗಳು. ಏನೇನೋ ವೇಷ ಹಾಕ್ಕೊಂಡು ನಮ್ಮ ದೇಶದೊಳಗೆ ನುಸುಳಿ ಇಲ್ಲಿ ಬೇಹುಗಾರಿಕೆ ಮಾಡೋಕೆ ಬಂದಿದೀರ. ನಡೀರಿ, ನಿಮಗೆ ತಕ್ಕ ಆತಿಥ್ಯ ಕಾದಿದೆ'' ಅಂತ ಗುಡುಗಿದ ಅವರ ಮುಖಂಡನಾದ ಒಬ್ಬ ಭರ್ಜರಿ ಮೀಸೆಯ ಪಠಾಣ. ''ನಮಗೇನೂ ಗೊತ್ತಿಲ್ಲ ಸಾಬ್. ನಮ್ಮ ದೋಣಿ ಸಮುದ್ರದಲ್ಲಿ ಹೊಡಕೊಂಡು ಇಲ್ಲಿಗೆ ಬಂತು. ನಾವೆಲ್ಲಿಗೆ ಬಂದಿದೀವಿ ಅಂತ ನಮಗೇ ಗೊತ್ತಿಲ್ಲ. ನಾವು ಬಡ ಮೀನುಗಾರರು'' ಅಂತ ಎಷ್ಟೇ ಅಂಗಲಾಚಿದರೂ, ''ಈ ಕಥೇನೆಲ್ಲಾ ನಮ್ಮ ಕಮ್ಯಾಂಡರ್‌ಗೆ ಹೇಳ್ತೀರಂತೆ ನಡೀರಿ'' ಅಂತ ಅವರನ್ನೆಲ್ಲಾ ಅಟ್ಟಿಕೊಂಡು ನಡೆದರು ಆ ಸೈನಿಕರು.

■

ಆಂಡಾಳ್ ಶರ್ಮಾ

ಅಲ್ಲಿಂದ ಶುರು ಆಯಿತು ಅವರ ನರಕವಾಸ. ಸೈನಿಕ ಶಿಬಿರಕ್ಕೆ ಹೋದಮೇಲೆ ಅವರಿಗೆ ತಿಳಿದಿದ್ದು ಏನೆಂದರೆ ಸಮುದ್ರದಲ್ಲಿ ಹೊಡೆದುಕೊಂಡು ಬಂದ ಅವರ ದೋಣಿ ಪಾಕಿಸ್ತಾನದ ತೀರ ತಲುಪಿತ್ತು! ಇವರೆಲ್ಲಾ ಮೀನುಗಾರರ ವೇಷದಲ್ಲಿರುವ ಭಾರತದ ಬೇಹುಗಾರರು ಎಂದು ಭಾವಿಸಿದ ಪಾಕಿಸ್ತಾನದ ಗಡಿ ಸೈನ್ಯಕ್ಕೆ ಸೆರೆಸಿಕ್ಕಿದ್ದರು. ಎಷ್ಟೇ ವಿವರಿಸಿ ಹೇಳಿದರೂ ಯಾರೂ ನಿಜಸ್ಥಿತಿಯನ್ನು ನಂಬಿರಲೇ ಇಲ್ಲ. ಎಲ್ಲರನ್ನೂ ಜೈಲಿನಲ್ಲಿ ಕೂಳೆಹಾಕಿದರು. ಎಷ್ಟೋ ದಿವಸಗಳವರೆಗೂ ಒಬ್ಬೊಬ್ಬರನ್ನೇ ಬೇರೆ ಬೇರೆಯಾಗಿ ವಿಚಾರಣೆ ಮಾಡಿ, ಹೊಡೆದು, ಬಡಿದು ಅವರ ಬಾಯಿ ಬಿಡಿಸಲು ಪ್ರಯತ್ನಗಳಾಯಿತು. ಹೀಗೆಯೇ ೩-೪ ತಿಂಗಳುಗಳು ಕಳೆಯುವ ವೇಳೆಗೆ ಆ ಪಾಕಿಸ್ತಾನೀ ಸೈನಿಕರಿಗೆ ಇವರೆಲ್ಲಾ ನಿಜವಾಗಿ ಅಮಾಯಕರು, ಈ ವಿಧವಾಗಿ ದಾರಿತಪ್ಪಿ ಬೇರೊಂದು ದೇಶಕ್ಕೆ ಬಂದು ತಲುಪಬಹುದಾದ ಸಂಭವ ಇದೆ ಎನ್ನುವುದು ಕೂಡ ಅವರಿಗೆ ಗೊತ್ತಿಲ್ಲ ಏನ್ನುವುದು ಖಚಿತವಾಯಿತು. ಆದರೂ ಹೊರ ದೇಶದವರು ಸೆರೆಸಿಕ್ಕ ಮೇಲೆ ಅವರನ್ನು ಬಿಡುವಂತಿಲ್ಲ. ಹೀಗೆ ವೃಥಾ ಅವರ ಜೇಲುವಾಸ ಮುಂದುವರೆಯಿತು. ಕ್ರಮೇಣ ಇವರೂ ಜೈಲಿನ ದೈನಂದಿನ ಕಾರ್ಯಕ್ಕೆ ಒಗ್ಗಿಕೊಂಡರು ಮತ್ತು ಅವರೂ ಹಿಡಿತವನ್ನು ಸಡಿಲಮಾಡಿದರು. ಬೆಳಗಿನ ಜಾವ ೫ ಗಂಟೆಗೆ ಮಸೀದಿಯಲ್ಲಿ ಪ್ರಾರ್ಥನೆಗೆ ಕೂಗಿದಾಗ ಇವರೂ ಏಳಬೇಕು. ನಂತರ ರೊಟ್ಟಿ, ಪಲ್ಯ, ಚಹಾ, ಇದಾದಮೇಲೆ ತೋಟದಲ್ಲೋ, ಕೂಲಿಗೆಲಸದಲ್ಲೋ, ಲಾಂಡ್ರಿಯಲ್ಲೋ, ಮತ್ತೊಂದೋ, ಸರತಿ ಪ್ರಕಾರ ಆ ದಿನದ ಕೆಲಸ. ಮಧ್ಯಾಹ್ನ, ರಾತ್ರಿ ಅದೇ ಊಟ, ಶುಕ್ರವಾರ ಮಾತ್ರ ಜೊತೆಗೆ ಅನ್ನದ ಪಲಾವ್. ವಾರಕ್ಕೆರಡು ಬಾರಿ ಸ್ನಾನ. ಆಶ್ಚರ್ಯವೇನೆಂದರೆ, ಇಲ್ಲಿಯೂ ಅಬ್ಬಾಸರಿಗೆ ಎಲ್ಲರಿಗಿಂತ ತುಸು ಹೆಚ್ಚೇ ಆದರ ಸಿಗುತ್ತಿತ್ತು. ಅವರಾಗೇ ಏನನ್ನೂ ಕೇಳದಿದ್ದರೂ ಎಲ್ಲದರಲ್ಲೂ ಅವರಿಗೆ ರಿಯಾಯಿತಿ. ಓದು, ಬರಹ ಬಲ್ಲವರಾಗಿದ್ದರಿಂದ ಕುರಾನ್‌ಅನ್ನು ಉಳಿದ ಕೈದಿಗಳಿಗೆ ಓದಿ ಹೇಳುವುದು, ಯಾರಿಗಾದರೂ ಪತ್ರ ಬರೆದುಕೊಡುವುದು, ಕೂತಲ್ಲೇ ತರಕಾರಿ ಬಿಡಿಸಿಕೊಡುವುದು ಇಂತಹ ಸುಲಭ ಕೆಲಸಗಳು, ಜೇಲಿನ ಆವರಣದಲ್ಲಿ ಸುತ್ತಾಡಲು ಸ್ವಾತಂತ್ರ್ಯ ಇತ್ಯಾದಿ. ನೋಡಿದರೇ ಗೌರವ ಹುಟ್ಟಿಸುವಂತಿದ್ದ ವ್ಯಕ್ತಿತ್ವವುಳ್ಳ ಅವರನ್ನು ಕಮ್ಯಾಂಡರ್ ಕೂಡ ಎಂದೂ ಕೆಟ್ಟದಾಗಿ ನಡೆಸಿಕೊಂಡಿರಲಿಲ್ಲ.

ಹೀಗೇ ಎರಡು ವರ್ಷಗಳು ಕಳೆದವು. ಸ್ವದೇಶಕ್ಕೆ ಹಿಂತಿರುಗುವ ಆಸೆ ಬಿಟ್ಟ ಮಂಜನ ಮುಖದಲ್ಲಿನ ನಗು ಮಾಯವಾಯಿತು. ಕಣ್ಣಿನ ಹೊಳಪು ಮಾಸಿತು, ಮೈ ಸೊರಗಿತು. ಊರಿನಲ್ಲಿ ರುಕ್ಕಿ ತನಗಾಗಿ ಕಾಯುತ್ತಿದ್ದಾಳೇನೋ ಎನಿಸಿದಾಗ ಮನಸ್ಸಿಗಾಗುವ ದುಃಖ, ಅವಳು ಇಷ್ಟು ದಿನಗಳಾದ ಮೇಲೂ ತನ್ನವಳಾಗಿಯೇ ಉಳಿಯದೆ ಬೇರೆ ಯಾರನ್ನಾದರೂ ಮದುವೆ ಆಗಿರಬಹುದು ಎನ್ನುವ ಆತಂಕ ಎಲ್ಲಾ ಸೇರಿ ಅವನ ಮೈ, ಮನಸ್ಸುಗಳೆರಡೂ ಹೈರಾಣಾಗಿದ್ದವು. ಅದೃಷ್ಟವಶಾತ್ ಅಬ್ಬಾಸ್ ಅವರು ಒಮ್ಮೆ ಒಬ್ಬ ಕಾವಲುಗಾರನ ಕೈ ಬೆಚ್ಚಗೆ ಮಾಡಿ ತಮ್ಮ ಊರಿನ ಮಸೀದಿಯ ಕಾಜಿಯವರಿಗೆ ಪತ್ರ ಬರೆದು ಇಲ್ಲಿನ ಸಮಾಚಾರ ತಿಳಿಸಿ ಅಲ್ಲಿನ ಸುದ್ದಿ ಸಂಗ್ರಹಿಸಿದ್ದರು. ಅದರ ಪ್ರಕಾರ ಹಿರಿಯರನ್ನೆಲ್ಲಾ ಎದುರಿಸಿ ರುಕ್ಕಿ ಇನ್ನೂ ಮಂಜನಿಗೇ ಕಾಯುತ್ತಿದ್ದಳು. ಈ ವಿಷಯ ಮಂಜನ ಕಿವಿಗೆ ಬಿದ್ದು ಸ್ವಲ್ಪ ನೆಮ್ಮದಿಯನ್ನುಂಟುಮಾಡಿತಾದರೂ, 'ಈಗ ಅಬ್ಬುರವರ ಪತ್ರದ ಮೂಲಕ ನಿಜಸ್ಥಿತಿ ರುಕ್ಕಿಗೆ ಮತ್ತು ಊರಿನವರಿಗೆಲ್ಲಾ ತಿಳಿದಿದೆ. ಇನ್ನು ಮೇಲೂ ಅವಳು ನನಗಾಗಿ ಕಾಯುತ್ತಾಳಾ ?' ಎನಿಸಿ ಹತಾಶನಾಗುತ್ತಿದ್ದ.

ಇಷ್ಟರಲ್ಲಿ ಶಿಬಿರದಲ್ಲೆಲ್ಲಾ ಒಂದು ಒಳ್ಳೆಯ ವಾರ್ತೆ ಮಿಂಚಿನಂತೆ ಹಬ್ಬಿತು. ಭಾರತ-ಪಾಕಿಸ್ತಾನಗಳೆರಡೂ ಶಾಂತಿ ಕಾಪಾಡುವುದರ ಬಗ್ಗೆ ಸಾಲಾಗಿ ಕೆಲವು ಶೃಂಗಸಭೆಗಳನ್ನು ನಡೆಸುವುದಾಗಿಯೂ, ಅದಕ್ಕೆ ಪೂರ್ವಭಾವಿಯಾಗಿ ಎರಡು ಕಡೆಯವರೂ ನಿರ್ಧರಿತ ಸಂಖ್ಯೆಯಲ್ಲಿ ಒಂದಷ್ಟು ಕೈದಿಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವುದಾಗಿಯೂ ಹೇಳಿಕೆ ನೀಡಿದ್ದವು. ಕೈದಿಗಳಲ್ಲಿ ಆಶಾಕಿರಣ ಮೂಡಲು ಇಷ್ಟೇ ಸಾಕಾಯಿತು. ಶಿಬಿರದ ಕಮ್ಯಾಂಡರ್, ''ಇಲ್ಲಿಂದ ಆರು ಜನ ಕೈದಿಗಳನ್ನು ವಿನಿಮಯಕ್ಕಾಗಿ ಸರಹದ್ದಿಗೆ ಕಳುಹಿಸಲು ನನಗೆ ಮೇಲಿಂದ ಅಪ್ಪಣೆಯಾಗಿದೆ. ಅಬ್ಬಾಸ್, ಸಲೀಂ, ರಹೀಂ, ಅಹಮದ್, ಕರೀಂ ಮತ್ತು ಹನೀಫ್ ಇವರುಗಳ ಹೆಸರನ್ನು ಪಟ್ಟಿಯಲ್ಲಿ ಸೇರಿಸಿದ್ದೇನೆ. ಮಿಕ್ಕಿದ ಕಾಫಿರ್‌ಗಳು ಇನ್ನೊಂದಿಷ್ಟು ಸಮಯ ಇಲ್ಲೇ ಬಿದ್ದಿರಲಿ. ಅವರ ಸರತಿ ಮುಂದಿನ ಸಲಕ್ಕೆ ನೋಡೋಣ'' ಎಂದು ಆಜ್ಞೆ ಹೊರಡಿಸಿದ. ಇದನ್ನು ಕೇಳಿದ ಮಂಜನಿಗೆ ಪಾತಾಳಕ್ಕೆ ದೂಡಿದಂತಾಯಿತು. ಅಬ್ಬಾಸ್‌ರ ಬಳಿ ಓಡಿ, ''ಅಬ್ಬಾ, ಇನ್ನು ಇಲ್ಲಿಂದ ನನಗೆ ಬಿಡುಗಡೆಯೇ ಇಲ್ಲ. ನಾನು ನೇಣು ಹಾಕ್ಕೊಂಡು ಸಾಯ್ತೀನಿ'' ಅಂತ ಗೋಳಾಡಿದ. ಅವನಿಗೆ ಧೈರ್ಯ ಹೇಳಿದ ಅಬ್ಬಾಸರು ನೇರ ಕಮ್ಯಾಂಡರ್‌ನ ಹತ್ತಿರ ನಡೆದರು. ''ನೋಡಿ ಸಾಹೇಬರೇ, ನನಗೆ ವಯಸ್ಸಾಗಿದೆ, ನಾನು ವಾಪಸ್ ಹೋಗದೇ ಇದ್ದರೆ ನನಗಾಗಿ ದುಃಖಿಸುವವರು ಯಾರೂ ಇಲ್ಲ. ಇಲ್ಲಿ ನನಗೇನೂ ಕಷ್ಟವಾಗುತ್ತಿಲ್ಲ. ಬದಲಿಗೆ ಇದ್ದ ಕಡೆಯೇ ಪುಕ್ಕಟೆ ಊಟ, ಅಲ್ಲಾಹ್‌ನ ಧ್ಯಾನಕ್ಕೆ ಅಲ್ಲಿಗಿಂತ ಹೆಚ್ಚಾಗಿ ಏಕಾಂತ, ಖುದಾನ ಮಾತುಗಳನ್ನು ನಾಲ್ಕು ಜನರಿಗೆ ತಿಳಿಸಿಹೇಳುವ ಅವಕಾಶ ಎಲ್ಲ ಇಲ್ಲಿ ಸಿಕ್ಕಿವೆ. ನನಗೇನು, ಎಲ್ಲಿದ್ದರೂ ಒಂದೇ. ಆದರೆ ಆ ಹುಡುಗ ಮಂಜ ಇದಾನಲ್ಲಾ, ಅವನಿನ್ನೂ ಚಿಕ್ಕವನು. ಅವನ ಜೀವನವೆಲ್ಲಾ ಅವನ ಮುಂದಿದೆ. ಅದೂ ಅಲ್ಲದೆ ಊರಿನಲ್ಲಿ ಅವನಿಗೋಸ್ಕರ ಜೀವ ಬಿಗಿಹಿಡಿದಿರುವ ಹೆಣ್ಣುಮಗು ಒಂದಿದೆ. ಅವನನ್ನು ಇಲ್ಲೇ ಕೊಳೆಹಾಕಿದರೆ ಒಂದಲ್ಲ, ಎರಡು ಜೀವಗಳ ಭವಿಷ್ಯ ಹಾಳಾಗುತ್ತದೆ. ಆದ್ದರಿಂದ ದಯವಿಟ್ಟು ನನ್ನ ಬದಲು ಅವನನ್ನು ಹಿಂದಕ್ಕೆ ಕಳುಹಿಸುವ ವ್ಯವಸ್ಥೆ ಮಾಡಬೇಕು ಅಂತ ನಿಮ್ಮ ಕಾಲಿಗೆ ಬಿದ್ದು ಪ್ರಾರ್ಥಿಸುತ್ತೇನೆ. ನೀವು ಈಗ ಸ್ವಲ್ಪ ಹೃದಯವಂತಿಕೆ ತೋರಿಸಿದರೆ ಖುದಾನ ಕೃಪೆ ನಿಮ್ಮ ಹಾಗೂ ನಿಮ್ಮವರ ಮೇಲೆ ಸದಾ ಇರುತ್ತದೆ'' ಎಂದು ಭಾವುಕರಾಗಿ ಯಾಚಿಸಿದರು. ಕಮ್ಯಾಂಡರ್, ''ಆದರೆ ಅಬ್ಬಾ, ಅವನೊಬ್ಬ ಹಿಂದೂ ಕಾಫಿರ್. ಅವನನ್ನು ಈಗ ಬಿಟ್ಟರೆ ಉಳಿದವರೆಲ್ಲಾ ಗಲಾಟೆ ಮಾಡಿಯಾರು. ನನಗೂ ತೊಂದರೆ ಯಾದೀತು'' ಎಂದು ಹಿಂಜರಿದ. ''ಸಾಬ್, ನೀವು ದೊಡ್ಡವರು, ತಿಳಿದವರು, 'ಸಬ್‌ಕಾ ಮಾಲಿಕ್ ಏಕ್ ಹೈ' ಎಂದು ಸಂತರು ಹೇಳಿದ್ದಾರಲ್ಲವೆ ? ಈ ಜಾತಿ, ಮತ ಭೇದವೆಲ್ಲಾ ಮನುಷ್ಯರೇ ಮಾಡಿಕೊಂಡ ವ್ಯವಸ್ಥೆಗಳು. ಖುದಾನಿಗೆ ಅವನ ಮಕ್ಕಳಲ್ಲಿ ಭೇದಭಾವ ಇದೆಯೇ ? ನೀವೀಗ ನಮಗೆಲ್ಲಾ ಹಿರಿಯರು. ನೀವು ಮನಸ್ಸು ಮಾಡಿದರೆ ಈ ಕೆಲಸ ಆಗುತ್ತದೆ'' ಎಂದು ಅಬ್ಬಾಸ್ ಅಂಗಲಾಚಿದರು. ಆಗಲೇ ನಿವೃತ್ತಿಯ ವಯಸ್ಸನ್ನು ಸಮೀಪಿಸುತ್ತಿದ್ದ ಕಮ್ಯಾಂಡರ್ ಸಾಕಷ್ಟು ಧರ್ಮಗ್ರಂಥಗಳನ್ನು ಓದಿಕೊಂಡಿದ್ದ. ಅವನಿಗೂ ಹೆಣ್ಣು ಮಕ್ಕಳಿದ್ದರು. ಹೀಗಾಗಿ ಅವನ ಮನಸ್ಸು ಸ್ವಲ್ಪ ಕರಗಿತು. ''ಆಯಿತು, ಇದೊಂದು ಸಲ ನಿಮಗೋಸ್ಕರ ಈ ಕೆಲಸ ಮಾಡಲು ತಯಾರಿದ್ದೇನೆ. ಆದರೆ ಪುನಃ ಇಂತಹ ಕೋರಿಕೆಗಳನ್ನು ನನ್ನ ಮುಂದಿಟ್ಟು ನನ್ನನ್ನು ಸಂದಿಗ್ಧಕ್ಕೆ ಸಿಕ್ಕಿಸಬೇಡಿ. ಅಬ್ಬಾಸ್ ಎನ್ನುವ ಹೆಸರಿನ ಬದಲು ಮುನಾಫ್ ಎಂದು ಪಟ್ಟಿಯಲ್ಲಿ ನಮೂದಿಸುತ್ತೇನೆ. ಆದರೆ ಮಂಜನಿಗೆ ನಮ್ಮವರ ತರಹವೇ ಉಡುಪು ಧರಿಸುವಂತೆ ಮತ್ತು ಮಿಕ್ಕೆಲ್ಲರಿಗೂ ಎಚ್ಚರಿಕೆಯಿಂದ ಇರುವಂತೆ ಹೇಳಿ ಕಳುಹಿಸಿ. ಸರಹದ್ದಿನ ಸೈನಿಕರಿಗೆ ಯಾವ ಅನುಮಾನವೂ ಬರಕೂಡದು. ಸಾಮಾನ್ಯವಾಗಿ ಅವರು ಇದಕ್ಕೆಲ್ಲಾ ತಲೆಕೆಡಿಸಿಕೊಳ್ಳುವುದಿಲ್ಲ. ಅವರಿಗೆ ಕೊಟ್ಟ ಆಜ್ಞೆಯನ್ನು ಪಾಲಿಸುತ್ತಾರೆ ಅಷ್ಟೆ. ಕೆಲವೇ ಘಂಟೆಗಳ ಮಟ್ಟಿಗೆ ಅಷ್ಟೇ'' ಎಂದು ಮುಗಿಸಿದ ಕಮ್ಯಾಂಡರ್. ವಿಷಯ ತಿಳಿದ ಮಂಜ ಮತ್ತು ಅವನ ಜೊತೆಗಾರರಿಗೆ ಸ್ವರ್ಗ ಮೂರೇ ಗೇಣು. ಆದರೂ ಅವನು ಅಬ್ಬಾಸ್ ಅವರ ಕಾಲು ಹಿಡಿದು, ''ಅಬ್ಬಾ, ನೀವು ಈ ಕೆಲಸ ಮಾಡಕೂಡದಿತ್ತು. ನನಗೋಸ್ಕರ ನೀವ್ಯಾಕೆ ಈ ಮಹಾತ್ಯಾಗ ಮಾಡುತ್ತಿದ್ದೀರಿ ? ನಿಮ್ಮನ್ನು ಇಲ್ಲಿ ಬಿಟ್ಟು ನಾನು ಹೋಗುವುದಿಲ್ಲ'' ಎಂದು ಅಲವತ್ತುಕೊಂಡ. ''ಹುಚ್ಚು ಹುಡುಗ, ನನ್ನದು ಮುದಿ ಜೀವ, ಇನ್ನೆಷ್ಟು ದಿನ ಭೂಮಿಯ ಮೇಲಿರ್ತೀನಿ ? ನೀನು ನನ್ನ ಮಗನ ಸಮಾನ ಅಲ್ಲವಾ ? ತಂದೆ ತಾಯಿಯರು ಮಕ್ಕಳಿಗೋಸ್ಕರಾನೇ ಅಲ್ಲವಾ ಜೀವ ಸವೆಸುವುದು ? ಏನೂ ಯೋಚನೆ ಮಾಡದೆ ಸಂತೋಷವಾಗಿ ಊರಿಗೆ ಹೋಗಿ ನಿನ್ನ ಹುಡುಗಿಯನ್ನು ಮದುವೆಯಾಗಿ ಖುಷಿಯಾಗಿರು. ಇತರರಿಗೆ ನಿನ್ನ ಕೈಲಾದ ಸಹಾಯ ಮಾಡುತ್ತಾ ಒಳ್ಳೆಯ ತನದಿಂದ ಜೀವನವನ್ನು ಕಳಿ, ನಾನಿಲ್ಲಿ ಚೆನ್ನಾಗಿಯೇ ಇರುತ್ತೇನೆ'' ಎಂದು ಅಬ್ಬಾಸ್ ಸಮಾಧಾನ ಮಾಡಿದರು. ಆ ದಿನವೂ ಬಂತು. ಮಿಲಿಟರಿ ಟ್ರಕ್‌ನಲ್ಲಿ ಆರು ಜನರನ್ನೂ ತುಂಬಿ ಸರಹದ್ದಿನೆಡೆಗೆ ಪ್ರಯಾಣ ಮಾಡಿದರು. ಕೈ ಬೀಸಿ ವಿದಾಯ ಹೇಳುತ್ತಿದ್ದ ಅಬ್ಬಾಸ್‌ರವರ ಮೂರ್ತಿ ಟ್ರಕ್ ಎಬ್ಬಿಸಿದ ಧೂಳಿನಲ್ಲಿ ಮರೆಯಾಗುತ್ತಿದ್ದಂತೆ ಮಂಜ ಬಿಕ್ಕಿ ಬಿಕ್ಕಿ ಅತ್ತ.

ಈಗ ಮಂಜ ರುಕ್ಕಿಯೊಂದಿಗೆ ಸಂಸಾರ ಹೂಡಿದ್ದಾನೆ. ಕಷ್ಟದ ದುಡಿಮೆ, ಭರವಸೆಯಿಲ್ಲದ ಜೀವನ. ಆದರೂ ಅವರು ಇದ್ದಷ್ಟರಲ್ಲೇ ಸಂತೃಪ್ತರು. ಸಾಧ್ಯವಾದಾಗ ಬೇರೆಯವರಿಗೂ ಸಹಾಯಮಾಡುತ್ತಾ ಒಳ್ಳೆಯ ಹೆಸರು ಪಡೆದಿದ್ದಾರೆ. ಎರಡು ವರ್ಷದ 'ಅಬ್ಬು' ಮುದ್ದಾಗಿ ತೊದಲು ಮಾತಾಡಿದಾಗಲೆಲ್ಲಾ ಅವನಿಗೆ ಅಬ್ಬಾಸ್‌ರ ನೆನಪು ಕಾಡುತ್ತದೆ. ಪ್ರತಿ ಶುಕ್ರವಾರ ಮಂಗಳಾದೇವಿಯ ದೇವಸ್ಥಾನದಲ್ಲಿ ಅವರ ಹೆಸರಿನಲ್ಲಿ ಪೂಜೆ ಮಾಡಿಸುವುದನ್ನು ಮಾತ್ರ ಅವನು ಇದುವರೆವಿಗೂ ತಪ್ಪಿಸಿಲ್ಲ.

ಆಂಡಾಳ್ ಶರ್ಮಾ
ನಂ. ೪೭/೧, ೭ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

# ಕಾಶಿ ಕೈಲಾಸ

ಬಿ. ಆರ್. ಪೋಲೀಸ್ ಪಾಟೀಲ

**ಊ**ರಗಲ ಬಾಯಿ ತಗದು ಮಗನ ಮನಿ ನೋಡಿದಳು ಕಾಶೀಬಾಯಿ. ''ಮನಿ ಅಲ್ಲ ತಗಿ ಇದು ಅರಮನಿ. ಇಲ್ಲಿಗ್ಯಾಕ ಕರಕೊಂಡು ಬಂದ್ಯೋ ಬಾಳಾ ನನ್ನ? ಬ್ಯಾಡ, ನಮ್ಮ ಮನೀಗೆ, ನಿನ್ನ ಮನೀಗೆ ಕರಕೊಂಡು ನಡಿಯಪಾ'' ಅಂದಳು.

''ಇದು ನನ್ನ ಮನೀನs, ಬೇಯವ್ವಾ, ನಿನ್ನ ಮಗನ ಮನಿ. ನಿನ್ನ ಮಗಾ ಹುಚ್ಚಪ್ಪಂದು. ನೀ 'ಹುಚ್ಚಪ್ಪಾ'ಅಂತ ಹೆಸರಿಟ್ಟರೂ ಇವತ್ತ ನಾನು ಸಾವಿರ ಮಂದೀ ಪಾಲಿಗೆ ಈಶ್ವರ, 'ಹುಚ್ಚೇಶ್ವರ' ತಿಳೀತೇನು ?... ಇರ್ಲಿ, ಬಾ ಒಳಗ...'' ಅಂದಂವನ ತಾನs ಎದ್ದು ಬಂದು ಕಾರಿನ ಬಾಗಲಾ ತಗದಾ. ಕಾಶವ್ವ, ಮೆಲ್ಲಕ ನಡಕೋಂತ ಬಂದು ಹಣೀಗೆ ಕೈ ಹಚ್ಚಿ... ಕಣ್ಣಿಂದನs ಮಗನ ಮನಿ ಉದ್ದ, ಅಗಲಾ, ಎತ್ತರಾ ಅಳೆದಳು. ''ಏಸು ಬಾಗಲಾ, ಏಸು ಕಿಡಕಿ, ಅವ್ ನನ ಮಗನ ಗೌಡಕೆ! ಮೂವತ್ತು ವರ್ಷದ ಹಿಂದ ಪಡಕೀಗೆ ಪಿರೆ ಆಗಿದ್ದ ನಾ ಇವತ್ತ ದೊರಿ ತಾಯಾಗೀನಿ ಅಂದರ! ಹ್ಯಾಂಗ ನಂಬಲಿ ?'' ಖರೇವಂದ್ರೂ ನಂಬಾಕ ಆಗಲಿಲ್ಲ ಆಕೀಗೆ.

''ಈಟೆಲ್ಲಾ ಹ್ಯಾಂಗ ಗಳಿಕಿ ಮಾಡಿದ್ಯೊ ನನ ಮಗನಾ, ಜಾದೂ ಮಾಡಿದ್ಯೊ ಏನ ದರೋಡಿ ಮಾಡಿದ್ಯೊ?''

''ಆದೆಲ್ಲಾ ಆಮ್ಯಾಲ ಹೇಳ್ತೀನಿ, ಮೊದಲ ಒಳಗ ನಡಿ.''

ಹತ್ತೆಜ್ಜೆ ಮುಂದ ಹೋಗಿ ತಲಬಾಗಲ ಮುಂದ ನಿಂತಳು. ''ಅವ್‌ನನ ಬಾಗಲ! ಮುಂದ ನಿಂತರ ಮಕಾ ಕಾಣತದಲ್ಲs, ಯವ್ವಾ, ಈಗ ಗಮ್ಮಂತ ವಾಸನೀಗೆ ಮೈ ಜುಮ್ ಅಂತದ. ಹಿಂತಾ ಗಂಧದ ಬಾಗಲಾ, ಕೈಕುಸರಿ ಪಡಕಾ, ಏನು ಹುಚ್ಚು ನಿನ್ನ ಐಸಿರಿ!'' ಅಂದಳು. ಮಗಾ ಬಟನ್ ಒತ್ತಿ ನಿಂತಾ, ಬಡಗ್ಗನ ಬಂದು ಬಾಗಲಾ ತಗೀಲಿಲ್ಲ. ಮತ್ತೊಮ್ಮಿ, ಎರಡು, ಮೂರುಬ್ಯಾರಿ ಒತ್ತಿದರೂ ತಗೀಲಿಲ್ಲ ಬಾಗಲಾ. ಮತ್ತ ಒತ್ತಬೇಕು ಅನಗೊಡದ ಕಾಶೀಬಾಯಿ,

''ಬ್ಯಾಡ ತಡಿ ತಮಾ! ನಿನ್ನ ಬಟ್ಟೆ ಮಾಸ್ತಾವು. ನಾನು ಕೂಗತೇನಿ. ಬಾಗಲ ಎಷ್ಟು ಚೆಂದಿದ್ದರೇನು, ನನಗ ಈ ರೀತಿ ಪಸಂದಿಲ್ಲ. ಬಿಡು ಹುಚ್ಚು ಮನಿ ತಲಬಾಗಲಾ ಹಗಲ ಹೊತ್ತ ತಗದು ಇರಬೇಕು. ಅದು ಐಸಿರಿಯೇನಪಾ'' ಅಂದ್ಲು.

''ನಿನಗ ಗೊತ್ತಾಗೂದುಲ್ಲೇಳಬೆ, ಬಾಗಲಾ ತೆರೆದಿಡೊ ಕಾಲ ಹ್ವಾದ್ವ. ತೆರದಿಟ್ರ ಗಂಟ ಅಷ್ಟs ಅಲ್ಲಾ ನಮ್ಮನ್ನೂ ಹೊತಗೊಂಡು ಹೋಗ್ತಾರ. ಘಟಿಂಗರು...''

''ನಮ್ಮೂರಾಗ ಹೀಂಗಿಲ್ಲ ಬಿಡಪಾ, ಈಗೂ ಸೂರ್ಯುದಯಕ್ಕ ತಗದ ಬಾಗಲಾ ಹಿಕ್ಕೂದು ನಾಲ್ಕು ತಾಸ ರಾತ್ರ್ಯಾಗಿಂದು.''

''ಅದು ಹಳ್ಳಿ, ಇದು ಪ್ಯಾಟಿ, ಅಲ್ಲಿ ಮನಿಶೇರಿರ್‍ತಾರ...''

''ಮತ್ತ ನೀ ರಾಕ್ಷೇಸರಿರೂ ಜಾಗಕ ಯಾಕ ಬಂದ್ಯೋ ನನ ಮಗನಾ ?... ಇಷ್ಟು ದೊಡ್ಡ ಪಟಂಗಳೈತಿ, ಸಾರಣಿಗಿ ಇಲ್ಲಾ, ರಂಗೋಲಿ ಇಲ್ಲಾ... ಎಲ್ಲಾ ಬೋಳ ಬೋಳ ಅನಸಂಗಿಲ್ಲಾ ?''

''ರಂಗೋಲಿ ಹಾಕಾಕ ಯಾರಿಗಿ ಪುರಸೊತ್ತು ಐತಿ ಹೇಳಲೆ ಇಲ್ಲಿ ?''

''ಹಂಗಾದ್ರ ಈ ಮನ್ಯಾಗ ಇರೋರು ಎಷ್ಟರ ದರಿದ್ರ ಅದೀರೊ ತಮ್ಮಾ ? ಪುರುಸೊತ್ತು ಇರೋರು ಹೊತ್ತಗಳ್ಯಾಕ ಹಾಕೂದಲ್ಲ ಈ ರಂಗೋಲಿ. ಬಂದೋರಿಗೆ, 'ಬರ್‍ರಿ' ಅಂತ ಎದೀ ಕದಾ ತಗದು ಒಳಗ ಕರಕೊಳ್ಳೋ ಪರಿ ಅದು. ಗಾಳಿ-ಧೂಳಿ, ಮಾರಿ-ದುರ್ಗಿ ಒಳಗ ಬರಲಾರದಂಗ ಕೊರಿಯೊ ಅಡ್ಡಗೆರಿ ಈ ರಂಗೋಲಿ... ಕೇಳಿದೇನಪಾ.''

ಮಗಾ ಏನೇನೊ ಗೊಣಗಿದಾ.

ಆದರೂ ಏನ ಬೆಳದಿ, ಏನ, ಬೆಳದೆಪಾ ನನ ಮಗನಾ ಶಾಬ್ಬಾಶ್. ಮುದಕಿ ಹಿಗ್ಗಿ ಬುರುಬುರು, ಹೈಬ್ರೀಡ ಹೀರಿಕಾಯಿಯ್ಹಾಂಗ ಬೆಳದ್ಲು, ಅಂತೂ ಒಬ್ಬ ಆಳ ಬಂದು ಬಾಗಲಾ ತಗದಾ, ಮಗಾ ಸನ್ನಿ ಮಾಡಿದ್ದs ತಡಾ ಆಳು ಕಾಶೀಬಾಯೀನ್ನ ಕೈ ಹಿಡದು ಒಳಗ ಕರಕೊಂಡು ಹೋಗಿ ಮೆತ್ತನ ಕುತನೀ ಕುರ್ಚೀಮ್ಯಾಲ ಕುಂಡ್ರಿಸಿದಾ.



''ಒಳಗ ಇಳ್ಯಾಕ ಹತ್ತೀನೊ, ಮುಳಗಾಕ ಹತ್ತೀನೊ ಒಂದೂ ಗೊತ್ತಾಗವಲ್ತಲ್ಲs, ನನ್ ತಾಯಿ!'' ಅಂದಳು ಕಾಶವ್ವ ಗಾಬರ್‍ಯಾಗಿ. ಒಳಗ ನೋಡ್ತಾಳ... ಊರಗಲ ಪಟಂಗಳಾ. ಊರ ಗೌಡರ-ಮನಿಯಷ್ಟು ದೊಡ್ಡದು. ಆದರ ಇಲ್ಲಿ ಬಣ್ಣಬಣ್ಣದ ಲಾಯಿಟಾ, ಕುರ್ಚಿ, ಮೇಜಾ, ಹೊಯೆ-ನಯೆ... ಯಚಾವತ್ತೆಲ್ಲಾ ಐತೆ. 'ನನ್ನ ಮಗಾ ಈ ಊರ ಗೌಡೇನ' ಮತ್ತ! ಆನಿಸ್ತು ಮುದುಕೀಗೆ. ತಾನು ನೋಡಾಕ ಹತ್ತಿದ್ದು ಕನಸೊ, ಖರೇನೊ ಅಂತ ಚೂಟಿ ಖಾತ್ರಿ ಮಾಡಿಕೊಂಡ್ಲು.

''ಕನಸಲ್ಲ ಇದು ಖರೇನs. ಏಳಬೇಯವ್ವಾ, ಮಕ ತೊಕ್ಕೊ, ಊಟಾ ಮಾಡೂಣು'' ಅಂದಾ ಮಗಾ - ರಟ್ಟೆ ಹಿಡದು ಬಚ್ಚಲ ಮನೀಗೆ ಕರಕೊಂಡು ಹೋದರ...

ಸುತ್ತೂ ಕಡೆ ರೌಜ, ಕನ್ನೋಡಿ, ತಣ್ಣೀರಂದರ ತಣ್ಣೀರಾ, ಬಿಸಿ ನೀರಂದರ ಬಿಸಿ ನೀರ, ಅವ್ ನನ ಮಗನ ದರಬಾರ! ಅಂತು ಮುದಕಿ.

ಊಟಕ್ಕ ಬಂದು ಕುಂತರ...

ಮೇಜಿನ ತುಂಬ ಕಾಜಿನ ಬಟ್ಟಲಾ, ಚೀಣೀ ಮಣ್ಣಿನ ಡಬರಿಗೋಳು ಅವುತರ ತುಂಬಾ ನಾನಾ ನಮೂನಿ ಅಡಿಗಿ, ತಿನಸಾ ಹಣ್ಣಾ-ಹಂಪಲಾ...

ಒಪ್ಪತ್ತಿನ ಗಂಜಿಗೂ ಗತಿಯಿಲ್ಲದ ದಿನಗೋಳು ನೆನಪಾಗಿ ಕಣ್ಣು ಕಾಜಾದ್ವು.

ಹುಚ್ಚೂನ ಅಪ್ಪ ದರಮು ಗೌಡರ ಮನಿ ಹಳಿಗ್ಯಾ ಡ್ಯಾಗಿನ ನಿಧಿ ತಗ್ಯಾಕ ಹೋಗಿ ಗ್ವಾಡಿ ಕುಸದು ತರದಾಗs

ಮಣ್ಣಾದ ಬಳಿಕ ಸಣ್ಣ ಸಣ್ಣಾ ಏಳು ಮಕ್ಕಳ್ನ ಕಟಗೊಂಡು ಅದೆಷ್ಟು ಪಡಿಪಾಟಲು ಅನುಭೋಗಿಸಿದ್ಲು ಕಾಶವ್ವ !

ಆರು ಹೆಣ್ಣು, ಒಂದು ಗಂಡು. ಕೂಲಿ, ನಾಲಿ, ಕಸಾ-ಮುಸರಿ ಒಂದ ಎರಡ? ದಿವಸದಾಗ ಹದಿನೆಂಟು ತಾಸು ಕೆಲಸಾ ಮಾಡಿ ಸಾಯೊ ಕಂದವ್ವಗೋಳ್ನ ಬದುಕಿಸಿ ಬದುಕು ಮಾಡಿದಾಕೀಗೆ ಹಿರೇ ಮಗಳು ಆಸರಾದಾಗ ಸ್ವರ್ಗನ, ಕೈಗಿ ಬಂದಾಂಗ ಅನಿಸಿತ್ತು. ಒಂದು, ಎರಡು... ಮೂರು ಹೆಣ್ಣುಮಕ್ಕಳು ಅವರಿವರ ಮನಿ ಕಸಾ ಮುಸರಿ ಮಾಡಿ ಉಳದ ಅನ್ನಾ ತಂದದ್ದನ್ನ ತಿನ್ನಿಸಿ, ಇದ್ದೊಂದು ಗಂಡು ಕಲೀಲಿ ಅಂತ ಪೈಸೆ ಪೈಸೆ ಕೂಡಿಸಿಕೊಟ್ಟು ಇಂಜಿನೀರ ಸಾಯಬನ್ನ ಮಾಡಿದ್ದಳು ಕಾಶವ್ವ.

............

''ಯಾಕಬೇಯವ್ವಾ, ಏನು ಗೇನಿಕಿ ಹಾಕಾಕ ಹತ್ತೇದಿ...? ಊಟಾ ಮಾಡಲಾ !''

ತಾನs ತನ್ನ ಕೈಯಿಂದ ನೀಡಿ ಉಣ್ಣಿಸಿದಾ ಮಗಾ, ಮ್ಯಾಲ ಹಣ್ಣ ತಿನ್ನಿಸಿದಾ, ಆಮ್ಯಾಲ ಎಲಿ-ಅಡಿಕಿ ಮಡಚಿಕೊಟ್ಟು ಲೆಂಡ ತೋಳಿನ ಜಂಪರು, ಭಗವಾ, ಸಾಬರ ಚೊಣ್ಣಾ ತೊಟಗೊಂಡ ಪೋರೀನ್ನ ಕರಕೊಂಡು ಬಂದು ಕಾಲಿಗಿ ಬೀಳಿಸಿ, ''ಯವ್ವಬೇ ಇಗಾ, ಈಕಿ ನಿನ್ನ ಸೊಸಿ ನೋಡು'' ಅಂದಾ. ಎದೀಗೆ ಕಲ್ಲು ಬಡದಂಗಾತು ಕಾಶವ್ವಗ.

ಸಾಲೀ ಕಲ್ಯೂದು ಮುಗದಿಂದ ನಾಲ್ಕು ವರ್ಷ ದೇಶ ಬಿಟ್ಟುದೇಶಕ್ಕ ಹೋದರೂ ತಾಯೀನ್ನ, ಅಕ್ಕತಂಗಿದೇನರ ಮರೀಲಿಲ್ಲಾ. ತಿಂಗಳಾ ತಿಂಗಳಾ ತಪ್ಪದ ಖರ್ಚಿಗಿ ಕಳಿಸ್ತಿದ್ದಾ. ಎರಡು-ಮೂರು ಸಾರೆ ಊರಿಗೆ ಬಂದು ಊರ ಸಾವುಕಾರ ಕಡೆ ರೊಕ್ಕಾ ಇಟ್ಟು ''ನಮ್ಮವ್ವನ್ನ ಚಂದಾಗಿ ನೋಡಿಕೋರಿ'' ಅಂತ ಹೇಳಿ ಹೋಗಿದ್ದಾ, ಎಲ್ಲಾ ಅಕ್ಕ-ತಂಗೇರ ಅನು-ತನು-ಕೇಳತಿದ್ದಾ. ಹಿಂತಾ ಮಗಾ, ಒಬ್ಬರಿಗೂ ತಿಳಿಸದ, ಮದ್ವಿ ಮಾಡಿಕೊಂಡು ಒಮ್ಮೆಕಿಲೆ ಹೇಂಡ್ತೀನ್ನ ತೋರಿಸಿದಾಗ ಹಡದ ಕಳ್ಳಿಗೆ ಕೊಳ್ಳಿ ಇಟ್ಟಾಂಗ ಅನಿಸ್ತು.

''ಇದೇನ ಹೇಳಿದೇ ಹುಚ್ಚು... ಮದಿವಿ ಅಂದರ ದೈವಾ-ಊರಾ, ಮಂದಿ - ಮಕ್ಕಳು, ದೈವದಕ್ಕೆ, ಗಂಗ ಸ್ಥಳಾ, ನಿಬ್ಬಣಾ-ಅರಿಷಿಣಾ-ಕುಂಕಮಾ... ಇದೆಲ್ಲಾ ಇರತದ. ಅವ್ವಗ ಹೇಳಲಿಲ್ಲಾ, ಅಕ್ಕ-ತಂಗೇರ್ನ ಕರಸಲಿಲ್ಲ, ಊರ ಹಿರೇರು ಅನ್ನಲಿಲ್ಲಾ, ಊರ ದೇವತೀಗೆ ಸೀರಿ ಉಡಸಲಿಲ್ಲ, ಮುತ್ತೈದೇರ ಉಡಿ ತುಂಬಲಿಲ್ಲ, ಬಳಿ ಇಡಸಲಿಲ್ಲ, ಐನೋರನ ಕರಸಲಿಲ್ಲ - ಅದ್ಹ್ಯಾಂಗ ಮದಿವಿ ಮಾಡಿಕೊಂಡ್ಯೊ ನನ ಮಗನಾ?'' ಅಂದಳು.

''ಈ ಕಡೆ ಮದವಿ ಹೀಂಗs ಏಳಬೆ. ಪರಿಸ್ಥಿತಿ ಹಂಗs ಬಂತು. ಯಾರ್ನೂ ಕರಸಾಕ ಆಗಲಿಲ್ಲಾ, ನಂದು ತಪ್ಪಾತು'' ಅಂದಾ ಮಗಾ.

''ಅಂವಗ ತಿಳೀಲಿಲ್ಲಂದರ ನಿನಗರ - ಬ್ಯಾಡಾ ನಿಮ್ಮಪ್ಪಾ - ಅವ್ವಗರ ತಿಳೀಲಿಲ್ಲೇನ, ನನ್ನ ಸೊಸಿಮುದ್ದಾ, ಇದು- ನಮ್ಮೂರಾನ ದೈವಕ್ಕೇನಸರ ಗೊತ್ತಾದರ...''

''ಆದರಾಗಲಿ... ದೈವಕ್ಕ ಬೇಡಿದಷ್ಟು ತಪ್ಪುದಂಡಾ ಕೊಡ್ತೀನೇಳಬೆ'' ಅಂದ ಮಗಾ. ಕಾಶವ್ವಗ ಸಿಟ್ಟು ಸಾವ ಬಂತು. ''ಪಿಂಡಾಕೊಡು ಖರೆ ದಂಡಾ ಕೊಡಬಾರದು. ಕಾಶವ್ವನ ಮಗ ದೈವಕ್ಕ ದಂಡ ಕೊಟ್ಟ ಅಂದರ ಈ ಕಾಶವ್ವನ ಮರ್ಯಾದೇನ ಉಳೀತು? ಮದುವೇನ ಹಗಲೆಲ್ಲಾ-ಆಗ್ತಾವು? ಇದ್ದೊಬ್ಬ ಗಂಡಸ ಮಗನ ಮದುವಿ ಹಾಂಗ ಮಾಡಬೇಕು, ಹೀಂಗ ಮಾಡಬೇಕು ಅಂತ ಕನಸ ಕಂಡಾಕಿ ನಾ. ನೀ ಒಂದು ಟಪಾಲ ಹಾಕಿದ್ದರ ನಾ ನಿಬ್ಬಣಾ ಎಬ್ಬಿಸಿಗೊಂಡು ಬರ್ತಿದ್ನೆಲ್ಲೊ...''

''ತಪ್ಪಾತೇಳಬೆ... ಇನ್ನೊಮ್ಮಿ ಹೀಂಗ ಮಾಡೂದಿಲ್ಲ.''

''ಅಂದರ ಇನ್ನೇಸ ಬ್ಯಾರಿ ಮದವಿ ಆಗಾಂವದಿಯೊ ?''

''ಮದವಿ ಅಲ್ಲಾ... ಮುಂದಿನ ಕಾರೇಕ ಊರಮಂದೀನ್ನ ಕರಸೂಣು'' ಅಂದಾ.

''ಅಂದರ ?'' ಹುಬ್ಬೇರಿಸಿ ಕೇಳಿದಳು ಮುದುಕಿ.

''ಹೌದು... ನಿನ್ನ ಸೊಸಿ ಹೊಟ್ಟೀಲೆ ಅದಾಳು... ಸೀಮಂತಕ್ಕ... ಅಂದರ ಕುಬಸಾ ಮಾಡುವಾಗ ನೀ ಹೇಳಿದೊಷ್ಟು ಮಂದೀನ್ನೆಲ್ಲಾ ಕರಿಸಿಗೊಂಡು ಆಮೇಲಿ ಮಾಡಿ ಕಳಸ್ತೀನಿ ಆತಿಲ್ಲೊ...''

ಸೊಸಿ ಹೊಟ್ಯಾಗ ಹೊಸಾ ಜೀವ ಒಂದು ಬೆಳ್ಯಾಕ ಹತ್ತೇದ ಅನ್ನೂ ಸುದ್ದೀ ಕೇಳಿ ಮಗನ ತಪ್ಪೆಲ್ಲಾ ಬಾರಾಖೂನ ಮಾಫ್ ಮಾಡಿ,

''ಈಗ ಎಷ್ಟರಾಗs ನನ್ನ ಸೊಸಿಮುದ್ದಾ?'' ಅಂತ ಸೊಸೀನ್ನ ಕೇಳಿದರ ಆಕಿ ಮಿಕಿ-ಮಿಕಿ ಗಂಡನ ಮಕಾ ನೋಡಿಕೋಂತ ನಿಂತಳು.

''ಯಾಕ ಈಕಿಗೆ ಮಾತ ಬರಂಗಿಲ್ಲಾ? ಮೂಕೇನ ಮತ್ತಾ? ಮಾತ ಬರಾಂಗಿಲ್ಲಾ?''

''ಬರ್ತಾವು, ಆದರ ನಮ್ಮ ಮಾತು ಬರಾಂಗಿಲ್ಲ. ಮರಾಠಿ, ಹಿಂದಿ, ಗುಜರಾತಿ, ಇಂಗ್ಲಿಷು... ಎಲ್ಲಾ ಮಾತಾಡ್ತಾಳು...'' ಅಂದಾ...

''ಗಂಡನ ಮನಿ ಮಾತು ಬರಲಾರದಾಕಿ ಈಕಿ ಹೆಂತಾ ಹೇಂಡ್ತ್ಯೋ, ಹುಚ್ಚ ಗೇಯ್ಮಿ ಮಾಡದ ಬೀಜಾ ಬಿತ್ತಿ ಹೆಂತಾ ಬೆಳೀ ತೆಗೀತಿಯೋ ತಮ್ಮಾ ನೀನು? ನೀ ಮೀಸಲ ಮಗಾ... ನಿನಗ ಹೆಣ್ಣು ಕೊಡೋರೆಸ ಮಂದಿ ಇದ್ರು ನಮ್ಮ ಕಡೆ. ಈ ಕಡೆ ಬಂದು ಈ ಪರದೇಶಿ ಕೂಡ ಕೂಡಿಕಿ ಮಾಡಿಕೊಂಡೇನ ಮತ್ತ?''

''ಇಲ್ಲೇಳಬೆ-ಮದುವೀನs. ಈಕಿ ಅಪ್ಪಾ-ಅವ್ವಾ ಪರದೇಶಕ್ಕ ಹೊರಟಾಗ ಅಂವಸರದಾಗ ಯಾದೀಮೆ ಶಾದಿ ಮಾಡಿದರು. ಇವತ್ತಿಗೆ ಮದುವ್ಯಾಗಿ ಒಂದು ವರ್ಷಾತು. ಅದಕ್ಕ ಇಂದ ಸಂಜೀಕೆ ಒಂದು ಪಾರ್ಟಿ ಇಟಗೊಂಡೀವಿ. ಆಗೆಲ್ಲಾ ಈಕಿ ಮಂದಿ-ಮಕ್ಕಳು ಬರ್ತಾರ ನೋಡೂವಂತಿ... ಈಗ ಒಂದಿಷ್ಟು ಆರಾಮ ತೊಗೊ ನಡಿ'' ಅಂದು... ದೊ ಮಜಲ ಮ್ಯಾಲಿನ ಕ್ವಾಣೆಗೆ ಕರಕೊಂಡು ಹೋದ. ಹೂವಿನಂತಾ ಗಾದೇನು, ಪಂಕಾ ಏನು, ಗಾಳಿ ಉಗಲೂ ಯಂತ್ರೇನು ಮಚ್ಚರದಾನೇನು...!

''ನಿನಗ ಏನರ ಬೇಕಾದರ ಈ ಬಟನ್ ಒತ್ತಬೆಯವ್ವಾ'' ಅಂತ್ಹೇಳಿ ಕೆಳಗ ಹೋದ ಹುಚ್ಚೇಶ್ವರ.

''ರೊಕ್ಕಾ ರುಪಾಯಿ ಒಂದಿದ್ದರ ರೀತಿ-ರಿವಾಜು ಸೂಟ ಆಗ್ತಾವೇನು? ನನಗೇನು ಹುಚ್ಚೂನ ಧರತಿ ಪಸಂದಿಲ್ಲ ಬಿಡು'' ಅಂದು ಸೆರಗೀಲೆ ಕಣ್ಣೀರ ಒರಸಿಗೊಂಡ್ಲು ಕಾಶವ್ವ.

ಊರಾಗ ಆಗಿದ್ದರ, ಹ್ಯಾಂಗ ಓಡಾಡಿ ಮದವಿ ಮಾಡತಿದ್ದೆ, ಮಂದಿ ಮಕ್ಕಳ್ನೆಲ್ಲಾ ಕರಿಸಿಗೊಂತಿದ್ದೆ, ಬೀಗರ್ನ ಹ್ಯಾಂಗ ಎದರಗೊಳ್ಳತ್ತಿದ್ದೆ, ಗಿರಮಲ್ಲಪ್ಪನ್ನ ಕರಿಸಿ ಎದರಗೊಳ್ಳೂ ಪದಾ ಹಾಡಸ್ತಿದ್ದೆ.... ಈ ಹುಚ್ಚು ಪಾರ ಎಲ್ಲಾ ಎಡವಟ್ಟು ಮಾಡಿದಾ ಅಂತ ಬೈದಳು ಮನಸಿನ್ಯಾಗ.

* * *

ಅವತ್ತು ಸಂಜೀಕ್ ಮನಿ ತುಂಬಾ ಮಂದಿ. ಬಂದವರಿಗೆ ಬೇಕು ಬ್ಯಾಡಾದ ಅಡಿಗಿ. ರೇಡಿವೇದಾನ ಹಾಡಿಗೆ ತೈ ತೈ ಅಂತ ಕುಣಿಯೊ ಹುಡುಗರು, ಹುಡಿಗೇರು.

ಬಂದವರು ಕೊಟ್ಟು ಹೋದ ಬಣ್ಣಬಣ್ಣದ ಪಾಕೀಟು, ರಟ್ಟಿನ ಡಬ್ಬಿಗೋಳು ಡಿಗ್ಗಿ ಡಿಗ್ಗಿ ಬಿದ್ದಿದ್ವು.

ಇದನ್ನೆಲ್ಲಾ ಒಂದು ಕುರ್ಚೀ ಮ್ಯಾಲ ಕುಂತು ನೋಡಿದ್ಲು ಕಾಶೀಬಾಯಿ. ಮಂದೆಲ್ಲಾ ಹೋದ ಬಳಿಕ :

''ಯವ್ವಾ, ಬಾ, ನೀನೂ ಊಟಾ ಮಾಡು'' ಬಂದು ಕರದಾ ಮಗಾ. ''ನಾ ವಲ್ಲೆಪಾ, ಮದ್ದಿನದಾಗ ಉಂಡದ್ದs ಇನ್ನಾ ಕರಗಿಲ್ಲ. ನನ್ನ ಮ್ಯಾಲ ಕಳಸು... ನಾ ಮಲಕೋಬೇಕು.''

ಹುಚ್ಚೇಶ್ವರ ಸ್ವತಃ ಆಕಿ ರಟ್ಟಿ ಹಿಡಿಕೊಂಡು ಮ್ಯಾಲ ಕರಕೊಂಡು ಹೋಗಿ :

''ಹ್ಯಾಂಗಿತ್ತಬೆಯವ್ವಾ ಪಾರ್ಟಿ ?'' ಕೇಳಿದ.

''ನಿನ್ನ ವೈಭೋಗ ನೋಡಿ ಹಂಡೆ ಹಾಲು ಕುಡದೊಷ್ಟು ಹಿಗ್ಗಾತು ಬಿಡು. ಆದರ...''

''ಆದರೇನಬೇ ?''

''ಆದರ, ನಿನ್ನ ಹ್ಯಾಂತಿ ಬ್ಯಾರೆ ಗಂಡಸರದು, ನೀ ಹೆರವರ ಹೆಂಗಸರದು ಕೈ ಹಿಡುಕೋದು ನೋಡಿ ನನ್ನ ಮೈ ಮ್ಯಾಗಲ ಕೂದಲ ಮುಳ್ಳ ಹಂದಿ ಕೂದಲಾದಂಗ ಆದ್ವು. ನಮ್ಮ ಹಳ್ಳೀ ಮಂದೆಲ್ಲಾ ಇದನ್ನ ನೋಡಿದ್ದರ...''

''ಇದು ಹಳ್ಳೆಲ್ಲಬೆ ಪ್ಯಾಟಿ, ದೊsಡ್ಡ ಪ್ಯಾಟಿ ಇಲ್ಲೀ ರೀವಾಜು ಹೀಂಗs. ಅದಿರ್ಲಿ. ಇದನ್ನ ಬಿಟ್ಟು ಉಳದದ್ದೆಲ್ಲಾ...''

''ಹೇಳಿದ್ನೆಲ್ಲಾ... ನಿನ್ನ ವೈಭೋಗ ನೋಡಿ ಬೆರಗಾಗೀನಿ ಅಂತ... ಆದರ...''

''ಮತ್ತೇನ ಆದರಬೇ ?''

''ಬಂದೋರೆಲ್ಲಾ ಅರ್ಧಾ ತಿಂದು ಅರ್ಧಾ ಕೆಡಿಸಿ ಎಲ್ಯಾಗ ಬಿಟ್ಟು ಬೀಸಾಕಿದ ಅಡಿಗ್ಯಾಗ ನಮ್ಮ ಕಡೆ ಒಂದು ದೊಡ್ಡ ಮದುವಿ ಆಗತಿತ್ತು, ಅದನ್ನ ನೋಡಿ ನನ್ನ ಹೊಟ್ಯಾಗ ಸಂಕಟಾತು ನೋಡು ಬಾಳಾ.''

''ಅದೂ ಪ್ಯಾಟೀ ರಿವಾಜೇಳಬೆ... ಹಿಂತಾವೆಲ್ಲಾ ಹಚಿಗೊಂಡು ನೀಯಾಕ ತಲಿ ಕೆಡಿಸಿಗೋಂತಿ ?''

''ಕೆಡೂದು, ಕೆಡಸೂದs ಇಲ್ಲೀ ರಿವಾಜ ಆದರ ಇಲ್ಲಿ ನನಗ ಬೇಶಿ ಅನಸೂದಿಲ್ಲಪಾ... ನಿನ್ನ ಹೇಂತಿ, ಆಕಿ ಅಕ್ಕ ತಂಗಿದೇರು, ಹೊಕ್ಕಳ ಕೆಳಗ ಸೀರಿ ಉಟ್ಟು, ತುಂಡತೋಳಿನ ಕುಬಸಾ ತೊಟ್ಟು ಕಿಸಿಕಿಸಿ ಅಂತ ನಗೂದು ನೋಡಿ ನನಗ ಹೇಸಿಕಿ ಸಾವ ಬಂತು. ನೀ ಏನs ಅನ್ನು ಹುಚ್ಚು ಹೆಂಗಸೂರು ನಾಕು ಮಂದಿ ಕೂಡಿದಲ್ಲಿ ರಟ್ಟಿ, ಹೊಟ್ಟಿ, ಹೊಕ್ಕಳಾ ಮುಚಗೊಂಡಿದ್ರ ಮರವಾದಿ...''

ಮನಸಿನ ಒಂದು ಮೂಲ್ಯಾಗ ಅವ್ವ ಹೇಳಿದ್ದು ಖರೆ ಅಂತ ಅನಿಸಿದ್ರೂ ಏನೂ ಮಾಡಲಿಕ್ಕಾಗದಕ್ಕ ಚಡಪಡಿಸಿದ ಹುಚ್ಚೇಶ್ವರ :

''ಇರ್ಲಿ ಬಿಡಬೆ, ರಾತ್ರಿ ಬಾಳಾತು, ಈಗ ಮಲಕೊ... ಮುಂಜಾಲೆದ್ದು ಮತ್ತ ಮಾತಾಡೂಣು'' ಅಂದು ಬಾಗಲಾ ಹಾಕ್ಕೊಂಡು ಕೆಳಗ ಹೋದಾ.

ರಾತ್ರಿ...

ಬಾಳ್ಹೊತ್ತನಕಾ ನಿದ್ದಿ ಬರಲಿಲ್ಲ ಮುದುಕೀಗೆ.

ಗುಂಯ್ ಅನ್ನೂ ಮಿಶನ್ನು, ಜೀ ಅನ್ನೂ ತಲಿ... ಹೀಂಗ ನಿದ್ದಿ ಹತ್ತಿತು ಅನ್ನೂದ್ರಾಕಾs ಬಂದಾಯ್ತು ಇಂಜನ್ನಾ.

ಮೈ ತುಂಬಾ ಬೆವರಾ, ಎಲ್ಲಿ ಸತ್ತು ಹೋಗ್ತೀನೊ ಅಂತ ಗಡಬಡಿಸಿ ಎದ್ದ ಮುದುಕಿ ಬಾಗಲಾ ತಗದು ಹೊರಗ ಹೋಗಿ ಮಲಕೊಂಡ್ಲು.

ಆಕೀಗೆ ಕೋಳಿ ಕೂಗೂಕಿಂತ ಮೊದಲ ಎದ್ದ ರೂಢಿ. ಕೂಗೋ ಕೋಳೀನ್ನ ಕಳಕೊಂಡ ಜಾಗಾದಾಗೂ ಎಚ್ಚರಾಯ್ತು ದಿನಾ ಏಳೂ ವ್ಯಾಳೇಕನs. ಎದ್ದು ಕೂತರ ಒಬ್ಬರಾನೊಬ್ಬರ ಸುಳಿವಿಲ್ಲ. ಒಂದು ತಾಸು, ಎರಡು ತಾಸು, ಮೂರು ತಾಸ ಕಳದರೂ ಒಬ್ಬರೂ ಏಳಲಿಲ್ಲ.

ಹರ್‍ಯಾಗೇಳೂತ್ಲೆ ಚರಿಗಿ ತೊಗಂಡು ಹೋಗಾಕಿ ಈ ಮುದುಕಿ ಹೊಟ್ಟಿ ಚುಟು ಚುಟು ಅಂದಾಂಗ ಅನಿಸ್ತು. ಬಚ್ಚಲ ಮನೀಗಿ ಹೋದಾಕಿನ ಚೆಂಬು ತುಂಬಿಕೊಂಡು ಬಾಗಲಾ ತಗದು ಹೊಂಟಬಿಟ್ಲು ಹೊರಗ.

ಎಷ್ಟು ದೂರ ನಡದರೂ ಮುಗೀಲಿಲ್ಲ ಊರ...

'ಯಾಕರ ಬಂದ್ನೇಯವ್ವಾ, ಈ ಊರಿಗೆ!' ಅಂದ್ಲು. ರಸ್ತಾದ ಎರಡೂ ಕಡೆ ಎತ್ತೆತ್ತರ ಬಿಲ್ಡಿಂಗ! ಎಷ್ಟು ಹುಡುಕಿದರೂ ಕುಂತು ಹಗುರ ಮಾಡಿಕೊಳ್ಳೊ ಬಯಲ ಸಿಗಲಿಲ್ಲ ಈ ಮುದುಕಿಗೆ.

'ಇದೊಳ್ಳೆ ಬಂದಾನ ಬಂತ ತಾಯಿ! ಈ ಊರಾಗ ಹಂದೀಗೆ ಜಾಗ ಅದ ಖರೆ. ಮಂದೀಗೆ ಇಲ್ಲಲ್ಲಾ ಅಂತೀನಿ' ಹಳಿಹಳಿಸಿದಳು.

* * *

ತಾಸ ಕಳೀತು, ಎರಡು ತಾಸ ಕಳೀತು, ಅವ್ವ ಎಲ್ಲಿಗಿ ಹೋದಳು ಅಂತ ಗಾಬರ್‍ಯಾಗಿ ಹುಡುಕ್ಯಾಡಕ ಹತ್ತಿದ್ದಾ ಹುಚ್ಚೇಶ್ವರ. ಮೊದಲs ಸಂದಿಲ್ಲದ ಓಡಾಡೂ ಗಾಡಿಗೋಳು. ಎಲ್ಲಿ ಹಾದಿ ಹೆಣಾ ಆಗ್ತಾಳೊ ಈ ಮುದುಕಿ! ಅಂತ ಒಂದು ಸವನs ಚಡಪಡಸಾಕ ಹತ್ತಿದ್ದಾ:

"ಲೇ ಹೋಗ್ರೆಲೆ ಇಲ್ಲಿ ಓಡ್ಯಾಡಿ ಏನ ಕಿಸೀತೀರಿ! ಒಬ್ಬರು ಬಿಟ್ಟು ಹತ್ತು ಮಂದಿ ಹೋಗ್ರಿ, ಹೋಗಿ ನಮ್ಮವ್ವನ್ನ ಹುಡುಕಿಕೊಂಡು ಬರ್‍ರಿ... ಥೂ ನಿಮ್ಮ..."

ಇಷ್ಟನ್ನೂದಕ ಕೈಯಾಗ ಚೆಂಬು ಹಿಡಿಕೊಂಡು ಒಳಗ ಬಂದ್ಲು ಅವರವ್ವ.

ಒಮ್ಮಿ ಆಕೀನ್ನ, ಒಮ್ಮಿ ಆಕೀ ಕೈಯಾನ ಚೊಂಬ್ನ ನೋಡಿ ಕೆಂಡಮಂಡಲಾದ.

"ಯಾರ ಮಾನಾ ಹರಾಜ ಮಾಡಾಕ ಬಂದೀದಿ ಏ ಮುದುಕೀ... ನಿನ್ನ ಕರಕೊಂಡು ಬಂದು ನಾನs ಗಲ್ಲಗಲ್ಲ ಬಡಕೋಬೇಕು ಅನುವಾಂಗ ಆಗೇದ ನೋಡು."

ಅಂತೆಲ್ಲಾ ಬಯ್ಬೇಕು ಅಂತಿದ್ದಾ... ಅಷ್ಟನ್ನೂದ್ರಾಗs ಆಕೀನs...

"ನನಗ ಹೊರಗಡೆ ಹೋದರs ಸಮಾಧಾನ ಅನಸ್ತದಪಾ... ಅದೇನು ತಮ್ಮಾ, ಈತೆತ್ತರ ಜಗಲೀಯಂತಾ ಬಿಳೀಕಲ್ಲ ಹಾಕಿಸೇರಿ, ಅದರ ಮ್ಯಾಲ ಹ್ಯಾಂಗ ಕೂಂಡ್ರೋದು? ಹೊತಗೊಂಡು ಬಿದ್ದು ಕಾಲ ಮುರಕೊಂಡರ ಯಾರು ಜ್ವಾಕಿ ಮಾಡ್ತಾರು ತಮ್ಮಾ ನನ್ನ?" ಅಂದಳು.

"ಇರ್ಲಿ ಬಿಡು ಶ್ಯಾಣೆಕ್ಕಿ ಅದಿ. ಕಮೋಡ ಬ್ಯಾಡಾದರ ಬಿಡು. ಹಿಂದ ಹಿತ್ತಲ್ದಾಗ ಆಳುಗೋಳ ಸಲುವಾಗಿ ಕಟ್ಟಿಸಿದ್ದು... ಸಾದಾ ಸಂಡಾಸ ಅದ ಅಲ್ಲಿ ಹೋಗು ಇನ್ನ ಮುಂದ. ಈಗ ಒಳಗ ಹೋಗಿ ಕೈ ತೊಳಕೊ. ಹಲ್ಲು ತಿಕ್ಕೊಂಡು ಜಳಕಾ ಮಾಡು."

ಕೆಂಗಣ್ಣು ಬಿಟ್ಟು ಒಮ್ಮೆ ಆಳುಗೋಳ್ನ ನೋಡಿದಾ. ನಾಲ್ಕು ಹೆಣ್ಣಾಳು ಓಡಿಬಂದು ಈಕಿನ್ನ ಕರಕೊಂಡು ಹೋದರೂ ಏನ ಎತಗೊಂಡು ಹೋದರೂ ಅನ್ನೂದುs ತಿಳಿಲಿಲ್ಲ ಆಕಿಗೆ. ನೀರ ತೋಡವರ್‍ಯಾರೊ, ಸಾಬಾನ ಕೊಡವರ್‍ಯಾರೊ, ಮೈ ತಿಕ್ಕವರ್‍ಯಾರೊ, ಮಲ್ಲಿಗಿ ಹೂವಿನಂತಾ ಟಾವೆಲ್ಲಾ ತೊಗೊಂಡು ಮೈ ಒರಸವರ್‍ಯಾರೊ...

ಕಂಚ್ಯಾಣೆದ್ರ ಕಾರೇ ಸಿದ್ದಿ ಅಂತಾರಲ್ಲ ಇದಕ್ಕs ನೋಡು.

ಇದು ಹುಚ್ಚೂಗ ಸಾವುಕಾರ ಮನ್ಯಾನ ಹುಡುಗೂರು ತೊಟ್ಟು ಬಿಟ್ಟ ಅರಿವಿ ಕಾಡಿ ಬೇಡಿ ಇಸಗೊಂಡು ಬಂದದ್ದು ನೆನಪಾತು ಕಾಶವ್ವಗ. "ಈಗ ಇಂವನ ಐಶ್ವರ್ಯಾ ನೋಡು. ದೇವರಾ... ತನಗ ಕೊಡಬೇಕನಿಸಿದರ ಕಣ್ಣ ಮುಚ್ಚಿ ಕಣ್ಣ ತಗೀಗೊಡದ ಬೇಕು ಬ್ಯಾಡಾದ್ದು ಕೊಡ್ತಾನ... ಮತ್ತ ಬ್ಯಾಡಾತು ಅಂದ್ರ ಇದ್ದದ್ದನ್ನೆಲ್ಲಾ ಗುಡಿಸಿ ಗುಂಡಾಂತರ ಮಾಡ್ತಾನ... ಅವಾ ಬಾಳದೊಡ್ಡ ಕಿಡಬುಡಿಕ್ಯಾ ಬಿಡು...." ಅಂದ್ಲು.

ಆದರ ಐಸ್ವರ್ಯಾನs ಸುಖಾ ಅಲ್ಲ. ಇದೇನಂದ್ರೂ ಅಲ್ಲತಗಿ. 'ನಮ್ಮ ಹಳ್ಳೀ ಊರs ನಮಗ ಪಾಡ. ಇದೇನು ಯವ್ವಾ ಸುಡುಗಾಡ!' ಅನ್ನಿಸ್ತು.

ಕೂಡಿ ಕುಂತು ನ್ಯಾರಿ ಮಾಡಿಸಿದ ಮಗಾ.

"ನೀ ಯಾವದಕ್ಕೂ ಸಂಕೋಚ ಮಾಡಿಕೋ ಬ್ಯಾಡವಾ... ನಿನಗ ಏನರ ಬೇಕು ಅನಿಸಿದಠ ನಿನ್ನ ಸೊಸೀಗೆ... ಇಲ್ಲಾ ಈ ಮನಿಶಾ... ಇಂವಾ ಇಲ್ಲಿ ಮ್ಯಾನೇಜರ-ಇಂವಗ ಹೇಳು...." ಅಂದಾ ಅಷ್ಟೇಳಿ ಹೋದ ಮಗಾ ನಾಲ್ಕು ದಿನಾ ನಾಪತ್ತೆ. ಇಲ್ಲಿ ಈ ಮುದುಕಿಗೆ ಉಂಡದ್ದು - ತಿಂದದ್ದು ಎಲ್ಲಾ ಅವ ಪತ್ತೆ.

* * *

ಐದನೇ ದಿನಾ ಸಂಜೀಮುಂದ ಊರ್‍ಲಿಂದ ಬಂದಾಂವನೇs ಹುಚ್ಚೇಶ್ವರ ಮ್ಯಾಗಲ ಕೋಣೆಗೆ ಹೋದ.

"ಯಾಕಬೆ ಯವ್ವಾ ಮಕಾ ಸಪ್ಪಗಾಗೇದ? ನಾ ಹೋದ ಬಳಿಕ ಏನೂ ತೊಗೊಂಡೇ ಇಲ್ಲಂತ. ಚಾ ಇಲ್ಲಾ, ನಾಷ್ಟಾ ಇಲ್ಲ, ಊಟಿಲ್ಲ, ಯಾಕ ಏನಾಗೇತಿ?"

ಮುದುಕಿ ಒಂದೂ ಅನ್ನಿಲ್ಲಾ - ಎರಡೂ ಅನ್ನಿಲ್ಲಾ.

"ಯಾಕಬೇ ಆರಾಮಿಲ್ಲೇನು? ಡಾಕ್ಟರ್ನ ಕರಸಲಿ?"

"ಏನೂ ಬ್ಯಾಡ, ತಮ್ಮಾ, ನಿನ್ನ ಪರಾಮಳಿಕಿ, ನಿನ್ನ ಕಕುಲಾತಿ ಹೆಚ್ಚಾಗಿ ಹೊಟ್ಯಾಗ ಗಂಟಾಗೇತಿ, ಇದಕ್ಕ ಯಾವ ಡಾಕ್ಟರ ಬಂದು ಏನ ಮಾಡ್ತಾನು? ನನ್ನ ಜಡ್ಡು ಹಗುರ ಮಾಡೂ ತಾಕತ್ತ ಇಲ್ಲೀ ಡಾಕ್ಟಾರಿಗೆ ಎಲ್ಲಿಂದ ಬಂದೀತು! ಉಸಿರಾಡೂ ಮನಿಶೇರ ಕೂಡ, ಹಾಡೂ ಹಕ್ಕೀ ಕೂಡ, ಹರಿಯೊ ನದಿ ಕೂಡ ಬೆಳದಾಕಿ ನಾನು. ಇಲ್ಲೆ ನಾಲ್ಕೂ ಗ್ವಾಡೀ ನಡುವ, ಗುಂಯ್ ಅನ್ನೂ ಮಿಶನ್ ಸಪ್ಪಳದಾಗ ಸಿಕ್ಕೊಂಡು ಮೂರೂ ಹೊತ್ತು ತಂಗಳ ಪೆಟ್ಟಿಗ್ಯಾಗಿನ ತಣ್ಣನ ಕೂಳ ತಿಂದು ಕುಪ್ಪತ್ತಿಗಿ ಆಗೇತಿ... ಜೀಂವ ಒಂದೇ ಸಾವನs ಚಡಪಡಸಾಕ ಹತ್ತೇತಿ..." "ಅಲ್ಲಬೆ ಅರಮನಿಯಂತಾ ಮನಿ, ಕೈಗೊಂದು ಕಾಲಿಗೊಂದು ಆಳು, ಬೇಕು ಬ್ಯಾಡಾದ್ದು ಸಿಗೋವಂತಾ ಶಾರಾ... ಇಲ್ಲಿ ಏನುs ಕಡಿಮಿ ಆಗೇತಿ ಅಂತ ಹೀಂಗ ಮಾಡಾಕ ಹತ್ತೀ ನೀನು?"

"ನನಗ ಏನೂ ಕಡಿಮಿ ಆಗಿಲ್ಲs ತಮ್ಮಾ. ನನಗ ನನ್ನ ಊರು ಕಾಶಿ ಕೈಲಾಸ ಎಲ್ಲಾ. ಇಲ್ಲಿ ನೀ ಏನ ತಂದು ಮುಂದಿಟ್ರೂ ನನ್ನ ಜೀವ ಗಮ್ಮಸಂಗಿಲ್ಲ... ನನ್ನ ಇಂದುs ನಮ್ಮೂರಿಗೆ ಕಳಿಸಿ ಬಾ" ಅಂದಾಕಿನs ಮುಸುಗು ಹಾಕ್ಕೊಂಡು ಮಲಕೊಂಡ್ಲು ಕಾಶವ್ವ.

ಬಿ. ಆರ್. ಪೋಲೀಸ್ ಪಾಟೀಲ
ಪ್ರಾಂಶುಪಾಲರು. ಎಸ್.ಆರ್.ಎ. ಪದವಿಪೂರ್ವ ಕಾಲೇಜು,
ಬನಹಟ್ಟಿ, ಬಾಗಲಕೋಟೆ - ೫೮೭ ೩೧೭

ಅದೊಂದು ದಿನ ಕಂಡಕ್ಟರ ಮೈಲಾರಿ ಗದಗ-ಬೆಂಗಳೂರು ನಾಯಿಟ್ ಟ್ರಿಪ್ ಮುಗಿಸಿಕೊಂಡು ಬಂದು ಮನೆಯಲ್ಲಿ ಹಾಯಾಗಿ ಗೊರಕೆ ತೆಗೆದಿದ್ದ. ಅಂದು ಅವನಿಗೆ ವಾರದ ಸೂಟಿ. ಮಧ್ಯಾಹ್ನ ಒಂದರ ಸುಮಾರಿಗೆ ಕೋರಿಯರ್ ಹುಡುಗ ಬಂದು ಒಂದು ಲಕೋಟಿ ಕೊಟ್ಟು ಹೋದ. ಮೈಲಾರಿ ಅದನ್ನು ಒಡೆಯುವ ಮುಂಚೆ ಅದರ ಮೇಲೆ ಕಣ್ಣಾಡಿಸಿದ. ಬೆಂಗಳೂರಿಂದ ಬಂದದ್ದು ಖಚಿತವಾಯ್ತು. ಹುಬ್ಬು ಮೇಲೇರಿಸಿದ!

ಇಂಥ ಹೊತ್ತಿನಲ್ಲಿ ಕುತೂಹಲ ಇಮ್ಮಡಿಸುವುದು ಸಾಮಾನ್ಯ. ಮೈಲಾರಿಯ ಮನದಂಗಳದಲ್ಲಿ ಏನೇನೋ ಅಸಂಬದ್ಧ ಯೋಚನೆಗಳ ಚೆಲ್ಲಾಟ. 'ನನಗೆ ಪ್ರೊಮೋಶನ್ ಸಿಕ್ಕಿರಬಹುದೇ? ರಾಜ್ಯೋತ್ಸವ ಪ್ರಶಸ್ತಿ ಬಂದಿರಬಹುದೇ? ನನ್ನನ್ನು ಇಲ್ಲಿಂದ ಟ್ರಾನ್ಸ್‌ಫರ್ ಮಾಡಿರಬಹುದೇ? ಇಲ್ಲಾ..?' ಹೀಗೆ ಕುಣಿದಾಡುವಷ್ಟು ಸಂತೋಷದ ಜೊತೆಗೆ ಆತಂಕವೂ ಸೇರಿತ್ತು. ಯೋಚನೆಯ ಓಟಕ್ಕೆ ತಡೆಹಾಕಲು ಕವರ್ ತೆರೆದು ಓದಲಾರಂಭಿಸಿದ. ಬಿತ್ತು ಒಂದು ಬಾಂಬು! ಮೈಲಾರಿಯ ಮುಖ ವಿವರ್ಣವಾಯಿತು. ಮೈ ಪೂರ ಬೆವರಿತು. ಹೊಟ್ಟೆಯೊಳಗೆ ಖಾರ ಕಲಸಿದಂತಾಯಿತು. ಉಗುಳು ನುಂಗಿಕೊಂಡ. ತಾನೇ ಓದಿದ್ದನ್ನು ನಂಬಲಾಗದೆ ಹಣೆಗೆ ಕೈ ಹಚ್ಚಿಕೊಂಡು ಕಲ್ಲಿನಂತೆ ಕುಳಿತ.



* * *

ಗದಗಿನ ಮಹಾವೀರ ಸರ್ಕಲ್. ರಾತ್ರಿ ಒಂಭತ್ತೂವರೆ ಸಮಯ. ಅಂಗಡಿ ಮುಂಗಟ್ಟುಗಳೆಲ್ಲ ದಿನದ ವಹಿವಾಟು ಮುಗಿಸಿ ಬೀಗ ಜಡಿದುಕೊಂಡಿದ್ದವು. ಕಿವಿಗಡಚಿಕ್ಕುವ ವಾಹನಗಳ ಸದ್ದಡಗಿ ಬಣಗುಟ್ಟುವ ರಸ್ತೆಯುದ್ದಕ್ಕೂ ಬೆಳಕು ಚೆಲ್ಲುತ್ತ ಬಂದು ಕತ್ತಲಲ್ಲಿ ಲೀನವಾಗುವ ಆಗೊಂದು ಈಗೊಂದು ವಾಹನ.

ಯಾಂತ್ರಿಕ ಕೆಲಸದಿಂದ ಬೇಸತ್ತುಹೋಗಿದ್ದ ಚಿತ್ತರಂಜನ್ ದಾಸ್‌ನಿಗೆ ಬದುಕಿನಲ್ಲಿ ಬದಲಾವಣೆ ತರಲು ಹೊಸದೇನಾದರೂ ಮಾಡಬೇಕೆನ್ನುವ ಕ್ರೇಜು. ವಾರದಿಂದ ಮನದಲ್ಲಿ ಮಂಥನ ನಡೆಸಿದ್ದ ಯೋಚನೆಯೊಂದು ಸ್ಪಷ್ಟವಾದ ರೂಪ ತಾಳಿತ್ತು. ರುಟಿನ್ ಕೆಲಸ ಬದಿಗಿಟ್ಟು ಇಂದಿನ ಬೆಂಗಳೂರು ಪಯಣ. ಹೊರಟಿರುವ ಕಾರ್ಯ ಸಾಕಾರಗೊಂಡರೆ ತನ್ನ ವೃತ್ತಿಗೇ ಟರ್ನಿಂಗ್ ಪಾಯಿಂಟ್. ಹೀಗೇ ಸಾಗಿತ್ತು ದಾಸ್‌ನ ಯೋಚನಾ ಲಹರಿ.

ದಾಸ್ ವಾಚ್ ನೋಡಿದ. ಹತ್ತು ದಾಟಿದರೂ ಬಸ್ಸಿನ ಸುದ್ದಿಲ್ಲ. ಪ್ರತಿದಿನ ಸಮಯಕ್ಕೆ ಸರಿಯಾಗಿ ಬರುವ ಬಸ್ಸು ಇಂದೇಕೆ ತಡ? ಬಹುಶಃ ತಾಂತ್ರಿಕ ತೊಂದರೆ ಕಾಣಿಸಿಕೊಂಡಿರಬೇಕು. ಇನ್ನೇನು ಬಂದುಬಿಡುತ್ತೆ. ಸ್ವಗತದಲ್ಲಿ ಹೇಳಿಕೊಂಡ. ಹರಿದಾಡುವ ಆಲೋಚನೆಗಳಿಗೆ ಭಂಗ ತರುವಂತೆ ರಾಜಹಂಸ ಬಸ್ಸು ಗೋಚರಿಸಿತು.

* * *

# ರಾಜಹಂಸದಲ್ಲಿ ಹೀಗೊಂದು ಸಂದರ್ಶನ

ಅರಗಿಸಿಕೊಳ್ಳಲಾಗದ ವಿಷಯ ತಿಳಿದ ಬಳಿಕ ಗರಬಡಿದವನಂತೆ ಕಂಬಕ್ಕೆ ಆನಿಸಿಕೊಂಡು ಕುಳಿತಿದ್ದ ಮೈಲಾರಿಗೆ ಶಾಕ್‌ನಿಂದ ಆಚೆಗೆ ಬರಲು ಸ್ವಲ್ಪ ಸಮಯ ಹಿಡಿಯಿತು. ಮನಸ್ಸು ಫ್ಲಾಶ್‌ಬ್ಯಾಕ್‌ನಲ್ಲಿ ಎರಡು ವಾರ ಹಿಂದಕ್ಕೆ ಓಡಿತು. ಆವೊತ್ತು ರಾಜಹಂಸದಲ್ಲಿ ನಡೆದ, ಕಣ್ಣಿಗೆ ಕಟ್ಟುವಂತಹ ಘಟನಾವಳಿಗಳ ನೆನಪಿನ ಸುರುಳಿ ಮೈಲಾರಿ ಮನಃಪಟಲದ ಮೇಲೆ ಪುಂಖಾನುಪುಂಖವಾಗಿ ತೆರೆದುಕೊಳ್ಳತೊಡಗಿತು.

ನವೆಂಬರ ೨೫, ೨೦೦೬ ಶನಿವಾರ ರಾತ್ರಿ ಹನ್ನೊಂದರ ಸುಮಾರಿಗೆ ಮಹಾವೀರ ಸರ್ಕಲ್ಲಿನಲ್ಲಿ ನಾಲ್ವತ್ತರ ಪ್ರಾಯದ ಆಸಾಮಿ ಹಾಜಹಂಸ ಏರಿದ. ಒಳಗಡೆ ಕಾಲಿಡುತ್ತಿದ್ದಂತೆ ಸುತ್ತಲೂ ಕಣ್ಣು ಹಾಯಿಸಿದ. ಅವನಿಗೆ ದಿಗ್ಭ್ರಮೆ! ಖಾಲಿ ಸೀಟು ಕಾಣಸಲಿಲ್ಲ. ''ನಂಗೀಗ ಒಂದು ಸೀಟು ಬೇಕೇ ಬೇಕು'' ಅಂತ ಕಂಡಕ್ಟರಗೆ ದುಂಬಾಲು ಬಿದ್ದ. ''ಸಾರ್ ಇವೊತ್ತು ವೀಕೆಂಡ್. ಬಸ್ಸು ಫುಲ್ ಆಗೇತ್ರಿ. ಹಾಂ ತಡೀರಿ. ಎಮರ್ಜನ್ಸಿಗೆ ಬೇಕಾಗುತ್ತೆ ಅಂತ್ಲೇನೆ ನಂನ ಪಕ್ಕದ ಸೀಟು ಖಾಲಿ ಇಟ್ಟೀನಿ. ಟಿಕೆಟ್ ಮೇಲೆ ನೂರು ಕೊಟ್ಟು ಕುಂತ್ಕೊಳ್ರಿ'' ಕಂಡಕ್ಟರ ಕೂಲಾಗಿ ಡಿಮಾಂಡ್ ಮಾಡಿದ. ಆಸಾಮಿ ಮರುಮಾತಾಡದೆ ಒಪ್ಪಿಗೆ ಸೂಚಿಸಿದ.

ಕಂಡಕ್ಟರ ಪ್ರಯಾಣಿಕರನ್ನು ಚೆಕ್ ಮಾಡಿ, ಎಂಟ್ರಿ ಹಾಕಿ, ತನ್ನ ಸೀಟಿನಲ್ಲಿ ಕೂತ. ಒಂದು ಪಾಕೆಟ್ ಹರಿದು ಬಾಯಿಗೆ ಸುರುವಿಕೊಂಡ. ಗುಟ್ಕಾ ಮೆಲ್ಲುತ್ತ ನೂರು ಕೊಟ್ಟವನ ಕಡೆ ಮಂದಹಾಸ ಬೀಸಾಕಿದ. ಪಕ್ಕದ ಆಸಾಮಿಗೆ ಕಂಡಕ್ಟರ ಒಳ್ಳೆ ಉಮೇದಿನಲ್ಲಿರುವಂತೆ ತೋರಿದ. ಮಾತಿಗೆಳೆಯಲು ಸೂಕ್ತ ಸಮಯ ಅಂತ ನಿರ್ಧರಿಸಿ ಕಾರ್ಯಾಚರಣೆಗೆ ಚಾಲನೆ ನೀಡಿದ.

''ಕಂಡಕ್ಟರ ನಿಂನ ಪರಿಚಯ ಆಗ್ಲಿಲ್ಲ'' ಆಸಾಮಿ ಕಂಡಕ್ಟರ ಮುಖದಲ್ಲಿನ ಬದಲಾವಣೆ ಗಮನಿಸುತ್ತ ಪೀಠಿಕೆ ಹಾಕಿದ.

''ನಂನ ಹೆಸರು ಮೈಲಾರಿ. ಇಲ್ಲೇ ಗದಗಿನ ಸೆರಗಿನಲ್ಲಿರುವ ಹಳ್ಳಿ ನಂಮೂರು. ಬಡತನದಲ್ಲಿ ಬೆಳೆದು, ಕಷ್ಟಪಟ್ಟು ಓದಿ ಡಿಗ್ರಿ ಮುಗಿಸೀನಿ. ಒಬ್ಬ ರಾಜಕೀಯ ನೇತಾರನ್ ಹಿಡ್ದು, ಲಂಚ ಕೊಟ್ಟು ತೊಗಲಿನ ಚೀಲನ್ ಹೆಗಲ್ಗೇರಿಸಿ ಭರ್ತಿ ಹದಿನೈದು ವರ್ಷ ಸರ್ವಿಸ್ ಸಾರ'' ಮೈಲಾರಿ ತನ್ನ ಕಿರುಪರಿಚಯ ಮಾಡಿಕೊಂಡ. ಮತ್ತೆ ಮುಂದುವರಿಸಿ ''ಅಂದ್ಹಾಗೇ ತಾವ್ಯಾರು ಗೊತ್ತಾಗ್ಲಿಲ್ಲ? ಒಳ್ಳೇ ಆಫೀಸರ್ ತರ ಕಾಣ್ತೀರಿ'' ಪ್ರಶ್ನಿಸಿದ.

''ನಂನ ಹೆಸರು ಚಿತ್ತರಂಜನ ದಾಸ್. ಸುರತ್ಕಲ್ ಕಾಲೇಜಿನಾಗ ಮಾಸ್ತರ, ಸಂಶೋಧಕ. ನೀನು ನಂನ ಹುಟ್ಟೂರು ಪಕ್ಕದಾವ ಅಂತ ಗೊತ್ತಾಗಿ ನಂಗೆ ಒಂದು ರೀತಿಯ ಖುಷಿ. ನಿಂಮೂರಿನ ರಗಡ ಜನ ನಂನ ಪರಿಚಿತರು. ಅಲ್ಲಿ ನಮ್ಗೆ ಬೀಗ್ತನ ಬ್ಯಾರೆ ಆಗೇತಿ'' ದಾಸ್ ಸುಳ್ಳು ಹೊಸೆದು ಮೈಲಾರಿಯ ವಿಶ್ವಾಸಕ್ಕೆ ಪಾತ್ರನಾದ.

ದಾಸ್ ತಿರುಗಿ ಹೇಳಿದ, ''ಮೈಲಾರಿ ನಂಗೋಸ್ಕರ ಒಂದು ಉಪ್ಕಾರ ಮಾಡ್ತೀಯಾ?''

''ಏನ್ ಆಗ್ಬೇಕು ಹೇಳಿ ಸಾರ್?'' ಮೈಲಾರಿಯ ಮಾತಿನಲ್ಲಿ ಬೇಸರದ ಎಳೆ ಬೆರೆತಿರಲಿಲ್ಲ.

ಪ್ರೊ॥ ರುದ್ರಯ್ಯ ವಿ. ಗದಗ

''ನೋಡು ಮೈಲಾರಿ, ನಾನು ಕರ್ನಾಟಕ ರಾಜ್ಯ ಸಾರಿಗೆ ಸಂಸ್ಥೆಯ (ಕರಾಸಾಸಂ) ಕಂಡಕ್ಟರಗಳ ಕಾರ್ಯ ವೈಖರಿಯ ಕುರಿತು ಸಂಶೋಧನೆ ಮಾಡಾಕ ಹತ್ತೀನಿ. ಮುಂದ ಇದರಿಂದ ನಿಮ್ಗೆ ಹಿತ. ಅಲ್ಲಲ್ಲಿ ಅವರಿವರಿಂದ ಹಲವು ರೀತಿ ಮಾಹ್ತಿ ಕಲೆ ಹಾಕಾಕ ಸುರು ಮಾಡೀನಿ. ಇವತ್ತ ನಿಂನ ಪರಿಚಯವಾಗಿ ಬಾಳ್ ಅನ್ಕೂಲ ಆಯ್ತು. ನಂಗೊತ್ತು ನಿಂನ ಅನುಭವ, ಅನಿಸಿಕೆ, ವಿಚಾರಗಳನ್ನ ನಂನ ಹತ್ರ ಹಂಚಿಕೊಳ್ತೀಯಾ ಅಂತ. ಎಷ್ಟೇ ಆಗ್ಲೀ ನೀ ನಂಮವ ತಾನೇ'' ದಾಸ್ ಅನುಕಂಪದ ಮಾತು ಹರಿಬಿಟ್ಟು, ಅವನನ್ನು ಉಬ್ಬಿಸಿ ತನ್ನ ಉದ್ದೇಶ ತಿಳಿಸಿದ.

''ಅದ್ಕೇನಂತೆ. ಬಿಡೇಬಿಟ್ಟು ಕೇಳ್ರಿ ಮಾಸ್ತರ್ರೆ'' ಮೈಲಾರಿ ತಡವರಿಸದೆ ಒಪ್ಪಿಗೆ ಸೂಚಿಸಿದ. ಮೀನು ಗಾಳಕ್ಕೆ ಬಿತ್ತೆಂದು ದಾಸ್‌ಗೆ ಸಕತ್ ಖುಷಿ.

''ಕಂಡಕ್ಟರ್ಸ್ ಟ್ರಾಫಿಕ್ ಇನ್‌ಚಾರ್ಜ (ಟಿ.ಐ.) ಅಧಿಕಾರಿಗೆ ದುಂಬಾಲು ಬಿದ್ದು ಕೈ ಬೆಚ್ಗ ಮಾಡಿ, ಲಾಂಗ್‌ರೂಟಿನ ನಾಯಿಟ್ ಟ್ರಿಪ್ ಹಾಕ್ಸಿಕೊಳ್ತಾರೆ ಅಂತ ಮಂದಿ ದೂರು ಹೇಳ್ಕೊಂಡು ತಿರುಗ್ತಾರೆ. ಅಂದ್ಹಾಗೆ ಅದರಾಗ ಏನೈತಿ ಮಾರಾಯ ಅಂಥ ಸೆಳೆತ?'' ದಾಸ್ ಮೊದಲ ಪ್ರಶ್ನೆ ಒಗೆದ.

''ಕೋಲಾರದ ಚಿನ್ನದ ಗಣಿ ಸಾರ್!'' ಒಗಟಿನಲ್ಲಿ ಉಲಿದ ಮೈಲಾರಿ.

''ಅಂದ್ರೆ...? ನಿಂನ ಮಾತಿನ ತಳಬುಡ ಅರ್ಥ ನಂಗಾಗ್ಲಿಲ್ಲ'' ದಾಸ್‌ಗೆ ಫುಲ್ ಕನ್‌ಫ್ಯೂಸ್.

''ನೋಡಿ ಸಾರ್. ಎಲ್ಲಾರ ಹಾಂಗ ನಮ್ಗೂ ಸೈಟು, ಬಂಗ್ಲೆ, ಜಮೀನು, ಕಾರು ಅಂತ ಹತ್ತಾರು ಆಶೆ-ಆಕಾಂಕ್ಷೆಗಳು ಅದಾವ್ರಿ. ಇಂಥಾವೆಲ್ಲ ಬರಿಗೈಲಿ ಹ್ಯಾಂಗ್ ಮಾಡೋದು ಸಾರ್? ಇವಕ್ಕೆಲ್ಲ ಹಣ ಹೊಂದ್ಸೋದು ಹ್ಯಾಂಗ್ರೀ? ಸಂಬ್ಳ ಒಂದನ್ ನೆಚ್ಗೊಂಡು ಕುಂತ್ರ ಆಗುತ್ತಾ? ಆದರ್ಶಕ್ಕಿಂತ ಹಣನ ಮುಖ್ಯ ಸಾರ್'' ದಾಸ್‌ನಿಗೇ ಉಪದೇಶ ಮಾಡಿದ ಚಾಲಾಕಿ ಮೈಲಾರಿ.

''ಉಹುಂ...! ನಂಗನ್ಸುತ್ತೆ ನೀ ತಿಪ್ಪರಲಾಗ ಹಾಕಿದ್ರೂ, ಬಿಗಿದಿಟ್ಟ ನಿಂನ ಬದುಕಿನಾಗ ಇಷ್ಟಾನಿಷ್ಟಗಳು ಈಡೇರೋದು ಅಸಂಭವ'' ಮೈಲಾರಿಯ ನಿಲುವಿಗೆ ದಾಸ್ ಮಾರಲ್ ಸಪೋರ್ಟ್ ಕೊಟ್ಟ.

''ಅದ್ಕೆ ಸಾರ್ ನಾಯಿಟ್ ಟ್ರಿಪ್ಸ್‌ಗೆ ಲಾಬಿ ಮಾಡೋದು. ಒಂದ್ಸಾರಿ ಗದಗ - ಬೆಂಗಳೂರು ಟ್ರಿಪ್ ಮುಗ್ಸಿ ಬಂದ್ರ ಅಜಮಾಸು ಆರುಸಾವಿರ ಸಂಪಾದನೆ. ಟಿ.ಐ.ಗೆ. ಡ್ರಾಯಿವರಿಗೆ ಒಂದಿಟು ಕೊಟ್ರ ಸಿಂಹಪಾಲು ನಂನ ಸಂಪಾದನೆ. ಇದ್ರಿಂದ್ಲೇ ಅಲ್ವಾ ಹಳ್ಳ್ಯಾಗ ಜಮೀನು, ತೋಟಪಟ್ಟಿ ತಗೊಂಡಿದ್ದು, ಶಹರದಾಗ ಮನೆ ಕಟ್ಟಿದ್ದು, ಮಗನ್ ಇಂಜಿನಿಯರ ಮಾಡ್ಸಿದ್ದು ಸಾರ್'' ಮೈಲಾರಿ ಒಗಟು ಒಡೆದ. 'ಎಲಾ ಇವನ! ಕೇವಲ ಹದಿನೈದು ವರ್ಷದಾಗ ಇಷ್ಟೆಲ್ಲಾ ಆಸ್ತಿಯ ಒಡೆಯ! ಸಂಬಳಕ್ಕಿಂತ ಗಿಂಬ್ಳವೇ ಭಾರ!' ದಾಸ್‌ನ ಆಸಕ್ತಿ ಕೆರಳಿತು.

''ಅದ್ಸರಿ. ನಿಂಮ ಅದ್ಭುತ ಕಾರ್ಯದ ಸಿಕ್ರೇಟ್ ಏನಯ್ಯ?'' ಅವಾಕ್ಕುಗೊಂಡು ಕೇಳಿದ ದಾಸ್.

''ಹಣ ಮಾಡೋದು ನಮ್ಗೇನು ಹೊಸತಲ್ಲ. ಯಾವಾಗ ತೊಗ್ಲಿನ ಬ್ಯಾಗ್ ಹೆಗ್ಲೇರಿತೋ ಆವಾಗ್ಲಿಂದ ನಮ್ಗಿದ್ದು ಮಾಮೂಲು. ಆದ್ರೆ ಒಂದು. ಈ ದಂಧೆ ಮಾಡಾವ ಮೂರೂ ಬಿಟ್ಟಿರಬೇಕು. ಸಂಪಾದನೆಗೆ ತರಾವರಿ ತಂತ್ರ ಬಳ್ಸಿಗೊಳ್ತೇವಿರಿ.

''ರಶ್ ಇದ್ದಾಗ ಟಿಕೆಟ್ ಮ್ಯಾಲ ನೂರು-ಇನ್ನೂರು ಡಿಮಾಂಡ್ ಮಾಡ್ತೇವಿ. ಕೆಲವರಿಗೆ ಡುಪ್ಲಿಕೇಟ್ ಟಿಕೆಟ್ ಕೊಟ್ರ, ಇನ್ನು ಹಲವರಿಗೆ ಹಳೇ ಅಸ್ಲಿ ಟಿಕೆಟ್‌ಗಳನ್ನ ರೀಸಾಯಿಕಲ್ ಮಾಡ್ತೇವಿ. ಇನ್ಕೆಲವರಿಗೆ ಯಾವುದೇ ಟಿಕೆಟ್ ಕೊಡ್ದ ಹಣ ಇಸ್ಕೊಳ್ತೇವಿ. ಒಟ್ಟಿನ ಮ್ಯಾಲ ಈ ದಂಧೆ ಪಸಂದಾಗಿ ನಡೆದೈತ್ರಿ.

''ಈ ಲಿಸ್ಟಿಗೆ ಎಲ್ಲಕ್ಕಿಂತ ಮಿಗಿಲಾದ ಲೇಟೆಸ್ಟ್ ಟ್ರಿಕ್ ಸೇರಿಕೊಂಡೈತ್ರಿ. ಕೆಲ್ಸ ಸುಲಭ, ಆದಾಯ ಅಧಿಕ. ಮೇಲಾಗಿ ಝೀರೋ ರಿಸ್ಕು. ನಂಮ ತೊಗಲಿನ ಚೀಲದಾಗ ಬ್ಯಾಸರಾಗೋವಷ್ಟು ಚಿಲ್ರೆ ಬಿದ್ದಿದ್ರೂ ಬಾಕಿ ಚಿಲ್ರೆ ಕೊಡ್ದ ಟಿಕೆಟ್ ಮೇಲೆ ಗೀಚಿಕೊಡ್ತೇವಿ. ಹೆಚ್ಚಿನವರಿಗೆ ಚಿಲ್ರೆ ಬಾಕಿ ನೆಂಪ ಇರೋದಿಲ್ಲ. ಗಮನವೆಲ್ಲ ಮನೆ ಸೇರಿಕೊಳ್ಳೋ ಕಡೆ. ಊರು ಬಂದ ಕೂಡ್ಲೇ ಬಸ್ಸು ಇಳ್ದು ಚಿಲ್ರೆ ಕೇಳ್ದ ಹೋಗೋ ಜನ ಜಾಸ್ತಿ. ಮಂದಿ ಮರವು ನಮ್ಗೆ ವರ. ಚಿಲ್ರೆ ೧-೨ ರೂ. ಇದ್ರ ದಿವ್ಯ ನಿರ್ಲಕ್ಷ್ಯ ತೋರ್ತೇವಿ. ಅವ್ರೇನಾರ ಪಿರಿಪಿರಿ ಹಚ್ಚಿದ್ರ, ಎಂಥ ಚಿಲ್ರೆ ಜನಪಾ ಅಂತ ಮಂದ್ಯಾಗ ಮಾನ ಹರಾಜು ಹಾಕ್ತೇವಿ.

''ಒಂದ್ಸರ್ತಿ ದೊಡ್ಡ ಕುಳ ಬಸ್ಸು ಏರಿದ. ತನ್ನದೇ ಠೇಂಕಾರದಿಂದಲೇ ನನ್ನೆಡೆ ಐನೂರು ನೋಟನ್ ಚಾಚಿದ. ನಾನು ಟಿಕೆಟ್ ದುಬ್ಬಿದ ಮ್ಯಾಲ ೪೫೦ ಗೀಚಿ ಕೊಟ್ಟೆ. ಅವ್ನ ಪಯಣ ಮುಗಿಯಾಕ ಬಂತು. ಆಸಾಮಿ ಏನ್ ಮಾಡ್ತಾನೋ ನೋಡೇ ಬಿಡುವಾ ಅನ್ಕೊಂಡು, ಅವ್ನ ಮ್ಯಾಲ ಕಣ್ಣ ಇಟ್ಕೊಂಡೇ ಕುಂತಿದ್ದೆ. ಬಸ್ಸು ನಿಂತಿತು. ಪುಣ್ಯಾತ್ಮ ಬಸ್ಸಿಳಿದು ನನ್ನೆಡೆ ತಿರುಗಿ ಸಹ ನೋಡ್ದ ಬಿರಬಿರನೆ ನಡೆದು ಹೋದ. ನಾನು ತಕ್ಷಣ ಡಬಲ್ ರೈಟ್ ಹೇಳಿದೆ.'' ಹಣ ಮಾಡುವ ವರಸೆಗಳನ್ನು ಕೇಳಿ ದಾಸ್ ನಿಬ್ಬೆರಗಾದ.

''ನಾನು ಸೀರಿಯಸ್ಸಾಗಿ ಹೇಳ್ತೀನಿ. ನೀ ಮಾಡೋದು ಕಾನೂನು ಬಾಹಿರ ಚಟುವಟಿಕೆ, ಅಪರಾಧ. ನಿಯತ್ತಿಂದ ಗಳ್ಸಿದ್ದನ್ನ ಉಳ್ಸಿಕೊಂಡು ಬದುಕೋದು ಚೆಂದ ಹೊರತು ಹೇಸಿಗೆ ಸಂಪಾದನೆಯಲ್ಲಿ ಸುಖದ ಎಲ್ಲ ಮಜಲುಗಳನ್ನ ಕಾಣೋದು ಛಲೋ ಅಲ್ಲಾ. ಪುಸಕ್ಕನೆ ವಕ್ರಿಸೋ ಸ್ಕ್ವಾಡ್‌ನವರ ಕೈಯಾಗ ಅಕಸ್ಮಾತ್ ರೆಡ್‌ಹ್ಯಾಂಡಾಗಿ ಸಿಕ್ಕಾಕ್ಕೊಂಡ್ರ ನಿಂನ ಗತಿ ಏನು ಗೊತ್ತಾ? ಮಾನದ ಜೊತೆಗೆ ಕಾಸೂ ಕಳ್ಕೊಂಡು ಬೀದಿನಾಯಿ ಬಾಳು ಆದೀತು ಹುಷಾರ್!'' ಮುಂದೆ ಆಗಬಹುದಾದ ಅನಾಹುತದ ಬಗ್ಗೆ ಎಚ್ಚರಿಕೆ ನೀಡಿದ ದಾಸ್.

''ಯಾವ ಕಾಲ್ದಾಗ ಆದಿರಿ ಮಾಸ್ತರ್ರೆ. ಇಲ್ಲದ ಸಮಸ್ಯೆ ಬಗ್ಗೆ ಸುಮ್ಸುಮ್ನೆ ಯಾಕೆ ತಲಿ ಕೆಡ್ಸಿಕೊಳ್ತೀರಾ? ನೀವೆಣ್ಸಿದ್ದಾಂಗ ಬಿಲ್‌ಕುಲ್ ನಡಿಯೋದಿಲ್ಲ. ಲಂಚವಿಲ್ಲದ ಕ್ಷೇತ್ರ ಯಾವ್ದಿದೆ? ಎಲ್ರೂ ದಿಢೀರನೇ ಟಾಟಾ, ಬಿರ್ಲಾ ಆಗೋ ಹುಚ್ಚು. ಹಿಡಿದ ಹಾದಿ ಸಗಣ್ಯ. ಛಾನ್ಸ್ ಸಿಕ್ಕಾಗ ಉಂಡವನ ಜಾಣ ಅಂತ ಲಂಚಕ್ಕೆ ಬಾಯಿ ಬಿಡ್ತಾರೆ ಜನ. ಸ್ಕ್ವಾಡ್‌ನವರು ಅದಕ್ಕೆ ಹೊರತಿಲ್ಲ. ಅವ್ರನ್ ನಾವೆಂದೂ ಸೀರಿಯಸ್ಸಾಗಿ ತಗೊಂಡಿಲ್ಲ. ಬಂದಾಗ ತಕ್ಕ ವ್ಯವಸ್ಥೆ ಹ್ಯಾಂಗ್ ಮಾಡೋದು ನಮ್ಗೆ ಚೆನ್ನಾಗಿ ಗೊತ್ತು. ಒಂದು ಭಾರದ ಕವರ್ ಕೊಟ್ರ ಮುಗುದ್ಹೋತು. ಚಕಾರ ಎತ್ತದ ಜಾಗ ಖಾಲಿ ಮಾಡ್ತಾರಿ.'' ಮೈಲಾರಿ ಮಾತು ಕೇಳಿ ದಾಸ್ ಹೌಹಾರಿದ. ಎಲ್ಲರ ಕೈಗೂ ಲಂಚದ ಕಲೆ! ಮೈತುಂಬ ದುಡ್ಡಿನ ದುರ್ಗಂಧ! ಬೇಲಿಯೇ ಎದ್ದು ಹೊಲ ಮೇಯ್ದರೆ ಮೂಗುದಾರ ಹಾಕೋರು ಯಾರು? ಊಪರವಾಲಾ ಬಂದ್ರೂ ಹದಗೆಟ್ಟು ಹಳ್ಳ ಕೂಡಿದ ಸಾರಿಗೆ ಸಂಸ್ಥೆಯನ್ನು ರಿಪೇರಿ ಮಾಡೋದು ಅಸಾಧ್ಯ!

ಅಕ್ಟೋಬರ್ ಮೊದಲ ವಾರದಲ್ಲಿ ದೇಶದ ಪ್ರಧಾನಿಯ ಮನೆಯಲ್ಲಿ ಒಂದು ಔತಣ ಕೂಟ. ಅತಿಥಿಗಳ ಪೈಕಿ ಸಂಜಯ ದತ್ ಸಹ ಇದ್ದುದು ವಿಶೇಷ. ಆತನನ್ನು ಪ್ರಧಾನಿ ಮತ್ತು ಗೃಹಸಚಿವ ಶಿವರಾಜ ಪಾಟೀಲ್ ಅಪ್ಪಿಕೊಂಡು ಮುದದಿಂದ ಸ್ವಾಗತ ನೀಡಿದರು. ''ಅತಿಥಿ ದೇವೋ ಭವ'' ಎಂಬ ಸಂಸ್ಕೃತಿಗೆ ಇದು ಅತ್ಯದ್ಭುತವಾದ ನಿದರ್ಶನವಿರಬಹುದು, ಆದರೆ ಈ ಅತಿಥಿ ಎಂಥವನು ಎಂಬ ಪ್ರಶ್ನೆ ಬಹಳ ಮುಖ್ಯ. ಈತ ಜೈಲಿನಲ್ಲಿದ್ದು ಕೆಲಕಾಲಕ್ಕಾಗಿ ಹೊರಗೆ ಬಂದಿದ್ದಾನೆ. ಅದೂ ತಾಂತ್ರಿಕ ಕಾರಣಕ್ಕಾಗಿ. ತೀರ್ಪಿನ ಪ್ರತಿಯನ್ನು ನ್ಯಾಯಾಲಯ ಅವನಿಗಿನ್ನೂ ಕೊಟ್ಟಿಲ್ಲವಾಗಿ ಆತ ಹೊರಗಿರಲು ಸಾಧ್ಯವಾಗಿದೆ. ಮುಂಬಯಿ ಸರಣಿ ಸ್ಫೋಟದಲ್ಲಿ ೨೫೭ ಜನ ಸತ್ತರು. ೧೨೩ ಮಂದಿ ಆರೋಪಿಗಳಿದ್ದರು. ಅವರಲ್ಲಿ ೧೨ ಮಂದಿಗೆ ಗಲ್ಲುಶಿಕ್ಷೆ ವಿಧಿಸಲಾಗಿದೆ. ಶಿಕ್ಷೆಗೊಳಗಾದವರಲ್ಲಿ ಸಂಜಯ ದತ್ ಸಹ ಒಬ್ಬ. ಅಂಥವನಿಗೆ ಪ್ರಧಾನಿಯ ಮನೆಯಲ್ಲಿ ಔತಣವೆಂದರೆ ಮುಂಬೈ ಸ್ಫೋಟದಲ್ಲಿ ಸತ್ತವರ ಕುಟುಂಬಗಳವರು ಹಾಲು-ಜೇನು ಸೇವಿಸಬೇಕು!! ಸಂಜಯನಿಗೆ ಅಬು ಸಲೀಂ ಒಬ್ಬ ಸ್ನೇಹಿತ. ಅನೀಸ್ ಇಬ್ರಾಹಿಂ ಜೊತೆ ಅವನು ಹಲವು ಬಾರಿ ಸಂವಾದ ನಡೆಸಿದ್ದಾನೆ. ಮನೆಯಲ್ಲಿ ಎಕೆ-೫೬ ಬಂದೂಕುಗಳು, ಗ್ರೆನೇಡ್‌ಗಳು, ಎಲ್ಲಾ ದೊರಕಿದ್ದವು. ನಾಳೆ ಮನಮೋಹನ ಸಿಂಗರು ಬೇರೆಲ್ಲ ಅಪರಾಧಿಗಳನ್ನೂ ಆಹ್ವಾನಿಸಿ ಔತಣಕೂಟ ಏರ್ಪಡಿಸಲಿ!

ಅಪರಾಧ, ಭ್ರಷ್ಟತನ, ಹಿಂಸೆ-ದೌರ್ಜನ್ಯ, ಅಧಿಕಾರದ ದುರುಪಯೋಗ, ಸಾರ್ವಜನಿಕ ಸಂಪತ್ತಿನ ಲೂಟಿ, ಅಮಾಯಕರ ಕೊಲೆ, ಹೀಗೆ ಯಾವುದರಲ್ಲಿ ಭಾಗಿಗಳಾದರೂ ಕೆಲವರಿಗೆ ಗೌರವ ಕುಂದುವುದಿಲ್ಲ, ಶಿಕ್ಷೆಯಾಗುವುದಿಲ್ಲ. ಇದು ಸದ್ಯದಲ್ಲಿ ನಮ್ಮ ದೇಶದ ಸಂಸ್ಕೃತಿ, ರಾಜಕೀಯ ದುರ್ನಡತೆ. ಸಿನಿಮಾದಲ್ಲಿ ಗಾಂಧಿಯಾದ ಸಂಜಯ ದತ್ ನಿಜ ಜೀವನದಲ್ಲೂ ಗಾಂಧಿಯೇ ಆಗಿದ್ದಾನೆಂದು ನಮ್ಮ ಪ್ರಧಾನಿ ಭ್ರಮಿಸಿದ್ದುದರ ಗುಟ್ಟೇನು?

ದೇಶದ ಜನ ವಿಚಾರ ಮಾಡಬೇಕಾದ ವಿಷಯ ಇದು.

ಸೌಜನ್ಯ : ತೆಹೆಲ್ಕಾ ಪತ್ರಿಕೆ, ಸಂಪುಟ ೪, ಸಂಚಿಕೆ ೪೦

''ಹಾಗಾದ್ರ ಕಂಡಕ್ಟರ್ರ ಸಸ್ಪೆಂಡ್ ಆದ ಬಗ್ಗೆ ಪೇಪರನಾಗ ಆಗಾಗ ಬರೋ ಸಮಾಚಾರ ಸುಳ್ಳು ಅಂತೀಯಾ ?''

''ಬರೀ ನಾಟ್ಕ. ಮಂದಿ ಕಣ್ಣಿಗೆ ಮಣ್ಣು ಎರಚೋ ಕೆಲ್ಸ. ಕಾಟಾಚಾರಕ್ಕೆ ಅಲ್ಲೊಂದು ಇಲ್ಲೊಂದು ತಮಗಾಗದವರ ಮ್ಯಾಲ ಕೇಸ್ ಬುಕ್ ಮಾಡಿ, ಬಾಸ್‌ನಿಂದ ಶಹಭಾಸ್‌ಗಿರಿ ಸರ್ಟಿಫಿಕೇಟ್ ಗಿಟ್ಟಿಸೋಕೆ ಮಾಡೊ ಗಿಮಿಕ್ಕು. ಅವ್ರು ಹಿಡಿಯೋದು ಸಣ್ಣ ಮೀನು. ತಿಮಿಂಗಿಲ ಪಾರಾಗ್ತಾವ್ರ. ಅವ್ರ ಕಡಿಂದ ಏನ್ ಮಾಡಾಕ್ ಆಗ್ತದ ? ಬಾಳ್ ಅಂದ್ರ ಆರು ತಿಂಗ್ಳು ಸಸ್ಪೆಂಡ್ ಮಾಡ್ತಾರ. ಸಸ್ಪೆಂಡ್ ಆದೋರು ರೆಸ್ಟ್ ತಗೊಂಡು 'ಪುನರಪಿ ಜನನಂ ಪುನರಪಿ ಮರಣಂ' ಅನ್ನೋಹಾಂಗ ಪುನಃ ಸೇವೆಗೆ ಸೇರಿಕೊಳ್ತಾರೆ. ಮತ್ತದೇ ಕಾಯಕನ್ ರಿಪೀಟ್ ಮಾಡ್ತಾರೆ.'' ಲಂಚಗುಳಿತನ ಇಷ್ಟು ಆಳಕ್ಕೆ ಇಳಿದದ್ದು ಕೇಳಿ ದಾಸ್ ವಿಸ್ಮಿತನಾದ.

''ಊಟ-ತಿಂಡಿಗೆ ಬಸ್ಸು ತರುಬೋದು. ನಿಮ್ಗೆ ಬೇಕಾದ ಹೊಟೆಲ್ ಮುಂದ ಅಂತ ಪ್ರಯಾಣಿಕರು ನಿಮ್ಯಾಗ್ ಕಿಡಿಕಾರ್ತಾರೆ. ಇದ್ಕೇನು ಹೇಳ್ತೀಯಾ ಮೈಲಾರಿ ?''

''ಹೌದು ಸಾರ್, ಅಲ್ಲೆಲ್ಲ ನಮ್ಗೆ ಊಟ-ತಿಂಡಿ ಪುಕ್ಸಟ್ಟೆ ಸಿಗ್ತಾವು. ಅದ್ಕೆ ಪ್ರಯಾಣಿಕರಿಗೆ ನಮ್ಯಾಲ ವಿಪರೀತ ಹೊಟ್ಟೆಕಿಚ್ಚು'' ಉತ್ತರ ನೇರವಾಗಿತ್ತು.

''ಕಂಡಕ್ಟರ್‍ಸ್ ವರ್ಗಕ್ಕೆ ಏನಾಗಿದೆ ? ಅವರಲ್ಲಿರಬೇಕಾದ ಕಾರ್ಯನಿಷ್ಠೆ, ಪ್ರಾಮಾಣಿಕತೆ, ಸೌಜನ್ಯತೆ, ಸಾಮಾಜಿಕ ಬದ್ಧತೆಗಳು ಮೂಸಿ ನೋಡಾಕೂ ಸಿಗೂದಿಲ್ಲ ಅಂತ ಪ್ರಯಾಣಿಕರ ಗೊಣಗಾಟ'' ದಾಸ್ ಕೊನೆ ಪ್ರಶ್ನೆ ಒಗೆದ.

''ಜನ ತಲಾಗೊಂದು ಮಾತಾಡ್ತಾರೆ. ಅವ್ರ ಕಾಮೆಂಟ್ಸ್ ಕೇಳಿ ಕೇಳಿ ನಂಸ ಕಿವಿ ತೂತಾಗಿ ಹೋಗ್ಯಾದ್ರಿ. ಇಷ್ಟಕ್ಕೂ ಪ್ರಯಾಣಿಕರು ಪ್ರಾಮಾಣಿಕರೇ ? ದುರ್ಬೀನಿಂದ ನೋಡಿದ್ರೂ ಪ್ರಾಮಾಣಿಕರು ಸಿಗೋದು ಕೈಬೆರಳಿನಷ್ಟುರಿ. ಅಂಥವರಿಗೂ ಚಿಕ್ಕಾಸು ಬೆಲೆ ಕೊಡದ ವ್ಯವಸ್ಥೆ. ಸರಕಾರಿ ನೌಕರರು ಏನೂ ಕಡೀದ ತಿಂಗ್ಳು ತಿಂಗಳು ಸಂಬ್ಳ ಎಣಿಸೋವಾಗ ಯಾರಿಗೆ ಬೇಕ್ರಿ ಕಾರ್ಯನಿಷ್ಠೆ...? ಯಾತಕ್ಕೆ ಬೇಕ್ರಿ ? ಬದುಕು ಬರೀ ಅಡ್ಜಸ್ಟ್‌ಮೆಂಟ್ ಮಾಸ್ತರ್ರೆ'' ಮೈಲಾರಿ ವ್ಯಾಖ್ಯಾನಿಸಿದ ಬದುಕಿನ ಹೊಸ ಸೂತ್ರ ಕೇಳಿ ದಾಸ್ ಮೂಕಸ್ಮಿತನಾದ.

ಆಗಲೇ ಮಧ್ಯರಾತ್ರಿ ಮೀರಿತ್ತು. ದಾಸ್‌ಗೆ ಬೇಕಾದ ಮಾಹಿತಿ ದೊರಕಿತ್ತು. ಮೈಲಾರಿಯ ಸಹಕಾರಕ್ಕೆ ವಂದನೆ ತಿಳಿಸಿ ಸಂದರ್ಶನಕ್ಕೆ ಮಂಗಳ ಹಾಡಿದ. ರಾಜಹಂಸ ಕತ್ತಲನ್ನು ಸೀಳಿಕೊಂಡು ಒಂದೇ ಸಮ ಓಡುತ್ತಿತ್ತು. ಮೈಲಾರಿ ಆಗಲೇ ಸಣ್ಣಗೆ ಗೊರಕೆ ತೆಗೆದಿದ್ದ. ಸಂದರ್ಶನದ ಮಾತುಗಳನ್ನು ಮೆಲಕು ಹಾಕುತ್ತ ದಾಸ್ ಗಾಢ ನಿದ್ರೆಗೆ ಜಾರಿದ. ಬೆಳಗ್ಗೆ ಕಂಡಕ್ಟರ ಆತನನ್ನು ತಟ್ಟಿ ಎಬ್ಬಿಸಿದಾಗಲೇ ಎಚ್ಚರ. ಬಸ್ಸು ಮೆಜೆಸ್ಟಿಕ್‌ನಲ್ಲಿ ವಿಶ್ರಮಿಸಿತ್ತು. ದಾಸ್ ದಡಬಡಿಸಿ ಬಸ್ಸು ಇಳಿದು, ಜನವಾಹಿನಿಯಲ್ಲಿ ಕಳೆದುಹೋದ.

* * *

ಓಡುತ್ತಿದ್ದ ನೆನಪಿನ ಸುರುಳಿ ತಟ್ಟನೇ ನಿಂತಿತು. ಆವೊತ್ತು ರಾಜಹಂಸದಲ್ಲಿಯ ಸಂದರ್ಶನ ಜರುಗಿ ಎರಡು ವಾರ ಕಳೆದಿರಬೇಕು. ಆಗ ಬಂತು ಬೆಂಗಳೂರಿನ ಓಲೆ. ಅದರ ಒಕ್ಕಣಿಕೆ ಹೀಗಿತ್ತು :

ನವೆಂಬರ್ ೨೫, ೨೦೦೭ ಶನಿವಾರ ರಾತ್ರಿ ನಂಮ ವಿಂಗಿನವರಾದ ವಿಶೇಷ ಅಧಿಕಾರಿ ಚಿತ್ತರಂಜನ ದಾಸ್ ನಿಂಮ ರಾಜಹಂಸದಲ್ಲಿ ಪಯಣಿಸಿ, ನಿಂಮ ಸಂದರ್ಶನವನ್ನು ರಹಸ್ಯವಾಗಿ ರಿಕಾರ್ಡ್ ಮಾಡಿದ್ದಾರೆ.

ನಿಂಮ ಮೇಲೆ ಲಂಚ, ವಂಚನೆ, ಅವ್ಯವಹಾರಗಳ ದೋಷಾರೋಪಣೆ ಪಟ್ಟಿ ಹೊರಿಸಲಾಗಿದೆ. ಇದಕ್ಕೆ ಸಾಕ್ಷ್ಯಾಧಾರ ಚಿತ್ತರಂಜನ ದಾಸ್ ತಯಾರಿಸಿದ ವಿಶೇಷ ವರದಿ ಹಾಗೂ ಸಂದರ್ಶನದ ಕ್ಯಾಸೆಟ್. ಈ ಪ್ರಕರಣದ ಸಮಗ್ರ ತನಿಖಾ ವರದಿ ಬರುವ ತನಕ ನಿಮ್ಮನ್ನು ತಕ್ಷಣವೇ ಕೆಲಸದಿಂದ ಸಸ್ಪೆಂಡ್ ಮಾಡಲಾಗಿದೆ.

ಪತ್ರದ ಕೊನೆಗೆ ಕ.ರಾ.ಸಾ. ಸಂಸ್ಥೆಯ ಭ್ರಷ್ಟಾಚಾರ ನಿರ್ಮೂಲನ ವಿಭಾಗದ ಮುಖ್ಯಸ್ಥರಾದ ನೀಲಕಲಂತನ್‌ರ ಹಸ್ತಾಕ್ಷರ.

ಮೈಲಾರಿಯ ಮನದಂಗಳ ಮತ್ತೆ ಆಲೋಚನೆಗಳ ಅಲೆದಾಟಕ್ಕೆ ಅನುವು ಮಾಡಿಕೊಟ್ಟಿತು. ಸ್ವಲ್ಪ ಎಚ್ಚರ ವಹಿಸಿದ್ದರೆ ನನಗೆ ಈ ಪರಿಸ್ಥಿತಿ ಎದುರಿಸುವ ಪ್ರಮೇಯವೇ ಬರುತ್ತಿರಲಿಲ್ಲ. ಹಿತೈಷಿಯಾಗಿ ಬಂದು ನನಗೆ ದ್ರೋಹ ಬಗೆದಾನೆಂದು ಎಣಿಸಿರಲಿಲ್ಲ. ಅಷ್ಟು ಸಲೀಸಾಗಿ ನನ್ನನ್ನು ಟ್ರಾಪ್ ಮಾಡಿದನೆಂದರೆ ನಾನೆಂಥ ಮೂರ್ಖ ! ಅಂತರಂಗದ ವಿಚಾರಗಳನ್ನೆಲ್ಲ ಅವನ ಮುಂದೆ ಖುಲ್ಲಂಖುಲ್ಲಾ ಹರವಿಟ್ಟೆನಲ್ಲ, ನಿಜಕ್ಕೂ ನನ್ನ ತಲೆಯಲ್ಲಿ ಸಗಣಿ ತುಂಬಿರಬೇಕು. ತನ್ನ ಕುಟಿಲ ಕಾರಸ್ಥಾನಕ್ಕೆ ನನ್ನನ್ನೇ ಬಲಿಪಶು ಮಾಡಿದನೆಂದರೆ ಮಸಲತ್ತಲ್ಲದೆ ಮತ್ತೇನು ? ಮೈಲಾರಿ ತಲೆತಿರುಗಿ ಕುರ್ಚಿಯಲ್ಲಿ ದೊಪ್ಪನೇ ಕುಸಿದು ಕುಳಿತ. ಕಾಲ ಮೀರಿತ್ತು. ನಡೆಯಬಾರದ್ದು ನಡೆದುಹೋಗಿತ್ತು. ಉಪ್ಪು ತಿಂದವ ನೀರು ಕುಡಿಯಲೇಬೇಕು.


**ಪ್ರೊ॥ ರುದ್ರಯ್ಯ ವಿ. ಗದಗ**

ನಂ.೨೫೦/೮೨, 'ಪಂಚವಟಿ', ವಿವೇಕಾನಂದನಗರ,

ನೀರಿನ ಟ್ಯಾಂಕ್ ಹತ್ತಿರ, ಗದಗ - ೫೮೨ ೧೦೧

# ಲಿಂಗಾಯತರು ಹಿಂದೂಗಳೆ? ಒಂದು ಚಿಂತನೆ

ಬೌದ್ಧ, ಜೈನ ಮತಗಳು ಕರ್ನಾಟಕದ ಮುಖ್ಯ ಧರ್ಮಗಳಾಗಿ ಅನೇಕ ಶತಮಾನಗಳ ಕಾಲ ಪ್ರಭಾವ ಬೀರಿದ ದಾಖಲೆಗಳಿವೆ. ಅಶೋಕನ ಅನೇಕ ಧರ್ಮ ಶಾಸನಗಳು ಕರ್ನಾಟಕದಲ್ಲಿ ಕಂಡುಬರುತ್ತವೆ. ಜೈನ ಧರ್ಮದ ಪ್ರಭಾವ ಗಂಗರ, ಬಾದಾಮಿ ಚಾಲುಕ್ಯರ ಕಾಲದಲ್ಲಿಯೇ ಕರ್ನಾಟಕದಲ್ಲಿ ಕಂಡುಬರುತ್ತದೆ. ಜೈನಧರ್ಮ ವೈದಿಕ ಧರ್ಮದೊಂದಿಗೆ ಸೆಣೆಸುತ್ತಲೇ ಸಮನ್ವಯಗೊಂಡು ಇಂದಿಗೂ ಕರ್ನಾಟಕದಲ್ಲಿ ಉಳಿದುಕೊಂಡು ಬಂದಿದೆ. ಇದಕ್ಕೆ ಜೈನಧರ್ಮಕ್ಕೆ ದೊರೆತ ರಾಜಾಶ್ರಯವೂ ಕಾರಣವೆನ್ನಬಹುದು. ಕದಂಬರು, ತಲಕಾಡಿನ ಗಂಗರು, ಕಾಂಚಿಯ ಪಲ್ಲವರು, ಬಾದಾಮಿಯ ಚಾಲುಕ್ಯರು, ಮಳಖೇಡದ ರಾಷ್ಟ್ರಕೂಟರು ಜೈನಧರ್ಮವನ್ನು ಪೋಷಿಸಿದ್ದಾರೆ. ಧಾರ್ಮಿಕ ಸಮನ್ವಯದ ಅಂಗವಾಗಿ ಜೈನ ಅರಸರೂ ಅನೇಕ ಶಿವದೇವಾಲಯಗಳನ್ನು ನಿರ್ಮಿಸಿ ದಾನದತ್ತಿಗಳನ್ನು ನೀಡಿದ್ದಾರೆ.

ವೈದಿಕ ಧರ್ಮದ ಪರಿವರ್ತನೆ ಸ್ವಲ್ಪಮಟ್ಟಿಗೆ ರಾಷ್ಟ್ರಕೂಟರ ಕಾಲದಲ್ಲಿ ನಡೆಯಿತು. ದೈವತ್ವದ ಕಲ್ಪನೆಯಲ್ಲಿ ತಾತ್ವಿಕ ಜಿಜ್ಞಾಸೆ ಕಂಡುಬರುತ್ತದೆ. ಇವರು ಶುದ್ಧ ವೈದಿಕ ಧರ್ಮದ ಅಂಗಗಳಾದ ಯಜ್ಞ, ಯಾಗಗಳಲ್ಲಿ ನಡೆಯುತ್ತಿದ್ದ ಪ್ರಾಣಿ ಹಿಂಸೆಯನ್ನು ಸಮರ್ಥಿಸಿದರು. ಶುದ್ಧ ಸಾತ್ವಿಕ ಭಕ್ತಿಯ ಬದಲಾಗಿ ಜನತೆಯನ್ನು ಅಜ್ಞಾನ, ಅಂಧಶ್ರದ್ಧೆಗಳ ಕಡೆಗೆ ಒಯ್ದು, ಸ್ವಾರ್ಥಸಾಧನೆಯಲ್ಲಿ ತೊಡಗಿದರು. ಅಂದಿನ ರಾಜರನ್ನು ಹೊಗಳುವ ಮೂಲಕ, ಪುರೋಹಿತಶಾಹಿಗಳು ಮನ್ನಣೆ ಪಡೆದರು. ಶೂರತನದಿಂದ ಶತ್ರುಗಳನ್ನು ಗೆಲ್ಲಲಾರದ ಅಂಜುಕುಳಿ ರಾಜರನ್ನು ನಂಬಿಸಿ, ದೇವರ ಕೈಗಳಿಗೆ ಶಸ್ತ್ರಾಸ್ತ್ರಗಳನ್ನು ನೀಡಿ, ಯಜ್ಞ, ಯಾಗ, ಬಲಿ ನೀಡಿ, ರಾಜಸೂಯಯಾಗ ಮಾಡಿಸಿ, ಶತ್ರುಗಳನ್ನು ದೇವರು ನಾಶ ಮಾಡುತ್ತಾನೆಂದು ಹೇಳಿ, ರಾಜರ ನಾಶಕ್ಕೆ ಕಾರಣರಾದರು. ಚಿಕ್ಕ ಚಿಕ್ಕ ರಾಜರು, ಪಾಳೇಗಾರರು ಪರಸ್ಪರ ಯುದ್ಧದಲ್ಲಿ ತೊಡಗಿ ನಾಶವಾಗ ತೊಡಗಿದರು. ೮ನೇ ಶತಮಾನದಲ್ಲಿ ಶಂಕರಾಚಾರ್ಯರು ಭಾರತಾದ್ಯಂತ ಪ್ರವಾಸ ಮಾಡಿ ಶೈವ ಧರ್ಮದ ಪುನರುಜ್ಜೀವನದ ಅಂಗವಾಗಿ ಮಠ ಪರಂಪರೆಯನ್ನು ಜಾರಿಗೆ ತಂದರು. ಶೈವಾರಾಧನೆಗೆ ಹೊಸ ಆಯಾಮ ನೀಡಿದರು. ಇದರ ಅಂಗವಾಗಿ ಅನೇಕ ಜೈನ ಬಸದಿಗಳು ಶೈವ ದೇವಾಲಯಗಳಾಗಿ ರೂಪಾಂತರಗೊಂಡವು. ಮಠಗಳ ಜೊತೆಗೆ ದೇವಾಲಯಗಳು, ಪೂಜಾರಿಗಳು, ಧಾರ್ಮಿಕ ವಿಧಿ ವಿಧಾನಗಳು ರೂಪುಗೊಂಡವು. ಭಕ್ತಿಗಿಂತ ಆಡಂಬರದ ಆಚರಣೆಗಳಿಗೆ ಸಂಪ್ರದಾಯಗಳಿಗೆ ಪ್ರಾಧಾನ್ಯತೆ ದೊರಕಿತು. ಭಗವಂತನ ಆರಾಧನೆಗೆ ನೃತ್ಯ ಸಂಗೀತ ಕಲೆಗಳು ಅರ್ಪಿತವಾದವು. ದೇವದಾಸಿಯರು ದೇವರ ಸೇವೆಗೆ ನಿಯುಕ್ತರಾದರು. ಎಲ್ಲವೂ ದೇವರ ಹೆಸರಿನಲ್ಲಿ ನಡೆಯುತ್ತಿದ್ದುದರಿಂದ ಆಳುವ ಅರಸರೂ ಇವುಗಳನ್ನೇ ಪೋಷಿಸಲು ದಾನದತ್ತಿ ನೀಡಿದರು. ದೇವಾಲಯಗಳಂತೆಯೇ, ಪುಣ್ಯಕ್ಷೇತ್ರಗಳೂ, ತೀರ್ಥಕ್ಷೇತ್ರಗಳೂ ದುಷ್ಟರ ಕಾರಸ್ಥಾನಗಳಾದವು. ಇಂತಹ ಪರ್ವಕಾಲದಲ್ಲಿ ಕರ್ನಾಟಕದಲ್ಲಿಯೇ ಶೋಷಣೆಯ ಕೇಂದ್ರವಾಗಿದ್ದ ವೈದಿಕ ಧರ್ಮದ ಮೇಲ್ವರ್ಗದಲ್ಲಿ ಹುಟ್ಟಿದ ಬಸವಣ್ಣ ವರ್ಣಭೇದದ ವಿರುದ್ಧ ಹೋರಾಡಿ ಹೊಸದೊಂದು ಧಾರ್ಮಿಕ ಪರಂಪರೆಗೆ, ಸರ್ವ ಸಮಾನತೆಯ ಸಮಾಜೋಧಾರ್ಮಿಕ ಕ್ರಾಂತಿಗೆ ಕಾರಣರಾದದ್ದು ಇತಿಹಾಸ.

ಆರನೇ ವಿಕ್ರಮಾದಿತ್ಯನ ಕಾಲದಲ್ಲಿ (೧೦೭೬-೧೧೨೬) ಶೈವ ಧರ್ಮಕ್ಕೆ ವಿಶೇಷ ಪ್ರೋತ್ಸಾಹ ದೊರಕಿತು. ಕರ್ನಾಟಕದ ದಕ್ಷಿಣ ಭಾಗದಲ್ಲಿ ಜೈನ ಧರ್ಮಕ್ಕೆ ಆಶ್ರಯದಾತರಾಗಿದ್ದ ಹೊಯ್ಸಳರು, ತಮಿಳುನಾಡಿನಿಂದ ಕರ್ನಾಟಕಕ್ಕೆ ಬಂದ ರಾಮಾನುಜಾಚಾರ್ಯರ ಪ್ರಭಾವಕ್ಕೆ ಒಳಗಾಗಿ ವೈಷ್ಣವ ಧರ್ಮಾವಲಂಬಿಗಳಾದರು. ಇದರಿಂದಾಗಿ ಜೈನಧರ್ಮ ಹಿನ್ನಡೆ ಅನುಭವಿಸಿತು. ಶೈವ ವೈಷ್ಣವ ಧರ್ಮಗಳಲ್ಲಿಯೇ ಪರಸ್ಪರ ಸ್ಪರ್ಧೆ ಆರಂಭವಾಯಿತು. ತಮಿಳುನಾಡಿನಲ್ಲಿ ಆಶ್ರಯ ದೊರಕದ ವೈಷ್ಣವರು, ಕರ್ನಾಟಕದ ದಕ್ಷಿಣದಲ್ಲಿ ಪ್ರಬಲರಾಗಿದ್ದ ಹೊಯ್ಸಳ ದೊರೆಗಳ ಆಶ್ರಯ ಪಡೆದು ಪ್ರಭಾವಿಗಳಾದರು. ಶೈವದ ಶಾಖೆಯಾಗಿ ಪಾಶುಪತ, ಲಕುಲೀಶ, ಕಾಳಾಮುಖ ಮತ್ತು ಶೈವ ಎಂಬ ನಾಲ್ಕು ವಿಭಾಗಗಳಿದ್ದ ಉಲ್ಲೇಖಗಳಿವೆ. ಭಕ್ತಿಮಾರ್ಗದಲ್ಲಿ ಕಾಪಾಲಿಕರು ಉಗ್ರ ಆರಾಧನೆಯಲ್ಲಿ ತೊಡಗಿದ್ದರು. ಕಾಳಾಮುಖ ಪಾಶುಪತಗಳು ಮಾನವೀಯತೆಗೆ ಒತ್ತುನೀಡಿದವು. ಶಿವಾಗಮಗಳಲ್ಲಿ ಪ್ರತಿಪಾದಿತವಾಗಿರುವಂತೆ ಕಾಶ್ಮೀರ ಶೈವ, ತಮಿಳು ಶೈವ, ಸಿದ್ಧಾಂತ ಮತ್ತು ವೀರಶೈವ ಎಂಬ ಶೈವ ಶಾಖೆಗಳು ರೂಪುಗೊಂಡವು. ಉಗ್ರರೂಪದ ರುದ್ರನ ಆರಾಧನೆ ಬದಲಾಗಿ, ಶಾಂತಿ, ಪ್ರೇಮ, ಕರುಣೆಗಳ ಶಿವನನ್ನು ಕುರಿತು ಭಕ್ತಿಗಳ ಮೂಲಕ ಶಿವೋಪಾಸನೆ ನಡೆಯಿತು. ಈ ಶಿವ ಕೀರ್ತನೆಗಳೇ ತೇವಾರಂ ಎಂದು ಪ್ರಸಿದ್ಧವಾಗಿವೆ. ತಮಿಳುನಾಡಿನ ಶೈವ ಸಿದ್ಧಾಂತದ ಅರವತ್ಮೂರು ಪುರಾತನರು ಪ್ರಸಿದ್ಧರಾಗಿ ಶೈವಧರ್ಮದ ಮತ್ತು ವೀರಶೈವಧರ್ಮದ ಆದ್ಯರೆನಿಸಿದರು. ವೀರಶೈವರಿಗೂ, ಕಾಳಾಮುಖರಿಗೂ ಭೇದವಿಲ್ಲ ಎನ್ನುವ ವಾದವೂ ಇದೆ. ಬಸವಣ್ಣನವರ ಕಾಲಕ್ಕಾಗಲೇ ಶೈವದ ಶಾಖೆಗಳೆಲ್ಲವೂ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದವು. ಉತ್ತರ ಭಾರತದಲ್ಲಿ ಮಹಮ್ಮದೀಯರ ದಂಡಯಾತ್ರೆಗಳಿಂದಾಗಿ ಕಾಶ್ಮೀರ ಶೈವರೂ ದಕ್ಷಿಣಕ್ಕೆ ವಲಸೆ ಬಂದರು. ಪಾಶುಪತ ಕಾಳಾಮುಖ ಧರ್ಮದ ಮಠಗಳು, ವಿದ್ಯಾಪೀಠಗಳು, ಪಂಡಿತರ ಗುರುಗಳ ಕಾರ್ಯಕ್ಷೇತ್ರಗಳಾದವು. ಈ ಮಠಗಳೇ ಮುಂದೆ ೧೨ನೇ ಶತಮಾನದಲ್ಲಿ ವೀರಶೈವ ಮಠಗಳಾದವು. ಅಂದು ಬಳ್ಳಿಗಾವಿಯ ಕೋಡಿ ಮಠದ ಕುಲಪತಿ ವಾಮಶಕ್ತಿ ಪಂಡಿತರು ಪ್ರಸಿದ್ಧರಾಗಿದ್ದ ಶಾಸನಗಳ ಉಲ್ಲೇಖವಿದೆ. ಕಾಳಾಮುಖ ಮಠಗಳಿಗೆ ರಾಜರ ಪೋಷಣೆಯೂ ಇದ್ದಿತು. ಧಾರವಾಡ ಸಮೀಪದ ಹೂಲಿಯ ಪಂಚವಣ್ಣಿಗೆ ಮಠವೂ ಮೊದಲು ಕಾಳಾಮುಖ ಮಠವಾಗಿದ್ದು ನಂತರದಲ್ಲಿ ವೀರಶೈವ ಮಠವಾಯಿತು. ಬಸವಣ್ಣನವರ ಧಾರ್ಮಿಕ ಕ್ರಾಂತಿಯೊಂದಿಗೆ ವೈದಿಕ ಶೈವ ಹೊರತುಪಡಿಸಿ, ಉಳಿದೆಲ್ಲ ಶೈವ ಪಂಥಗಳೂ ವೀರಶೈವದಲ್ಲಿ ಲೀನವಾದವು ಎಂದಿದ್ದಾರೆ ಡಾ|| ಆರ್. ಜಿ. ಭಂಡಾರ್‌ಕರ್ ಮತ್ತು ಡಾ|| ಎಸ್. ಸಿ. ನಂದಿಮಠ ಅವರು. ಬಸವಣ್ಣನವರ ಕಾಲಕ್ಕೆ ಕರ್ನಾಟಕ, ಅನೇಕ ಧರ್ಮಗಳ ರಂಗಭೂಮಿಯಾಗಿತ್ತು. ಆದರೂ ಜನಸಾಮಾನ್ಯರಿಗೆ ಧಾರ್ಮಿಕ ಸಮಾನತೆ ದೊರಕಿರಲಿಲ್ಲ. ಜನತೆ ಹೊಸಧರ್ಮದ ಉದಯಕ್ಕೆ ಕಾದಿತ್ತು. ಜೈನ ಧರ್ಮವೂ ನಿಧಾನವಾಗಿ, ವೈದಿಕ ದೇವರುಗಳ

**ವೀರಶೈವ ಲಿಂಗಾಯತ ಜಾತಿ ಉಪಜಾತಿಗಳ ನಿರ್ಮಾಣಕ್ಕೆ ಮೂಲಕಾರಣರಾಗಿ ಜಂಗಮರು ಕಂಡುಬರುತ್ತಾರೆ. ಜಾತಿಗಳನ್ನೇ ನಿರ್ಮೂಲ ಮಾಡಿ ಸರ್ವಸಮಾನತೆಯನ್ನು ಸಾರಿದ ಬಸವಣ್ಣನನ್ನು ಇಂದಿಗೂ ಬ್ರಾಹ್ಮಣ ಕುಲದಲ್ಲಿ ಹುಟ್ಟಿದವನೆಂದೇ ಬಿಂಬಿಸಲಾಗುತ್ತಿದೆ. ಶೈವಧರ್ಮದ ಸಂಕೇತಗಳಾದ ಗುರು, ಲಿಂಗ, ಜಂಗಮ ಸ್ಥಾನವನ್ನು ಬಳಸಿಕೊಂಡು ಜಂಗಮ ಹೆಸರಿನಲ್ಲಿ ಗುರು ವಿರಕ್ತರು ಮಠಗಳೆಂಬ ಮಹಾಸಂಸ್ಥೆಯಾಗಿ ಬೆಳೆದುಬಂದಿದ್ದಾರೆ. ೧೫ನೇ ಶತಮಾನದಲ್ಲಿ ಈ ಜಂಗಮ ಶ್ರೇಷ್ಠರು ಗುರು ವಿರಕ್ತರೆಂಬ ಗುಂಪುಗಳನ್ನು, ಅನುಯಾಯಿಗಳನ್ನು ಕಟ್ಟಿಕೊಂಡು ಲಿಂಗಾಯತ ಸಮಾಜವನ್ನು ವಿಭಜಿಸಿ, ಗುರುವಿರಕ್ತರ ಪ್ರತ್ಯೇಕ ವಂಶ ಪರಂಪರೆಯನ್ನು ಸಂಘಟಿಸಿ ಲಿಂಗಾಯತ ಉಪಜಾತಿಗಳ ರಚನೆಗೆ ಕಾರಣರಾಗಿದ್ದಾರೆ. ಈಗ ಜಂಗಮರೆಂದರೆ ಜಂಗಮ ಕುಟುಂಬದಲ್ಲಿ ಹುಟ್ಟಿದವರು ಎಂದಾಗಿದೆ. ಇದು ಹುಟ್ಟಿನಿಂದ ಶರಣರ ಕಾಯಕಗಳನ್ನೇ ಜಾತಿಗಳನ್ನಾಗಿಸಿ ಬ್ರಾಹ್ಮಣನಾದಂತೆಯೇ, ಎಂಬುದು ವಾಸ್ತವ ಸಂಗತಿ.**

ಜಯದೇವಪ್ಪ ಜೈನಕೇರಿ



ಪೂಜೆ, ಆಡಂಬರಗಳನ್ನು ಆನುಸರಿಸತೊಡಗಿ ತನ್ನ ಮೂಲ ಆಶಯಗಳಿಂದ ವಿಮುಖವಾಗುತ್ತಿದ್ದ ಪರ್ವ ಕಾಲದಲ್ಲಿ ಬಸವಣ್ಣನವರ ಪ್ರವೇಶ. ಕರ್ನಾಟಕದ ಧಾರ್ಮಿಕ ಸಾಮಾಜಿಕ ರಂಗದಲ್ಲಿ ಕ್ರಾಂತಿಯನ್ನು ಎಬ್ಬಿಸಿತು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಜೀವ ವಿರೋಧಿ ಆಚರಣೆಗಳನ್ನು, ಜ್ಯೋತಿಷ, ತಿಥಿ, ವಾರ, ನಕ್ಷತ್ರ ಮುಂತಾದ ಕುರುಡು ನಂಬಿಕೆಗಳನ್ನು ಬಸವಣ್ಣನವರು ಅಲ್ಲಗಳೆದರು. ಕ್ಷುದ್ರ ದೇವತೆಗಳ ಉಪಾಸನೆ, ಪ್ರಾಣಿಬಲಿ ಮುಂತಾದ ಆಚರಣೆಗಳು ಸಲ್ಲದು. ಬಹುದೇವತಾರಾಧನೆಗೆ ಬದಲಾಗಿ ಏಕದೇವೋಪಾಸನೆಯ ಮಹತ್ವ ಮತ್ತು ಅಗತ್ಯತೆಯನ್ನು ಸರಳವಾದ ಕನ್ನಡ ಭಾಷೆಯನ್ನು ಬಳಸಿ ವಚನಗಳ ಮೂಲಕ ಜನಸಾಮಾನ್ಯರನ್ನು ಎಚ್ಚರಿಸಿ ಸಮಾಜೋಧಾರ್ಮಿಕ ಕ್ರಾಂತಿಗೆ ಕಾರಣರಾದರು. ಅಂದಿನ ಸಾಮಾಜಿಕ ಪದ್ಧತಿಯಂತೆ ಕೆಳವರ್ಗದವರಿಗೆ ಪ್ರವೇಶ ನಿಷಿದ್ಧವಾಗಿದ್ದ ದೇವಾಲಯಗಳಲ್ಲಿ ಪ್ರವೇಶ ಕಲ್ಪಿಸುವುದು ಅಸಾಧ್ಯವೆಂಬ ತಿಳುವಳಿಕೆ ಹೊಂದಿದ್ದ ಬಸವಣ್ಣನವರು, ದೇವಾಲಯಗಳನ್ನೇ ನಿರಾಕರಿಸುವ ಕ್ರಾಂತಿಕಾರಿ ಹೆಜ್ಜೆ ತುಳಿದರು. ದೇಹವನ್ನೇ ದೇವಾಲಯವನ್ನಾಗಿಸಿ, ಇಷ್ಟಲಿಂಗಧಾರಿಗಳನ್ನಾಗಿಸಿ ಹೊಸ ಧಾರ್ಮಿಕ ಪರಿಕಲ್ಪನೆಗಳನ್ನು ನೀಡಿದರು. ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ, ಕಲ್ಲು ದೇವರು ದೇವರಲ್ಲ ಎಂದು ಹೇಳುವ ಮೂಲಕ ಎಲ್ಲರಿಗೂ ಮುಕ್ತ ಪ್ರವೇಶವಿಲ್ಲದ ದೇವಾಲಯಗಳನ್ನೇ ನಿರಾಕರಿಸಿದರು. ವೈದಿಕ ಧರ್ಮದಲ್ಲಿದ್ದ ಅನೇಕ ಜೀವವಿರೋಧಿ ಆಚರಣೆಗಳನ್ನು ಪರಿಷ್ಕರಿಸಿದರು. ಭಕ್ತಿ ಪ್ರಧಾನವಾದ ಲಿಂಗಾಯತ ಧರ್ಮವನ್ನು ಆಚರಣೆಗೆ ತಂದರು. ಲಿಂಗಧಾರಿಗಳೆಲ್ಲರೂ ಸಮಾನರು, ವೈದಿಕ ಧರ್ಮಗುರುಗಳ ಅಂತ್ಯಸಂಸ್ಕಾರದಂತೆ ಪ್ರತಿಯೊಬ್ಬ ಶರಣನ ಅಂತ್ಯ ಸಂಸ್ಕಾರವೂ ನಡೆಯಬೇಕೆಂದು, ಶವ ಹೂಳುವ ಪದ್ಧತಿ ಜಾರಿಗೆ ತಂದರು. ಲಿಂಗಾಯತರು ಇಷ್ಟಲಿಂಗವನ್ನು ದೇಹದ ಮೇಲೆ ಧರಿಸುವ ಕಟ್ಟಳೆ ವಿಧಿಸಿದರು. ಶೈವ, ವೈದಿಕ ಧರ್ಮದಲ್ಲಿದ್ದ ಹಲವು ಜೀವಪರ ಆಚರಣೆಗಳನ್ನು ಉಳಿಸಿಕೊಂಡು ಇತರ ಧರ್ಮಗಳಲ್ಲಿದ್ದ ಉತ್ತಮ ಆಚರಣೆಗಳನ್ನು ಅಳವಡಿಸಿಕೊಂಡು ಒಂದು ಹೊಸ ಧಾರ್ಮಿಕ ಕ್ರಾಂತಿಯನ್ನು ಜಾರಿಗೆ ತಂದರು. ನಾಗರಕಲ್ಲಿಗೆ ಹಾಲೆರೆವುದಕ್ಕಿಂತ, ಪ್ರಕೃತಿ ಸಮತೋಲನ ರಕ್ಷಿಸಿ, ಜೀವ ವೈವಿಧ್ಯಗಳ ಸರಣಿಯನ್ನು ಕಾಪಾಡುವ ಜೀವಂತ ಹಾವುಗಳನ್ನು ಕೊಲ್ಲುವುದು ಸಲ್ಲದೆಂದರು. ಮರಗಳನ್ನು ಪೂಜಿಸುವುದಕ್ಕಿಂತ ಅವುಗಳನ್ನು ಕಡಿದು ನಾಶಪಡಿಸಬೇಡಿರಿ. ಮರದೈವ, ಕಲ್ಲುದೈವ, ನದಿದೈವ ಎಂಬ ಉದಾತ್ತ ಕಲ್ಪನೆಯೇ ಬೇರೆ; ಅವುಗಳನ್ನು ಕಡಿಯುವುದು, ನಾಶಪಡಿಸುವುದು, ಕಲುಷಿತಗೊಳಿಸುವುದೇ ಬೇರೆ.

ವ್ಯವಸಾಯವೇ ಮುಖ್ಯ ಕಸುಬಾಗಿದ್ದ ಬಹುಸಂಖ್ಯಾತರೊಂದಿಗೆ ಬಡಗಿ, ಕಮ್ಮಾರ, ಚಮ್ಮಾರ, ಕುಂಬಾರ, ನೇಕಾರ, ಬಣಗಾರ ಮುಂತಾದ ಅಲಕ್ಷಿತ ಕಸುಬುದಾರರು ವ್ಯಾಪಾರಿಗಳು ಸ್ವಯಂ ಪೂರ್ಣರಾಗಿ ಆತ್ಮವಿಶ್ವಾಸದಿಂದ ಜೀವಿಸುವ ವಾತಾವರಣ ಸೃಷ್ಟಿಯಾಯಿತು. ಕಾಲ ಕಾಲಕ್ಕೆ ಭಾರತದ ಹೊರಗಿನಿಂದ ಬಂದ ಧರ್ಮಗಳಾದ ಕ್ರಿಶ್ಚಿಯನ್ ಮತ್ತು ಇಸ್ಲಾಂ ಧರ್ಮಗಳ ಪ್ರಭಾವವೂ ಭಾರತದ ಪ್ರಾಚೀನ ಧರ್ಮಗಳ ಮೇಲಾಯಿತು. ಹಾಗೆಯೇ ಭಾರತೀಯ ಧರ್ಮಗಳ ಪ್ರಭಾವವೂ ಕ್ರಿಶ್ಚಿಯನ್ ಮತ್ತು ಇಸ್ಲಾಂ ಧರ್ಮಗಳ ಮೇಲೆ ಆಗಿರುವುದನ್ನು ಕಾಣಬಹುದು. ಪರಸ್ಪರ ಸಾಮರಸ್ಯದ ಬದುಕಿಗೆ ಧರ್ಮಗಳ ನಡುವೆ ಕೊಡುಕೊಳ್ಳುವಿಕೆಗಳು ನಡೆಯುವುದು ಆರೋಗ್ಯಕರವೆಂಬ ತಿಳುವಳಿಕೆ ಮುಖ್ಯ. ತನ್ನ ಧರ್ಮದಲ್ಲಿ ಜೀವಿಸುವುದು, ಇತರ ಧರ್ಮಗಳನ್ನು ಗೌರವಿಸುವುದು ಸಾಮರಸ್ಯದ ಮಾರ್ಗ ಎನ್ನುತ್ತಾರೆ ಅನುಭಾವಿಗಳು. ಶೈವಧರ್ಮ, ವೀರಶೈವ/ಲಿಂಗಾಯತ ಧರ್ಮಗಳಾಗಿ ರೂಪಾಂತರಗೊಳ್ಳುವ ಹಂತದಲ್ಲಿ ಅಂದರೆ ೧೨ನೇ ಶತಮಾನದಲ್ಲಿ ಭಾರತೀಯ ಸಂಪ್ರದಾಯದಂತೆ ಕಾಳಾಮುಖ ಮತಗಳ ಆಚಾರ್ಯ ಪರಂಪರೆಯ ವಿಗ್ರಹಪೂಜೆ, ಸ್ಥಾವರಲಿಂಗ ಪ್ರತಿಷ್ಠೆ, ದೇವಾಲಯ ನಿರ್ಮಾಣ, ರುದ್ರನನ್ನು ವೀರಭದ್ರನನ್ನಾಗಿ ಪೂಜಿಸುವ ಸಂಪ್ರದಾಯ, ಗೋತ್ರ ಸೂತ್ರಗಳನ್ನು ಅವಲಂಬಿಸಿದ ಕೆಲವು ಸಂಪ್ರದಾಯಗಳನ್ನು ಉಳಿಸಿಕೊಂಡ ವೀರಶೈವ ಆಚಾರ್ಯ ಪರಂಪರೆ ಮುಂದುವರಿದೇ ಬಂದಿತು. ಈ ಪರಂಪರೆ ಮುಂದುವರಿದು ಅದೊಂದು ವರ್ಗವಾಗಿ ರೂಪುಗೊಂಡಿತು, ಇವರನ್ನು ಜಂಗಮರೆಂದು ಹೆಸರಿಸಲಾಯಿತು. ಬಸವಣ್ಣನವರ ಜಂಗಮದ ಅರ್ಥವೇ ಬೇರೆ, ಜಂಗಮರ ಜಾತಿ ಸ್ವರೂಪವೇ ಬೇರೆ. ಈ ಜಂಗಮ ಶಬ್ದವೇ ಸಂದರ್ಭಕ್ಕೆ ತಕ್ಕಂತೆ ವೀರಶೈವ/ಲಿಂಗಾಯತದ ಏಕತೆಗೂ, ವಿಭಜನೆಗೂ ಕಾರಣವಾಗುತ್ತಿದೆ. ಕಾಳಾಮುಖರು ಲಿಂಗ ಪ್ರತಿಷ್ಠಾಪಕರು, ವಿಗ್ರಹಪೂಜಕರು, ಸ್ತುತಿಪ್ರಿಯರು, ಪರಂಪರೆಯಂತೆ ರಾಜರ ಮನ್ನಣೆ ಬಯಸಿದವರು. ಗುಣಕ್ಕಿಂತ ಹುಟ್ಟಿಗೆ ಪ್ರಾಶಸ್ತ್ಯ ನೀಡಿದವರು, ಸರಳತನಕ್ಕಿಂತ ವೈಭವಪೂಜೆ, ಆಭರಣ, ಅಡ್ಡಪಲ್ಲಕ್ಕಿ, ಬೆಳ್ಳಿ ಸಿಂಹಾಸನ, ವೈಭೋಗದ ಜೀವನ ಬಯಸಿದವರು. ಅವುಗಳ ಆಚರಣೆಗಳೇ ಧರ್ಮವೆಂದು ತಿಳಿದವರು. ಸ್ಥಾನ ಗೌರವದ ಹಂಬಲವನ್ನು ವೈದಿಕ ಆಚಾರ್ಯರಂತೆ ಇಂದಿಗೂ ಆಚರಣೆಯಲ್ಲಿ ಇಟ್ಟಿರುವವರು. ಸಾರ್ವಜನಿಕ ಸಮಾರಂಭಗಳಲ್ಲಿ ರಾಷ್ಟ್ರಪತಿಗಳಿಗಿಂತಲೂ ಎತ್ತರದ ಆಸನ ಬಯಸುವ ಇವರು, ಜನಸಾಮಾನ್ಯರನ್ನು ಹತ್ತಿರವೂ ಸೇರಿಸದೆ ಬಹುದೂರ ಉಳಿದಿದ್ದಾರೆ. ಅಧಿಕಾರಿಗಳಿಗೆ, ರಾಜಕಾರಣಿಗಳಿಗೆ, ಶ್ರೀಮಂತರಿಗೆ ಮಾತ್ರ ಇವರ ದರ್ಶನ – ಆಶೀರ್ವಾದ. ಈ ಎಲ್ಲ ಕಾರಣಗಳಿಂದ ೧೨-೧೩ನೇ ಶತಮಾನದಲ್ಲಿ ಪಂಚಾಚಾರ್ಯರು ಇದ್ದುದು ನಿಜವಾದರೆ, ಅವರು ನಿಶ್ಚಯವಾಗಿಯೂ ಕಾಳಾಮುಖ ಆಚಾರ್ಯರೆಂದೇ ಖಚಿತವಾಗಿ ಭಾವಿಸುತ್ತೇನೆ ಎಂದಿದ್ದಾರೆ ಖ್ಯಾತ ವಿದ್ವಾಂಸರಾದ ಹಿರೇಮಲ್ಲೂರು ಈಶ್ವರನ್ ಅವರು. ಕಾಳಾಮುಖ ಆಚಾರ್ಯರ ಯಾವ ಕೃತಿಗಳೂ ಇದುವರೆಗೆ ದೊರೆಯದೇ ಇರುವುದು ಈ ವಾದಕ್ಕೆ ಮತ್ತಷ್ಟು ಬೆಂಬಲ ನೀಡುತ್ತದೆ.

ಬಸವಣ್ಣನವರ ಪೂರ್ವದ ಆದ್ಯರಾದ ಜೇಡರ ದಾಸಿಮಯ್ಯ, ಕೆಂಭಾವಿ ಭೋಗಣ್ಣ, ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ ಮುಂತಾದವರ ಲಿಂಗಭಕ್ತಿಗೂ, ಕಾಳಾಮುಖರ ಮುಂದುವರಿದ ಆಚಾರ್ಯರ ಲಿಂಗ

ಭಕ್ತಿಗೂ, ಕಾಳಾಮುಖರ ಮುಂದುವರಿದ ಆಚಾರ್ಯರ ಲಿಂಗಭಕ್ತಿಗೂ ಅಗಾಧ ಅಂತರವಿದೆ. ಆದ್ಯರು ಇಷ್ಟಲಿಂಗ ಪೂಜಕರು, ಕಾಳಾಮುಖರು ಸ್ಥಾವರಲಿಂಗ ಪೂಜಕರು. ಲಿಂಗಾಯತ ಧರ್ಮ ಆರಂಭದಲ್ಲಿ ವೈಯಕ್ತಿಕ ಹಂತದಲ್ಲಿ ಮಾತ್ರವಿದ್ದಿತು. ಅದಕ್ಕೆ ಸಾಂಘಿಕ ರೂಪ ನೀಡಿದವರು ಬಸವಣ್ಣನವರು. ಬಸವಣ್ಣನವರ ಜೀವನ ಚರಿತ್ರೆ ಬರೆದಿರುವ ಹರಿಹರಕವಿ, ರೇವಣಸಿದ್ಧರ ಚರಿತ್ರೆಯನ್ನೂ ಬರೆದಿದ್ದಾನೆ. ಎರಡೂ ಕಥಾನಕಗಳಿಂದಲೇ ಅವುಗಳಲ್ಲಿರುವ ವೈರುಧ್ಯಗಳನ್ನು ಗುರುತಿಸಬಹುದು. ಬಸವಣ್ಣನ ಚರಿತ್ರೆಯನ್ನು ಲಿಂಗಾಯತ ಮಾನವೀಯತೆಯಿಂದ, ಸರ್ವಸಮಾನತೆಯ, ಜೀವಪರ ಕಾಳಜಿಗಳಿಂದ, ಭಕ್ತಿಮಾರ್ಗದಲ್ಲಿ ಚಿತ್ರಿಸಿರುವ ಕವಿ, ರೇವಣಸಿದ್ಧ ಚರಿತೆಯಲ್ಲಿ ಶಿವಭಕ್ತಿ ಪ್ರತಿಪಾದನೆಗೆ ಶಿವಭಕ್ತರು, ಮಗನ ಶಿರವನ್ನು ಅರ್ಪಿಸುವ, ಶಿವಭಕ್ತ ತನ್ನ ಕಣ್ಣುಗಳನ್ನೇ ಅರ್ಪಿಸುವ, ಲಿಂಗಕ್ಕೆ ಮಾಂಸ, ಮದ್ಯದ ನೈವೇದ್ಯವನ್ನೂ ಅರ್ಪಿಸುವ ಶಿವಭಕ್ತಿಯ ಪರಾಕಾಷ್ಠೆಯ ವಾಮಮಾರ್ಗವನ್ನು ಚಿತ್ರಿಸಿದ್ದಾನೆ. ಬಸವಣ್ಣನವರ ಲಿಂಗಾಯತ, ಗುರು, ಲಿಂಗ, ಜಂಗಮಗಳ ಅರ್ಥವೇ ಬೇರೆ; ಆಚಾರ್ಯ ಪರಂಪರೆಯಲ್ಲಿ ಇವುಗಳ ಅರ್ಥವೇ ಬೇರೆ, ಎನ್ನುವುದನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕು.

ವೀರಶೈವ ಲಿಂಗಾಯತ ಜಾತಿ ಉಪಜಾತಿಗಳ ನಿರ್ಮಾಣಕ್ಕೆ ಮೂಲಕಾರಣರಾಗಿ ಜಂಗಮರು ಕಂಡು ಬರುತ್ತಾರೆ. ಜಾತಿಗಳನ್ನೇ ನಿರ್ಮೂಲಮಾಡಿ ಸರ್ವ ಸಮಾನತೆಯನ್ನು ಸಾರಿದ ಬಸವಣ್ಣನನ್ನು ಇಂದಿಗೂ ಬ್ರಾಹ್ಮಣಕುಲದಲ್ಲಿ ಹುಟ್ಟಿದವನೆಂದೇ ಬಿಂಬಿಸಲಾಗುತ್ತಿದೆ. ಶೈವಧರ್ಮದ ಸಂಕೇತಗಳಾದ ಗುರು, ಲಿಂಗ, ಜಂಗಮ ಸ್ಥಾನವನ್ನು ಬಳಸಿಕೊಂಡು ಜಂಗಮ ಹೆಸರಿನಲ್ಲಿ ಗುರು ವಿರಕ್ತರು ಮಠಗಳೆಂಬ ಮಹಾಸಂಸ್ಥೆಯಾಗಿ ಬೆಳೆದು ಬಂದಿದ್ದಾರೆ. ೧೫ನೇ ಶತಮಾನದಲ್ಲಿ ಈ ಜಂಗಮ ಶ್ರೇಷ್ಠರು ಗುರು ವಿರಕ್ತರೆಂಬ ಗುಂಪುಗಳನ್ನು, ಅನುಯಾಯಿಗಳನ್ನು ಕಟ್ಟಿಕೊಂಡು ಲಿಂಗಾಯತ ಸಮಾಜವನ್ನು ವಿಭಜಿಸಿ, ಗುರುವಿರಕ್ತರ ಪ್ರತ್ಯೇಕ ವಂಶಪರಂಪರೆಯನ್ನು ಸಂಘಟಿಸಿ ಲಿಂಗಾಯತ ಉಪಜಾತಿಗಳ ರಚನೆಗೆ ಕಾರಣರಾಗಿದ್ದಾರೆ. ಈಗ ಜಂಗಮರೆಂದರೆ ಜಂಗಮ ಕುಟುಂಬದಲ್ಲಿ ಹುಟ್ಟಿದವರು ಎಂದಾಗಿದೆ. ಇದು ಹುಟ್ಟಿನಿಂದ ಶರಣರ ಕಾಯಕಗಳನ್ನೇ ಜಾತಿಗಳನ್ನಾಗಿಸಿ ಬ್ರಾಹ್ಮಣನಾದಂತೆಯೇ, ಎಂಬುದು ವಾಸ್ತವ ಸಂಗತಿ.

ಬಸವಣ್ಣನವರ ಕಾಲದಲ್ಲಿ ಧಾರ್ಮಿಕ ಶಿಸ್ತು, ಶರಣ ತತ್ವ ಪಾಲನೆ ಮಾಡುವವರು ಯಾವುದೇ ಜಾತಿ, ವರ್ಗ, ವರ್ಣದವರಾದರೂ ಶರಣರೂ ಜಂಗಮರೂ ಆಗಬಹುದಿತ್ತು. ಜಂಗಮರಿಗೂ ನಿರ್ದಿಷ್ಟವಾದ ಕಾಯಕ ನಿಗದಿಯಾಗಿತ್ತು. ಬಸವಣ್ಣನವರ ಕಾಲದ ಜಂಗಮರು ಹುಟ್ಟಿನಿಂದಾದವರಲ್ಲ. ಜಂಗಮ ಲಕ್ಷಣಗಳನ್ನು ಅಂತರ್ಗತ ಮಾಡಿಕೊಂಡಿದ್ದವರು. ಬಸವಣ್ಣನ ತತ್ವಗಳಿಗೆ ವಿರುದ್ಧವಾಗಿ ಪ್ರಸ್ತುತ ಜಂಗಮರು ಕಾಯಕ ತೊರೆದು ಭಿಕ್ಷೆ ಬೇಡುತ್ತಾರೆ, ಕಾಣಿಕೆ ವಸೂಲಿ ಮಾಡುತ್ತಾರೆ. ಜನರಲ್ಲಿ ಮೂಢನಂಬಿಕೆಗಳನ್ನು, ಮೇಲುಕೀಳು, ಅಸ್ಪೃಶ್ಯತೆಯನ್ನು ಬಿತ್ತುತ್ತಾರೆ. ಶ್ರೇಣೀಕೃತ ಸಮಾಜ ವ್ಯವಸ್ಥೆಗೆ ವಿರುದ್ಧವಾಗಿ ಹುಟ್ಟಿದ ವೀರಶೈವ ಲಿಂಗಾಯತ ಸಮಾಜದಲ್ಲಿ ಪುನಃ ವರ್ಗಭೇದ ಹುಟ್ಟಿಸಿದವರೆ ಈ ಹುಟ್ಟಿನಿಂದಾದ ಜಂಗಮರು. ಹಿರೇಮಠ, ಚಿಕ್ಕಮಠ, ಗುರುಪೀಠ, ವಿರಕ್ತ ಪೀಠ, ಜಗದ್ಗುರು ಪೀಠ ಮುಂತಾಗಿ ಶ್ರೇಣೀಕೃತ ಮಠಗಳೂ ೧೬ನೇ ಶತಮಾನದಲ್ಲಿ ಪ್ರಾರಂಭವಾದವು. ರಾಜಪೋಷಿತ ಬಲಿಷ್ಠ, ಶ್ರೀಮಂತ ಮಠಗಳ ಆಧಿಪತ್ಯದಲ್ಲಿ ಸಾವಿರಾರು ಮಠಗಳು ಕೇರಿಗೊಂದು ಊರಿಗೊಂದರಂತೆ ಹುಟ್ಟಿದವು. ಗುರು ವಿರಕ್ತ ಜಂಗಮರಲ್ಲಿಯೂ ಮೇಲು-ಕೀಳು ಅಂತಸ್ತುಗಳಿವೆ. ಬ್ರಾಹ್ಮಣರಂತೆ ಗೋತ್ರಗಳೂ, ಲಿಂಗೋದ್ಭವರೂ ಇದ್ದಾರೆ. ಸ್ಥಾವರ ದೇವಾಲಯಗಳನ್ನು ನಿರಾಕರಿಸಿದ ಬಸವಣ್ಣನವರನ್ನು ನಂದಿಯ ಅವತಾರವೆಂದು ಬಿಂಬಿಸಿ, ಶಿವಲಿಂಗದ ಮುಂದೆ ನಂದಿಯ ಪ್ರತಿಮೆ ಸ್ಥಾಪಿಸಿ, ಬಸವಣ್ಣನವರ ತತ್ವಗಳನ್ನು ಕತ್ತಲೆ ಕೋಣೆಗೆ ತಳ್ಳಿದರು. ತಮ್ಮ ವಿರುದ್ಧ ಪ್ರಶ್ನಿಸಿದ ಭಕ್ತರನ್ನು ಶಿಕ್ಷಿಸುವ, ದಂಡ ಹಾಕುವ, ದಂಡದ ಹಣ ವಸೂಲಿ ಮಾಡಿ ಜಗದ್ಗುರುಗಳಿಗೆ ಒಪ್ಪಿಸುವ ಕಾಯಕ ಜಂಗಮರದ್ದಾಯಿತು. ಬ್ರಾಹ್ಮಣರಂತೆಯೇ ಮುಖ್ಯ ಮಠದ ಗುರುಗಳು, ರಾಜನನ್ನು ಹೊಗಳುತ್ತಾ, ಆಶೀರ್ವದಿಸುತ್ತಾ ಬೆಂಬಲಿಸುವ ಮೂಲಕ ಗಣ್ಯಸ್ಥಾನ ಪಡೆದರು. ತಮಗೆ ವಿರುದ್ಧರಾದವರನ್ನು ಬಹಿಷ್ಕರಿಸುವ ಅಧಿಕಾರವೂ ಈ ಗುರುವಿರಕ್ತ ಮಠಾಧೀಶರದಾಗಿತ್ತು.

ಪ್ರಸ್ತುತ ಕಾಲಘಟ್ಟದಲ್ಲಿ 'ಹಿಂದೂ ಎಲ್ಲರೂ ಒಂದು' ಎಂಬ ಘೋಷಣೆ ಆಗಾಗ ಮತ್ತು ಮೇಲ್ವರ್ಗದವರಿಗೆ ಬೇಕಾದಾಗ ಮಾತ್ರ ಕೇಳಿಬರುತ್ತಿದೆ. ನೂರಾರು ಜಾತಿಗಳು, ಉಪಜಾತಿಗಳು, ಸಾವಿರಾರು ದೇವರುಗಳನ್ನು ಸೃಷ್ಟಿಸಿ, ಜನಸಾಮಾನ್ಯರನ್ನು ವರ್ಣ, ವರ್ಗಗಳಾಗಿ ವಿಭಜಿಸಿ, ಅಸ್ಪೃಶ್ಯತೆಯನ್ನು ಪೋಷಿಸುತ್ತಾ ಬಂದಿರುವ ಮೇಲ್ವರ್ಗದವರ ಹುನ್ನಾರ ಈ ಘೋಷಣೆ. ಮೇಲ್ವರ್ಗದವರಲ್ಲಿಯೇ ಶೈವ, ವೈಷ್ಣವ, ಸ್ಮಾರ್ತ, ಮಾಧ್ವ ಮುಂತಾದ ಹತ್ತಾರು ಉಪಜಾತಿಗಳಿವೆ. ಅವರದೇ ಪ್ರತ್ಯೇಕ ದೈವಗಳೂ, ಆಚರಣೆಗಳೂ ಇವೆ. ಹುಟ್ಟಿನಿಂದ ಸಾಯುವವರೆಗಿನ ಆಚರಣೆಗಳಲ್ಲಿ ಭಿನ್ನತೆ ಇದೆ. ಹೀಗಿರುವಾಗ ಶೈವದಿಂದ ಸಿಡಿದು ರೂಪುಗೊಂಡ ವೀರಶೈವ/ಲಿಂಗಾಯತ ಧರ್ಮ, ತನ್ನದೇ ಆದ ಪೂಜಾವಿಧಾನ, ಸಂಸ್ಕಾರಗಳನ್ನು, ಮಠ ವ್ಯವಸ್ಥೆಗಳನ್ನು ರೂಪಿಸಿಕೊಂಡು ಸಾಮರಸ್ಯದ ಬದುಕು ನಡೆಸುತ್ತಾ, ಇತರ ಧರ್ಮಗಳೊಂದಿಗೂ ಶಾಂತಿಯುತ ಸಹಬಾಳ್ವೆ ನಡೆಸುತ್ತಾ ಬಂದಿದೆ. ವೀರಶೈವ/ಲಿಂಗಾಯತ ಧಾರ್ಮಿಕವಾಗಿ ಸ್ವತಂತ್ರ ಧರ್ಮ. ಕ್ರೈಸ್ತಮತ, ಇಸ್ಲಾಂ, ಬೌದ್ಧ, ಜೈನ, ಮತ್ತಿತರ ಧರ್ಮಗಳ ಸಾಲಿನಲ್ಲಿ ವೀರಶೈವ/ಲಿಂಗಾಯತವೂ ಸ್ವತಂತ್ರ ಧರ್ಮವಾಗಿ ರಾಜ್ಯಾಂಗದ ಮಾನ್ಯತೆ ಪಡೆಯಲು ಅರ್ಹವಾಗಿದೆ. ಸ್ವತಂತ್ರ ಧರ್ಮ ಎಂದ ಕೂಡಲೇ ಇನ್ನುಳಿದ ಧರ್ಮಗಳನ್ನು ದ್ವೇಷಿಸಬೇಕಾಗಿಲ್ಲ. ಪರಧರ್ಮಗಳೊಂದಿಗೆ ಗೌರವ ಹೊಂದಿರಬೇಕು, ಸಾಮರಸ್ಯದ ಬಾಳ್ವೆ ನಡೆಸಬೇಕು.

ವೀರಶೈವ/ಲಿಂಗಾಯತ ಒಂದು ಸ್ವತಂತ್ರಧರ್ಮ. ಭಾರತದ ಎಲ್ಲ ಧರ್ಮೀಯರನ್ನು ಗೌರವಿಸುತ್ತಲೇ, ತನ್ನ ಪ್ರತ್ಯೇಕತೆಯನ್ನು ಉಳಿಸಿಕೊಂಡು ಸೌಹಾರ್ದದ, ಸಾಮರಸ್ಯದ ಬದುಕನ್ನು ರೂಪಿಸುವ ಧರ್ಮವಾಗಿ ಬಸವಣ್ಣನವರ ಸರ್ವಸಮಾನತೆಯ ತತ್ವಗಳನ್ನು ಜಗತ್ತಿಗೆ ಪರಿಚಯಿಸುವ ಕಾರ್ಯ ಆದ್ಯತೆಯ ಮೇಲೆ ನಡೆಯಬೇಕಾಗಿದೆ. ಹಿಂದೂ ದೇಶ, ಹಿಂದೂ ರಾಷ್ಟ್ರ, ಹಿಂದೂ ಧರ್ಮ, ಶಬ್ದಗಳು ಸಮಗ್ರ ಭಾರತವನ್ನು, ಭಾರತದಲ್ಲಿ ಇರುವ ಎಲ್ಲ ಜನಾಂಗ, ಧರ್ಮೀಯರನ್ನು ಪ್ರತಿನಿಧಿಸಲಾರವು. ಹಿಂದೂ ಎಲ್ಲರೂ ಒಂದೇ ಎಂದರೆ ಉಳಿದ ಧರ್ಮೀಯರು ಯಾರು? ಅವರೂ ಜಾತ್ಯತೀತ ಭಾರತದ ಅಂಗವಲ್ಲವೆ? ಅವರಿಗೂ ಸಮಾನತೆಯ ಹಸಿವು ಇಲ್ಲವೆ? ಹಿಂದೂ ದೇಶ ಎಂದ ಕೂಡಲೆ ಇತರ ಧರ್ಮೀಯರಿಗೆ ಇದು ನಮ್ಮ ದೇಶವಲ್ಲ ಎಂಬ ಭಾವನೆ ಆಳದಲ್ಲಿ ಸುಳಿಯಲಾರದೆ? ಈ ರೀತಿಯ ಸಂಕುಚಿತ ಭಾವನೆಯಿಂದ ಈಗಾಗಲೆ ನಾವು ಭಾರತೀಯರು ಸಾಕಷ್ಟು ಕಷ್ಟ-ನಷ್ಟ ಅನುಭವಿಸಿದ್ದೇವೆ. ಈ ಕುರಿತು ನಾವು ಯಾಕೆ ಚಿಂತಿಸುತ್ತಿಲ್ಲ? ಬಹುಪಾಲು ಹಿಂದುಳಿದವರು, ಅಸ್ಪೃಶ್ಯರು ಅಲಕ್ಷಿತರು ಇಂದಿಗೂ ಬೌದ್ಧ, ಕ್ರಿಶ್ಚಿಯನ್, ಇಸ್ಲಾಂ ಧರ್ಮಗಳನ್ನು ಅಪ್ಪಿಕೊಳ್ಳುತ್ತಿರುವುದರ ಹಿನ್ನೆಲೆ ಏನು? ಸನಾತನ ವೈದಿಕ ಧರ್ಮ ಎಲ್ಲರನ್ನೂ ಸಮನಾಗಿ ಕಂಡಿದ್ದರೆ, ಮತಾಂತರದ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲ ಎನ್ನಬಹುದು. ಈ ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬರೂ ಸಾಮಾಜಿಕ ಸ್ಥಾನಮಾನ ಹೊಂದಿ ಆತ್ಮಗೌರವದಿಂದ ಬಾಳಬೇಕೆಂದು ಬಯಸುತ್ತಾರೆ. ಇಂತಹ ಸರಳ ವಿಚಾರಗಳನ್ನು ಜನತೆಗೆ ತಲುಪಿಸುವುದರಲ್ಲಿ ನಾವೆಲ್ಲರೂ ವಿಫಲರಾಗಿದ್ದೇವೆ. ಇತ್ತೀಚೆಗೆ ನೇಪಾಳದಲ್ಲಿ ಸರ್ವಾಧಿಕಾರದ ಜನವಿರೋಧಿ ರಾಜಸತ್ತೆ ಅಲ್ಲಿನ ಜನತೆಗೆ ಬೇಡವಾಗಿ, ಅಲ್ಲಿ ಪ್ರಜಾಪ್ರಭುತ್ವದ ಮರುಸ್ಥಾಪನೆ ಆದದ್ದು ಎಲ್ಲರೂ ತಿಳಿದಿರುವ ಸಂಗತಿ. ಆದರೆ ನಮ್ಮ ಮಾಧ್ಯಮಗಳು, ಧಾರ್ಮಿಕ ಮುಖಂಡರು ಜಗತ್ತಿನ ಏಕಮಾತ್ರ ಹಿಂದೂ ರಾಷ್ಟ್ರ ಅಸ್ತಂಗತವಾಯಿತೆಂದು ದುಃಖಿತರಾಗಿ ನೀಡಿದ ಹೇಳಿಕೆಗಳು ಮುಖಪುಟದ ಸುದ್ದಿಯಾಗಿದ್ದು ವಿಪರ್ಯಾಸ. ಎಷ್ಟೇ ವೈರುಧ್ಯಗಳಿದ್ದರೂ, ಜಗತ್ತಿನ ಬಹುಪಾಲು ದೇಶಗಳು ಕಂಡುಕೊಂಡಿರುವ ಅತ್ಯುತ್ತಮ ಆಡಳಿತ ಪದ್ಧತಿ ಎಂದರೆ ಪ್ರಜೆಗಳಿಂದಲೇ ಕಾಲಕಾಲಕ್ಕೆ ಚುನಾಯಿತವಾಗುವ ಪ್ರಜಾಪ್ರಭುತ್ವ ಆಡಳಿತ ಪದ್ಧತಿ ಎಂಬ ವಾಸ್ತವ ಸತ್ಯವನ್ನು ಅಲ್ಲಗಳೆಯುವ ಇಂತಹ ಹೇಳಿಕೆಗಳು, ವರದಿಗಳು ಜನತೆಯನ್ನು ಗೊಂದಲಕ್ಕೀಡು ಮಾಡುತ್ತವೆ ಎಂಬ ಪ್ರಾಥಮಿಕ ಜ್ಞಾನವೂ ನಮಗಿಲ್ಲ ಎಂಬುದು ಇದರಿಂದ ಜಗಜ್ಜಾಹೀರಾಯಿತು, ಅಷ್ಟೇ.

ಜಯದೇವಪ್ಪ ಜೈನಕೇರಿ
ನಂ. ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ

## ಕೊರಗು

ಮೈಮೇಲೆ
ಬಣ್ಣ ಬಣ್ಣದ ಚಿತ್ತಾರವಿದೆ
ತಿನ್ನಲು ಬೇಕಾದಷ್ಟು
ಆಹಾರವಿದೆ
ಆದರೇನು ಮಾಡಲಿ
ಅಕ್ವೇರಿಯಂನಿಂದ
ಹೊರಬರುವುದು ಹೇಗೆ ಹೇಳಿ?

ರವಿಶಂಕರ ಒಡ್ಡಂಬೆಟ್ಟು
ಅಭ್ಯುದಯ ಪ್ರೆಸ್ ಬಳಿ
ಕನ್ಯಾನ ಅಂಚೆ - ೫೭೪ ೨೭೯, ದಕ್ಷಿಣ ಕನ್ನಡ ಜಿಲ್ಲೆ

# ದುಃಖಿ



ಆಂತೋನ್ ಚೇಹವ್

ಗ್ರೆಗೊರಿ ಪೆಟ್ರೋವ್ ತನ್ನ ಅದ್ಭುತವಾದ ಮರಗೆಲಸಕ್ಕೆ ಪ್ರಸಿದ್ಧಿಯಾಗಿದ್ದ. ಆದರೆ ಆತ ಇಡೀ ಆ ಪ್ರಾಂತ್ಯದಲ್ಲಿ ಅತ್ಯಂತ ಕೆಲಸಕ್ಕೆ ಬಾರದವನು. ಅವನು ಜಡ್ಡು ಬಿದ್ದಿದ್ದ ಹೆಂಡತಿಯನ್ನು ಆಸ್ಪತ್ರೆಗೆ ಕರೆದೊಯ್ಯುತ್ತಿದ್ದ. ಒಮ್ಮೆ ಅವನು ಮೂವತ್ತು ಮೂರು ಕಿಲೋಮೀಟರ್ ದೂರ ಗಾಡಿ ಹೊಡೆಯಬೇಕಿತ್ತು. ಮಂಜಿನ ಮೋಡಗಳಿಂದ ತಣ್ಣಗಿರುವ ಗಾಳಿ ಅವನ ಮುಖಕ್ಕೆ ರಾಚುತ್ತಿತ್ತು. ಮಂಜು ಆಕಾಶದಿಂದ ಬರುತ್ತಿದೆಯೋ ಅಥವಾ ಭೂಮಿಯಿಂದ ಚಿಮ್ಮುತ್ತಿದೆಯೋ ಎಂದು ತಿಳಿಯದಷ್ಟು ಚಳಿ ಕೊರೆಯುತ್ತಿತ್ತು. ಮಂಜಿನಿಂದ ಹೊಲ, ಕಾಡು, ಟೆಲಿಗ್ರಾಫ್ ತಂತಿಗಳು ಏನೂ ಕಾಣುತ್ತಿರಲಿಲ್ಲ. ಪ್ರಯಾಣ ತುಂಬ ಕಠಿಣವಾಗಿತ್ತು. ಒಬ್ಬ ಸರಕಾರಿ ಅಂಚೆಯವನು ಕೂಡ ಕಾಲಿರಿಸಲು ಸಾಧ್ಯವಾಗುತ್ತಿರಲಿಲ್ಲ, ಇನ್ನು ಗ್ರೆಗೊರಿ ಯಾವ ಮೂಲೆಗೆ. ಕುದುರೆಯ ಶಕ್ತಿಯೆಲ್ಲ ಮಂಜಿನಲ್ಲಿ ಕಾಲೂರಿ ಕಾಲುಗಳನ್ನು ಮೇಲೆಳೆಯುವುದರಲ್ಲೇ ಖರ್ಚಾಗುತ್ತಿತ್ತು. ಗ್ರೆಗೊರಿ ಪದೇ ಪದೇ ಕುದುರೆಯ ಬೆನ್ನಿಗೆ ಚಾಟಿ ಏಟು ಹೊಡೆಯುತ್ತಲೇ ಇದ್ದ.

''ಅಳಬೇಡ ಮತ್ರೋಯ್ನ'' ಎಂದು ಗ್ರೆಗೊರಿ ''ಸ್ವಲ್ಪ ತಾಳ್ಮೆ ಇರಲಿ, ನಾವು ಆಸ್ಪತ್ರೆಗೆ ಹೋಗೋಣ. ದೇವರಿಚ್ಛೆ. ಸ್ವಲ್ಪ ಹೊತ್ತಿನಲ್ಲಿ ಪಾವೆಲ್ ಇವಾನಿಚ್ ನಿನಗೆ ಔಷಧಿಯ ಹನಿಗಳನ್ನು ಹಾಕಿದರೆ ಸಾಕು, ನೀನು ಗುಣವಾಗುತ್ತೀಯ ಅಥವಾ ರಕ್ತ ತಪಾಸಣೆ ಮಾಡಬಹುದೇನೊ ಅಥವಾ ಸ್ವಲ್ಪ ಔಷಧಿಯನ್ನು ನಿನ್ನ ಪಕ್ಕೆಗಳಿಗೆ ತೀಡಿ ನಿನ್ನ ಪಕ್ಕೆಗಳ ನೋವನ್ನು ನೀಗಿಸುತ್ತಾರೆ. ಅವನ ಕೈಲಾದದ್ದೆಲ್ಲಾ ಮಾಡುತ್ತಾನೆ. ಪಾವೆಲ್ ಇವಾನಿಚ್, ಸ್ವಲ್ಪ ತಾಳ್ಮೆ ಇಲ್ಲದ ಮನುಷ್ಯ. ಆದರೆ ಅವನ ಕೈಲಾದದ್ದೆಲ್ಲಾ ಮಾಡುತ್ತಾನೆ. ದೇವರು ಅವನ ಆರೋಗ್ಯ ಚೆನ್ನಾಗಿ ಇಟ್ಟಿರಲಿ.''

''ನಾವೆಲ್ಲ ಹೋದಕೂಡಲೇ ತಟ್ಟನೆ ಅವನು ರೂಮಿನಿಂದ ಆಚೆ ಬಂದು ನನ್ನನ್ನು ಚೆನ್ನಾಗಿ ಬಯ್ಯುತ್ತಾನೆ. 'ಮೊದಲೇ ಏಕೆ ಬರಲಿಲ್ಲ? ಇಡೀ ದಿನದ ಸಮಯವನ್ನು ನಿಮ್ಮಿಬ್ಬರ ಮೇಲೆ ವ್ಯರ್ಥ ಮಾಡಲು ನಾನೇನು ನಾಯಿಯೆ? ಮುಂಜಾನೆಯೇ ಏಕೆ ಬರಲಿಲ್ಲ? ಹೊರಟು ಹೋಗಿ, ನಾಳೆ ಬನ್ನಿ' ಎನ್ನುತ್ತಾನೆ ಪಾವೆಲ್. ಆದರೆ ನಾನು ಹೇಳುವೆ ''ಡಾಕೆಟ್ರೇ ನೀವು ಹಿರಿಯರು, ತಿಳಿದವರು''. ''ಬೇಗನೇ ಓಡು, ನಿನ್ನ ದರಿದ್ರ ಕಣ್ಣುಗಳೋ...'' ಎಂದು ಕುದುರೆಗೆ ಏಟು ಕೊಟ್ಟ. ಹಿಂದೆ ಕೂತಿದ್ದ ಹೆಂಡತಿಯ ಕಡೆಗೆ ಕಣ್ಣುಹಾಯಿಸದೇ ಗೊಣಗತೊಡಗಿದ.

''ನೀವು ದೊಡ್ಡವರು. ನಿಜವಾಗಿ ದೇವರೇ ನನಗೆ ಸಾಕ್ಷಿ. ನಾನು ಮನೆ ಬಿಟ್ಟಾಗ ಆಗತಾನೆ ಬೆಳಕು ಹರಿದಿತ್ತು. ದೇವರು ಸಿಟ್ಟಾಗಿ ಇಂತಹ ಮಂಜಿನ ಮಳೆಯನ್ನು ಸುರಿಸಿದರೆ, ನಾನು ಸಮಯಕ್ಕೆ ಸರಿಯಾಗಿ ಹೇಗೆ ಬರಲು ಸಾಧ್ಯ? ನೀವೇ ನೋಡಿ ನನಗೆ ಸಿಕ್ಕಿರುವ ಕುದುರೆ ಕುದುರೆಯಲ್ಲ, ದರಿದ್ರ. ಆದರೆ ಪಾವೆಲ್ ಇವಾನಿಚ್ ಸುಮ್ಮನಾಗುವುದಿಲ್ಲ.'' 'ಗ್ರೆಗೊರಿ ನೀನು ಯಾವಾಗಲೂ ನೆವಗಳನ್ನೇ ಹುಡುಕುತ್ತೀಯ. ನೀನು ಎಂತಹ ಮನುಷ್ಯನೆಂದು ಚೆನ್ನಾಗಿ ಗೊತ್ತು. ಐದು ಸತಿಯಾದರೂ ದಾರಿಯಲ್ಲಿ ಕುಡಿಯಲು ಗಾಡಿ ನಿಲ್ಲಿಸಿರುತ್ತೀಯ.' ನಾನು ಅವರಿಗೆ ಹೇಳುತ್ತೇನೆ ''ಸ್ವಾಮಿ ನನ್ನನ್ನು ಕೀಳು ಮನುಷ್ಯನೆಂದು ತಿಳಿಯಬೇಡಿ, ನನ್ನ ವಯಸ್ಸಾದ ಹೆಂಡತಿ ನನ್ನ ಆತ್ಮವನ್ನು ಸೃಷ್ಟಿಕರ್ತನಿಗೆ ಒಪ್ಪಿಸಲು ಹೊರಟಿದ್ದಾಳೆ.'' ''ಅವಳು ಸಾಯುತ್ತಿದ್ದರೆ ನೀನು ಕುಡಿಯುವುದೆ? ಎಲ್ಲಾದರುಂಟೆ? ಆ ಹೋಟಲುಗಳೆಲ್ಲಾ ಹಾಳಾಗಲಿ. ಆಗ ಪಾವೆಲ್ ಇವಾನಿಚ್ ನಿನ್ನನ್ನು ಆಸ್ಪತ್ರೆಯೊಳಗೆ ಬಿಡುತ್ತಾನೆ. ನಾನು ಅವನ ಕಾಲಿಗೆ ಬಿದ್ದು ''ಪಾವೆಲ್ ಇವಾನಿಚ್ ನೀವು ತಿಳಿದವರು, ದೊಡ್ಡವರು! ಬಡ ರೈತನ ಮೇಲೆ ನಿಮ್ಮ ಕೃಪೆಯಿರಲಿ. ನಮ್ಮನ್ನು ಎಷ್ಟಾದರೂ ನಿಂದಿಸಿ, ದೂಷಿಸಿ. ನಾವು ಬಡವರು ತಿಳಿವಳಿಕೆ ಇಲ್ಲದವರು. ಆದರೆ ನೀವು ಕರುಣಾಮಯಿ, ದಯಾಮಯಿ!''

ಪಾವೆಲ್ ಇವಾನಿಚ್ ನನ್ನ ಹೊಡೆದೇಬಿಡುವ ಹಾಗೆ ನೋಡುವರು, ಮತ್ತೆ ಹೀಗನ್ನುವರು ''ನನ್ನ ಕಾಲಿಗೆ ಬಿದ್ದು ಉರುಳಾಡುವ ಬದಲು ಸರಾಯಿ ಕುಡಿಯುವುದನ್ನು ಬಿಡುವುದು ಮೇಲು. ಮುಟ್ಠಾಳ, ವಯಸ್ಸಾದ ಹೆಂಡತಿಯ ಮೇಲೆ ಕರುಣೆ ತೋರು, ನಿನ್ನನ್ನು ಚೆನ್ನಾಗಿ ಒದೆಯಬೇಕು!'' ''ಒದೆಯಬೇಕು. ದೇವರು ನನ್ನನ್ನು ಕೊಂದುಬಿಡಲಿ. ಆದರೆ ನೀವು ನನ್ನ ತಂದೆ, ತಾಯಿ ಎಂದು ಕಾಲಿಗೆ ಬೀಳುವೆ, ದೇವರೆದುರೇ ಸುಳ್ಳು ಹೇಳುತ್ತಿದ್ದರೆ ನನ್ನ ಮುಖದ ಮೇಲೆ ಉಗುಳಿರಿ.''

''ಮತ್ತೊಮ್ಮೆ ಹುಷಾರಾದ ಕೂಡಲೆ ನಿಮಗೇನು ಬೇಕು ಕೇಳಿ, ಅದನ್ನೇ ಮಾಡಿಕೊಡುವೆ. ಮರದ ಸಿಗರೇಟು ಡಬ್ಬಿ, ಹುಲ್ಲಿನ ಹಾಸಿನ ಮೇಲೆ ಆಡಲು ಮರದ ಚೆಂಡು, ಮರದ ಚದುರಂಗ, ನಿಮಗೇನು ಬೇಕೋ ಅಪ್ಪಣೆ ಮಾಡಿ: ಮಾಸ್ಕೋದಲ್ಲಿ ನಾಲ್ಕು ರೂಬೆಲ್‌ಗೆ ಒಂದು ಸಿಗರೇಟು ಡಬ್ಬಿ. ಆದರೆ ನಾನು ಒಂದು ಕೋಪೆಕ್ ಕೂಡ ತೆಗೆದುಕೊಳ್ಳುವುದಿಲ್ಲ. ಆಗ ವೈದ್ಯರು ನಕ್ಕು ಹೇಳುತ್ತಾರೆ, '' ಸರಿ ಸರಿ, ನೀನು ಕುಡುಕನೆನ್ನುವುದು ಕರುಣಾಜನಕವಾದ ವಿಷಯ. ನನಗೆ ಮಹಾನುಭಾವರನ್ನು ಹೇಗೆ ಮಾತನಾಡಿಸಬೇಕೆಂದು ಗೊತ್ತು. ದೇವರ ದಯೆಯಿಂದ ದಾರಿ ತಪ್ಪದಿದ್ದರೆ ಸಾಕು. ಈ ಚಳಿಯಿಂದಾಗಿ ನನ್ನ ಕಣ್ಣುಗಳೆಲ್ಲ ಮಂಜಾಗಿ ಕಾಣುತ್ತವೆ.''

ಹೀಗೆ ಗ್ರೆಗೊರಿ ಬಿಡದೆ ಗೊಣಗುತ್ತಲೇ ಇದ್ದ. ಅವನ ಮಾತಿಗಿಂತ ಹೆಚ್ಚು ಪ್ರಶ್ನೆಗಳು ಅವನ ತಲೆತುಂಬ ತುಂಬಿಕೊಂಡಿದ್ದವು. ಹೆಂಡತಿಯ ಅನಾರೋಗ್ಯದಿಂದ ಅವನು ನಿಬ್ಬೆರಗಾಗಿದ್ದ. ಅವನಿಗೆ ಸಂತೋಷವೂ ತಿಳಿಯದೆ ದುಃಖವೂ ತಿಳಿಯದೆ ಇಷ್ಟು ವರ್ಷ ಕಾಲ ಕಳೆದಿದ್ದ. ಈಗ ಇದ್ದಕ್ಕಿದ್ದಂತೆ ಈ ತೊಂದರೆ ಅವನ ಎದೆಯಲ್ಲಿ ನೋವನ್ನುಂಟುಮಾಡಿತ್ತು. ಸಹಾನುಭೂತಿ, ಚಿಂತೆ ಮತ್ತು ಆತುರಗಳಿಂದ ಕೂಡಿದ್ದ ಮನುಷ್ಯನ ಸ್ಥಿತಿ ಈ ಕುಡುಕನನ್ನು ಕಾಡುತ್ತಿತ್ತು.

ಈ ಗ್ರೆಗೊರಿಯ ತೊಂದರೆಗಳು ಶುರುವಾಗಿದ್ದೆ ನೆನ್ನೆ ಸಂಜೆ. ಎಂದಿನಂತೆ ಸ್ವಲ್ಪ ಕುಡಿದೇ ಮನೆಗೆ ಬಂದ. ಎಲ್ಲರನ್ನು ಬೈಯುತ್ತ ಕೈ ಕಾಲುಗಳನ್ನು ಬೀಸುತ್ತ ಬಂದಾಗ ಅವನಿಗೆ ಹೆಂಡತಿಯ ಮುಖ ಎಂದಿನಂತೆ ಕಾಣಲಿಲ್ಲ. ಅವಳ ಕಣ್ಣುಗಳಲ್ಲಿ ಯಾವಾಗಲೂ ಪುಕ್ಕಲುತನ ಕಾಣುತ್ತಿತ್ತು. ತಿಂಡಿಗಿಂತ ಹೆಚ್ಚು ಏಟು ತಿನ್ನುವ ನಾಯಿಯಂತೆ ಕಾಣುತ್ತಿತ್ತು ಅವಳ ಮುಖ. ಆದರೆ ಇಂದು ಅವಳ ಮುಖದಲ್ಲಿ ಯಾವ ಚಲನೆಯೂ ಇಲ್ಲದೆ ಸ್ತಬ್ಧವಾಗಿತ್ತು, ಕಲ್ಲಿನ ಮೂರ್ತಿಯಂತೆ, ಸತ್ತವರಂತೆ. ಭಾವನೆಯೇ ಇಲ್ಲದ ಕಣ್ಣುಗಳನ್ನು ನೋಡುತ್ತಲೇ ಗ್ರೆಗೊರಿಗೆ ಸಂಕಟ ಶುರುವಾಯಿತು. ಗಾಬರಿಯಾದ ಗ್ರೆಗೊರಿ ಪಕ್ಕದ ಮನೆಯವನಿಂದ ಮುದಿ ಕುದುರೆಯೊಂದನ್ನು ಬೇಡಿ ತೆಗೆದುಕೊಂಡುಬಂದು ವಯಸ್ಸಾದ ಹೆಂಡತಿಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋದ.

''ಮತ್ರೋಯ್ನ'' ಎಂದು ವಟಗುಟ್ಟಿದ ಗ್ರೆಗೊರಿ ''ಪಾವೆಲ್ ಇವಾನಿಚ್‌ಗೆ ನಿನ್ನ ನಾನು ಹೊಡೆಯುತ್ತೇನೆಂದು ಹೇಳಬೇಡ. ಇನ್ನು ಮುಂದೆ ನಾನು ಅಂತಹ ಕೆಲಸ ಮಾಡುವುದಿಲ್ಲ. ನಾನು ಕಾರಣವಿಲ್ಲದೆ ಸುಮ್ಮನೆ ಹೊಡೆಯುತ್ತಿದ್ದೆ, ದ್ವೇಷದಿಂದಲ್ಲ. ತಪ್ಪಾಯಿತು. ನೀನೆ ನೋಡು ನಿನ್ನನ್ನು ಆಸ್ಪತ್ರೆಗೆ ಕರೆದೊಯ್ಯುತ್ತಿಲ್ಲವೇ? ಈ

ಮಂಜಿನ ಮಳೆಯಲ್ಲಿ ಕಷ್ಟಪಡುತ್ತಿದ್ದೇನೆ. ನಿನಗೆ ಪಕ್ಕೆಗಳ ನೋವೆ ?''

ಅವನಿಗೆ ಆಕೆಯ ಮುಖದ ಮೇಲೆ ಬಿದ್ದಿರುವ ಮಂಜು ಕರಗದೆ ಇರುವುದು ವಿಚಿತ್ರವಾಗಿ ಕಂಡಿತು. ಆಕೆಯ ಮುಖ ತೆಳುವಾಗಿ ಕಪ್ಪಿಟ್ಟಿತು.

''ಲೇ ಪೆದ್ದಿ'' ಎಂದ ಗ್ರೆಗೊರಿ, ''ನೀನು ಮಾತಾಡ ದಿದ್ದರೆ ಪಾವೆಲ್ ಇವಾನಿಚ್ ಕಡೆ ಕರೆದೊಯ್ಯುವುದಿಲ್ಲ''

ಗ್ರೆಗೊರಿಯು ಕುದುರೆಯ ಹಗ್ಗಗಳನ್ನು ಬಿಟ್ಟು ಯೋಚಿಸುವ ಪ್ರಯತ್ನ ಮಾಡಿದ. ಹಿಂದೆ ತಿರುಗಿ ನೋಡಲು ಆಗಲಿಲ್ಲ, ಗಾಬರಿಯಾಗಿಬಿಟ್ಟ. ಹೆಂಡತಿಯಿಂದ ಯಾವ ಉತ್ತರವೂ ಬಾರದೆ ಇನ್ನೂ ಗಾಬರಿಯಾದ. ಕೊನೆಗೂ ಸರಿಯಾಗಿ ಅವಳನ್ನು ನೋಡಲು ಆಗದೆ ಅವಳ ತಣ್ಣಗಾದ ಅಂಗೈಯನ್ನು ಮುಟ್ಟಿದ. ಎತ್ತಿದ ಕೂಡಲೇ ಅಂಗೈ ಧೊಪ್ಪೆಂದು ಕೆಳಕ್ಕೆ ಬಿತ್ತು. ''ಇವಳು ಸತ್ತುಹೋದಳು ಅಯ್ಯೋ'' ಎಂದು ಅಳತೊಡಗಿದ. ದುಃಖಕ್ಕಿಂತ ಸೋಲಿನ ಅನುಭವ ಹೆಚ್ಚೆನಿಸಿತು. ಎಷ್ಟು ಬೇಗನೆ ಎಲ್ಲವೂ ನಡೆದುಹೋಯಿತು. ಶುರುವಾಗುವ ಮೊದಲೇ ಎಲ್ಲಾ ಕಷ್ಟಗಳು ಕೊನೆಗೊಂಡಿದ್ದವು. ಅವಳೊಂದಿಗೆ ಬದುಕುವ, ಮಾತಾಡುವ, ಅಳುವ ಮೊದಲೇ ಅವಳು ತೀರಿಕೊಂಡಿದ್ದಳು. ಅವನನ್ನು ಅಣಕಿಸಿದಂತಿತ್ತು. ಈಗ ಅವನಿಗೆ ಅವಳನ್ನು ಬಿಟ್ಟು ಬದುಕಲೂ ಆಗದು, ತಪ್ಪಿಗೂ ಸಿಕ್ಕಿಬಿದ್ದ.

ಅವನಿಗೆ, ವಯಸ್ಸಾದ ಹೆಂಡತಿಯನ್ನು ಭಿಕ್ಷೆ ಬೇಡಲು ಕಳುಹಿಸಿದ್ದು ನೆನಪಾಯಿತು. ಹಾಗೆಲ್ಲ ಆಗದಿದ್ದರೆ ಅವಳು ಇನ್ನೂ ಹತ್ತು ವರ್ಷ ಬದುಕುತ್ತಿದ್ದಳು ಎಂದು ಎನಿಸಿತು, ಅವನಿಗೆ. ಆಸ್ಪತ್ರೆಗೆ ಕರೆದೊಯ್ಯುವ ಬದಲು ಇವಳನ್ನು ಹೂಳಬೇಕಾಯಿತಲ್ಲ ಎಂದು ಪೇಚಾಡಿದ.

ಗ್ರೆಗೊರಿ ಗಾಡಿಯನ್ನು ತಿರುಗಿಸಿ ತನ್ನ ಶಕ್ತಿಯೆಲ್ಲಾ ಬಿಟ್ಟು ಚಾಟಿ ಬೀಸಿದ. ಕ್ಷಣಕ್ಷಣಕ್ಕೂ ಮಂಜಿನ ಮಳೆ ಜೋರಾಗುತ್ತಿತ್ತು. ಕುದುರೆಯ ಹೆಗಲಿಗೆ ಕಟ್ಟಿದ ಕಟ್ಟಿಗೆಯೂ ಕಾಣುತ್ತಿರಲಿಲ್ಲ. ಆಗಾಗ ಅವನ ಕೈಯನ್ನು ಏನೋ ತರಿಯುತ್ತಿತ್ತು. ಮುಖಕ್ಕೆ ಏನೋ ರಾಚುತ್ತಿತ್ತು. ಮತ್ತೆ ಅವನ ಕಣ್ಣೆದಿರು ಮಂಜಿನ ಬಿಳಿಹಾಸು ತುಂಬಿಕೊಳ್ಳುತ್ತಿತ್ತು.

'ನಾನು ಮತ್ತೆ ಮೊದಲಿನಿಂದ ನನ್ನ ಬದುಕನ್ನು ಪ್ರಾರಂಭ ಮಾಡಿದರೆ' ಎಂದುಕೊಂಡ.

ತನ್ನ ಹಿಂದಿನ ಕಥೆಯೆಲ್ಲಾ ಅವನಿಗೆ ನೆನಪು ಬರತೊಡಗಿತು. ನಲವತ್ತು ವರ್ಷಗಳ ಹಿಂದೆ ಮತ್ರೊಯ್ನ ಓರ್ವ ಸುಂದರವಾದ ಯುವತಿ. ಆಕೆ ಸದಾ ನಗುನಗುತ್ತಾ ಇರುವ ಯುವತಿಯಾಗಿದ್ದಳು. ಒಳ್ಳೆಯ ಮನೆತನದವಳಾಗಿದ್ದಳು. ಮನೆಯವರೆಲ್ಲ ಗ್ರೆಗೊರಿಯ ಕಲೆಗೆ ಮರುಳಾಗಿ, ಇವನೊಂದಿಗೆ ಮದುವೆ ಮಾಡಿದ್ದರು. ಸುಖ ಜೀವನದ ಮುನ್ಸೂಚನೆಗಳೆಲ್ಲಾ ಇದ್ದವು. ಆದರೆ ಗ್ರೆಗೊರಿ ಮದುವೆಯ ಮೊದಲನೇ ರಾತ್ರಿಯೇ ಕುಡಿದು ಒಲೆಯ ಹತ್ತಿರ ಬೆಚ್ಚಗೆ ಮಲಗಿದ್ದ. ಇಂದಿಗೂ ಅದೊಂದು ಚಟವಾಗಿತ್ತು. ನಲವತ್ತು ವರ್ಷಗಳು ಕುಡಿತ, ಜಗಳ, ಸೋಮಾರಿತನದಿಂದ ಜಾರಿದ್ದವು. ಈ ನೆನಪುಗಳೆಲ್ಲಾ ಗ್ರೆಗೊರಿಯನ್ನು ಕಾಡಲಾರಂಭಿಸಿದವು.

ಮಂಜಿನ ಬಿಳಿ ಮೋಡಗಳು ನಿಧಾನವಾಗಿ ಕಪ್ಪಿಟ್ಟವು. ರಾತ್ರಿಯಾಗತೊಡಗಿತು.

''ಎಲ್ಲಿಗೆ ಹೊರಟಿರುವೆ ?'' ಎಂದುಕೊಂಡು ಗ್ರೆಗೊರಿಯು ಕುದುರೆಗೆ ಚಾಟಿ ಬೀಸಿ ಹೊಡೆದು, ಗಾಡಿಯನ್ನು ತಿರುಗಿಸಿದ. ಆ ಕುದುರೆ ತನ್ನೆಲ್ಲ ಶಕ್ತಿಯೊಂದಿಗೆ ಮೆಲ್ಲನೆ ತಲೆದೂಗಿಸುತ್ತ ನಡೆಯಿತು. ಗ್ರೆಗೊರಿ ಕುದುರೆಯನ್ನು ಮತ್ತೆ ಮತ್ತೆ ಥೊಡೆಯುತ್ತಲೇ ಹೋದ.

ಅವನಿಗೆ ಹಿಂದಿನಿಂದ ಸದ್ದು ಕೇಳಿಬರುತ್ತಿತ್ತು. ಅದು ಸತ್ತಿರುವ ಹೆಂಡತಿಯದು. ತಲೆ ಗಾಡಿಗೆ ಹೊಡೆದುಕೊಳ್ಳುತ್ತಿರುವ ಸದ್ದು ಎಂದು ಅವನಿಗೆ ಗೊತ್ತಿದ್ದರೂ, ಹಿಂದೆ ತಿರುಗಿ ನೋಡಲಾರ. ಕತ್ತಲೆ ಕವಿಯುತ್ತಿದ್ದಂತೆ ಗಾಳಿ ಇನ್ನೂ ತಣ್ಣಗಾಗುತ್ತ ಹೋಗುತ್ತಿತ್ತು.

'ನಾನು ಮತ್ತೆ ಮೊದಲಿನಿಂದ ಬದುಕಲೇಬೇಕು' ಎಂದುಕೊಳ್ಳುತ್ತಾನೆ ಈ ಮರಗೆಲಸದವನು. 'ಹೊಸ ಸಾಮಾನುಗಳನ್ನು ಕೊಂಡು ಬೇಡಿಕೆದಾರರನ್ನು ಹುಡುಕಬೇಕು' ಎಂದುಕೊಳ್ಳುತ್ತಾನೆ.

ಕುದುರೆಗೆ ಕಟ್ಟಿದ ಹಗ್ಗಗಳು ಕೈಜಾರಿ ಕೆಳಕ್ಕೆ ಬಿದ್ದವು. ಹಗ್ಗಗಳನ್ನು ನೋಡಿ ಮೇಲೆತ್ತಲು ಪ್ರಯತ್ನಿಸಿದ. ಆದರೆ ಕೈಗಳು ಅವನ ಮಾತು ಕೇಳುವುದಿಲ್ಲ.

'ಪರವಾಗಿಲ್ಲ' ಎಂದುಕೊಳ್ಳುತ್ತಾನೆ. 'ಕುದುರೆಯು ತಾನೇ ಹೋಗುತ್ತದೆ. ಅದಕ್ಕೆ ದಾರಿ ಗೊತ್ತು. ಸ್ವಲ್ಪ ಹೊತ್ತು ಮಲಗುತ್ತೇನೆ. ಹೂಳುವ ಸಮಯಕ್ಕೆ ಎಚ್ಚರವಾಗುತ್ತೇನೆ' ಎಂದು ಈ ಮರಗೆಲಸದವ ಕಣ್ಮುಚ್ಚಿ ನಿದ್ದೆ ಮಾಡಿದ. ಸ್ವಲ್ಪ ಹೊತ್ತಿನ ನಂತರ ಗಾಡಿ ನಿಂತಿತು. ಗ್ರೆಗೊರಿಗೆ ಎಚ್ಚರವಾಯಿತು. ಗಾಡಿ ಎದಿರು ಏನೋ ಕಪ್ಪು ಆಕಾರ ಕಂಡಿತು.

ಗ್ರೆಗೊರಿ ಮೇಲೇಳಬೇಕೆಂದುಕೊಂಡರೆ ಅವನ ಕೈಕಾಲುಗಳಲ್ಲಿನ ಜಡತ್ವ ತಡೆಯುತ್ತಿತ್ತು. ಮೇಲೇಳುವ ಬದಲು ಮಂಜುಗಟ್ಟಿ ಸಾಯುವುದೇ ಮೇಲಾಗಿತ್ತು. ಮತ್ತೆ ಅವನು ನಿಶ್ಚಿಂತೆಯಿಂದ ನಿದ್ದೆಗಿಳಿದನು. ಗ್ರೆಗೊರಿಗೆ ಎಚ್ಚರವಾದಾಗ ಆತ ದೊಡ್ಡ ಕೋಣೆಯಲ್ಲಿ ಬಣ್ಣ ಹಚ್ಚಿದ ಗೋಡೆಗಳ ಮಧ್ಯೆ ಇದ್ದ. ಕಿಟಕಿಯ ಮೂಲಕ ಸೂರ್ಯನ ಬಿಸಿಲು ಬೀಳುತ್ತಿತ್ತು. ಗ್ರೆಗೊರಿಯ ಎದಿರು ಕೆಲ ಜನ ನಿಂತಿದ್ದರು. ಅವರಿಗೆ ಗ್ರೆಗೊರಿ ಅಪ್ಪಣೆ ನೀಡುವಂತೆ ''ಪಾದ್ರಿಯನ್ನು ಕರೆಯಿರಿ, ಅಂತ್ಯಕ್ರಿಯೆಯ ಕೆಲಸ ಬಾಕಿ ಇದೆ'' ಎಂದನು.

''ಆಯಿತು. ಈಗ ಮಲಗಿಕೋ'' ಎಂದಿತು ಯಾರದೋ ಧ್ವನಿ. ನೋಡಿದರೆ ಅದು ಪಾವೆಲ್ ಇವಾನಿಚ್. ಗ್ರೆಗೊರಿಗೆ ಆಶ್ಚರ್ಯವಾಯಿತು. ''ಪಾವೆಲ್ ಇವಾನಿಚ್ ದಯಾಳುವೇ ದಯಾಮಯಿ'' ಎಂದು ಉದ್ಗರಿಸಿದ. ಎದ್ದು ಪಾವೆಲ್‌ನ ಕಾಲಿಗೆ ಬೀಳಬೇಕೆಂದುಕೊಂಡ. ಆದರೆ ಅವನ ಕೈಕಾಲುಗಳು ಜಗ್ಗವು.

''ಅಯ್ಯೋ ದೇವರೆ ! ನನ್ನ ಕೈ ಕಾಲುಗಳೆಲ್ಲಿ ?''

''ನಿನ್ನ ಕೈ ಕಾಲುಗಳಿಗೆ ನಮಸ್ಕಾರ ಹೊಡಿ. ಮಂಜುಗಟ್ಟಿ ಉದುರಿಹೋದವು. ನಿನ್ನಂತಹವನು ಅರವತ್ತು ವಸಂತಗಳನ್ನು ನೋಡಿರುವುದೇ ಹೆಚ್ಚು'' ಎಂದರು ಪಾವೆಲ್ ಇವಾನಿಚ್.

''ನನ್ನ ಮೇಲೆ ಕರುಣೆ ತೋರಿಸಿ ಡಾಕ್ಟ್ರೆ. ನನಗೆ ಬದುಕಲು ಇನ್ನೂ ಕೆಲವು ವರ್ಷಗಳು ಬೇಕು. ದುಃಖದ ಸಲುವಾಗಿ'' ''ಏಕೆ?'' ಎಂದರು ಪಾವೆಲ್. ಮರಗೆಲಸದವನೆಂದ ''ಕುದುರೆಯನ್ನು ಪಕ್ಕದ ಮನೆಯವನಿಗೆ ಹಿಂತಿರುಗಿಸಬೇಕು. ನನ್ನ ವಯಸ್ಸಾದ ಹೆಂಡತಿಗೆ ಅಂತ್ಯಕ್ರಿಯೆಯನ್ನು ಮಾಡಬೇಕು. ಈ ಪ್ರಪಂಚದಲ್ಲಿ ಎಲ್ಲವೂ ಎಷ್ಟು ಬೇಗನೇ ನಡೆಯುತ್ತವೆ. ಮತ್ತೆ ನಿಮಗೆ ಸಿಗರೇಟಿನ ಡಬ್ಬಿ ಮಾಡಿಕೊಡಬೇಕು.''

ಪಾವೆಲ್ ಇವಾನಿಚ್ ಇದೆಲ್ಲ ಕೇಳಿಸಿಕೊಳ್ಳದೆ, ಕೈಬೀಸಿಕೊಂಡು ಹೊರಗೆ ನಡೆದ.

ದೇವರೇ, ಗ್ರೆಗೊರಿಯನ್ನು ಕಾಪಾಡು.



ಕನ್ನಡಕ್ಕೆ : ಸೌಜನ್ಯ ಎಸ್. ರಾಜು
D/o ಎಸ್. ನಾರಾಯಣ ರಾಜು, 'ಸುಕೃತ',
[illegible] ಕಲ್ಯಾಣ ನಗರ, ಧಾರವಾಡ - [illegible]

# ಚೀನಾ ಪ್ರವಾಸದಿಂದ ನಮ್ಮ ಶಾಸಕರು ಕಲಿಯಬೇಕಾದ್ದೇನು ?

೧೯೪೭ಕ್ಕೆ ಭಾರತ ಸ್ವಾತಂತ್ರ್ಯ ಪಡೆದು ವಿಶ್ವದ ದೊಡ್ಡ ಪ್ರಜಾತಂತ್ರ ರಾಷ್ಟ್ರವಾದರೆ, ೧೯೪೯ರಲ್ಲಿ ನಡೆದ ಕ್ರಾಂತಿಯಿಂದ ಚೀನಾ ವಿಶ್ವದ ದೊಡ್ಡ ಕಮ್ಯುನಿಸ್ಟ್ ರಾಷ್ಟ್ರವಾಯಿತು. ಎರಡೂ ವ್ಯವಸ್ಥೆಗಳಿಗಿರುವ ಮೂಲಭೂತ ವ್ಯತ್ಯಾಸ ಆಸ್ತಿಯ ಹಕ್ಕು. ಸರ್ಕಾರವೇ ಆಸ್ತಿಯ ಹಕ್ಕನ್ನು ಹೊಂದಿದ್ದು ಜನರ ಅಗತ್ಯಕ್ಕೆ ತಕ್ಕಂತೆ ಕನಿಷ್ಠ ಮತ್ತು ಗರಿಷ್ಠ ಮಿತಿಗೊಳಪಡಿಸಿ ಭೂಮಿ ಹಂಚಿಕೆ ಮಾಡಲಾಗುತ್ತದೆ. ಯೂರೋಪಿನಷ್ಟು ವಿಸ್ತಾರವಾದ ಭೂಪ್ರದೇಶ ಹೊಂದಿರುವ ಚೀನಾ ದೇಶದಲ್ಲಿ ಈಗ ೧೩೬ ಕೋಟಿ ಜನಸಂಖ್ಯೆಯಿದ್ದರೆ, ಭಾರತದ್ದು ೧೦೬ ಕೋಟಿ ಜನಸಂಖ್ಯೆ. ಎರಡೂ ದೇಶಗಳು ಕೃಷಿಪ್ರಧಾನ ರಾಷ್ಟ್ರಗಳಾಗಿವೆ. ಪ್ರಪಂಚದಲ್ಲೇ ವ್ಯವಸಾಯಕ್ಕೆ ಯೋಗ್ಯ ಕೃಷಿಭೂಮಿಯಲ್ಲಿ ಶೇ. ೧೦ಕ್ಕಿಂತ ಕಡಿಮೆ ಇರುವ ಚೀನಾ ದೇಶ, ಆಧುನಿಕ ಉಪಕರಣಗಳನ್ನು ಬಳಸಿ ಅತಿಹೆಚ್ಚು ಬೆಳೆಯಲು ಯಶಸ್ವಿಯಾಗಿದೆ.

೧೯೭೮ರಲ್ಲಿ 'ಒಂದೇ ಮಗು ಯೋಜನೆ' ಜಾರಿಗೊಳಿಸಿ ಜನಸಂಖ್ಯೆ ನಿಯಂತ್ರಿಸುವಲ್ಲಿ ಸಾಕಷ್ಟು ಯಶಸ್ವಿಯಾಗಿದ್ದಾರೆ. ಭಾರತ ಅನೇಕ ವರ್ಷಗಳಿಂದ ಕುಟುಂಬ ಕಲ್ಯಾಣ ಯೋಜನೆ ಜಾರಿಗೊಳಿಸಿಯೂ ಜನಸಂಖ್ಯೆ ನಿಯಂತ್ರಣ ಸಾಧ್ಯವಾಗಿಲ್ಲ. ಇದಕ್ಕೆ ಮುಖ್ಯ ಕಾರಣ ಅನಕ್ಷರತೆ. ಯಾವುದೇ ವ್ಯವಸ್ಥೆಯಲ್ಲಿ ಸಾಕ್ಷರತೆ ಸಂಪೂರ್ಣವಾಗಿ ಯಶಸ್ವಿಯಾಗ ದಿದ್ದರೆ ಆ ದೇಶದ ಯಾವುದೇ ಪ್ರಗತಿಪರ ಯೋಜನೆಗಳು ಗುರಿಮುಟ್ಟಲಾರವು. ಸ್ವಾತಂತ್ರ್ಯ ಬಂದ ಮೊದಲ ದಶಕದಲ್ಲೇ ಶೇ. ೯೦ರಷ್ಟು ಸಾಕ್ಷರತೆ ಸಾಧಿಸಿದ ಚೀನಾ ಉತ್ತರ ಭಾಗದ ಬುಡಕಟ್ಟು ಜನರಲ್ಲಿ ಸಂಪೂರ್ಣ ಯಶಸ್ವಿಯಾಗಿಲ್ಲ.

ಚೀನಿಯರು ಒಂದು ಭಾಷೆ – ಒಂದು ಧರ್ಮದಲ್ಲಿ ನಂಬಿಕೆ ಇಟ್ಟವರು. ಸುಮಾರು ೫೦ ಅಧಿಕೃತ ಅಲ್ಪಸಂಖ್ಯಾತ ಸಮುದಾಯಗಳಿವೆ. ವಿವಾದಿತ ಟಿಬೆಟ್ ಮತ್ತು ಝಿನ್‌ಜಿಯಾಂಗ್ ಪ್ರದೇಶಗಳನ್ನು ಕೂಡಿಕೊಂಡು ಶೇ. ೮ರಷ್ಟು ಜನಸಂಖ್ಯೆ ಇರುವ ಅಲ್ಪಸಂಖ್ಯಾತ ಸಮುದಾಯ ಗಳಿಗೆ ವಿಶೇಷ ಪ್ರಾತಿನಿಧ್ಯವಿದೆ. ಆದರೆ ಚೀನೀ ಭಾಷೆಯಾದ ಮ್ಯಾಂಡರಿನ್ ಚೀನಾದ ಎಲ್ಲಾ ಸಮುದಾಯಗಳು ಕಲಿಯಬೇಕು. ಪ್ರಾಥಮಿಕದಿಂದ ಸ್ನಾತಕೋತ್ತರದವರೆಗೆ ತಮ್ಮ ಭಾಷೆಯಲ್ಲಿ ಶಿಕ್ಷಣ ಪಡೆಯುತ್ತಿದ್ದ ಚೀನಿಯರು ತಮಗಾಗಿ ಭಾಷೆ-ದೇಶ ಎಂದುಕೊಂಡಿದ್ದವರು. ಇತ್ತೀಚಿನ ಜಾಗತೀಕರಣ ಮತ್ತು ಮಾಹಿತಿ ತಂತ್ರಜ್ಞಾನದಿಂದಾಗಿ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಯುತ್ತಿದ್ದಾರೆ. ಬಹುಶಃ ಇಂಗ್ಲಿಷ್ ಅವರಿಗೆ ಮೊದಲಿನಿಂದ ಇದ್ದಿದ್ದರೆ, ಭಾರತವನ್ನು ಐಟಿಯಲ್ಲಿ ಹಿಂದಕ್ಕೆ ಸರಿಸುತ್ತಿದ್ದರೆಂಬುದರಲ್ಲಿ ಅನುಮಾನವೇ ಇಲ್ಲ.

ಚೀನಾ ಬೌದ್ಧರ ದೇಶ. ಆ ದೇಶದಲ್ಲಿ ಹಿಂದಿನ ಬೌದ್ಧ ದೇವಾಲಯಗಳು ಪ್ರವಾಸಿಗರ ಸಂದರ್ಶನ ಕೇಂದ್ರಗಳಾಗಿವೆಯೇ ಹೊರತು, ಅದನ್ನೇ ಉದ್ಯೋಗ ಮಾಡಿಕೊಂಡವರು ಕಾಣುವುದಿಲ್ಲ. ಚೀನಿಯರ ಹೇಳಿಕೆಯಂತೆ "ನಾವು ಬೌದ್ಧರಾಗಿ ಬದುಕುತ್ತೇವೆ. ಆಚರಿಸು ವುದಿಲ್ಲ" ಎಂಬುದು ಹೆಚ್ಚು ಅರ್ಥಗರ್ಭಿತವಾಗಿದೆ. ಧರ್ಮವನ್ನು ರಾಜಕೀಯ ದಾಳ ಮಾಡಿಕೊಂಡ ನಮ್ಮ ರಾಜಕಾರಣ ಅವರಿಂದ ಕಲಿಯಲೇಬೇಕು.

ಭಾರತದಂತೆ ಚೀನಾ ಕೃಷಿಪ್ರಧಾನ ದೇಶ. ಶೇ. ೭೦ ಭಾಗ ಜನಸಂಖ್ಯೆ ಗ್ರಾಮೀಣ ಭಾಗದಲ್ಲಿ ವಾಸವಾಗಿದ್ದರೆ, ಶೇ. ೩೦ ಭಾಗ ನಗರೀಕರಣಗೊಂಡಿದ್ದಾರೆ. ಭಾರತದಲ್ಲೂ ಸರಿಸುಮಾರು ಇದೇ ಪ್ರಮಾಣದ ಗ್ರಾಮ-ನಗರಗಳ ಜನಸಂಖ್ಯೆಯಿದೆ. ಆದರೆ ಅಲ್ಲಿನ ನಗರಗಳ ನಿರ್ಮಾಣವನ್ನು ನಾವು ಕಲಿಯಲೇಬೇಕಾಗಿದೆ. ಕಳೆದ ಒಂದೂವರೆ ದಶಕದಲ್ಲಿ ಪುನರ್‌ನಿರ್ಮಿಸಿರುವ ನಗರಗಳನ್ನು ನೋಡಿದರೆ ಚೀನಿಯರಿಗೆ ಅಭಿವೃದ್ಧಿ ಕುರಿತಂತೆ 'ಮುನ್ನೋಟ'ವಿದೆ. ಇದು ಖಂಡಿತ ಭಾರತದಲ್ಲಿ ಕಾಣುತ್ತಿಲ್ಲ. ನಗರವೊಂದನ್ನು ನಿರ್ಮಿಸು ವಾಗ ಮುಂದಿನ ನೂರು ವರ್ಷಗಳ ದೂರದೃಷ್ಟಿಯಿಂದ ರಸ್ತೆ, ಒಳಚರಂಡಿ, ದೀಪ, ಕಟ್ಟಡಗಳ ನಿರ್ಮಾಣ ಸುವ್ಯವಸ್ಥಿತವಾಗಿದೆ. ಸಾರ್ವಜನಿಕ ಉಪಯೋಗಕ್ಕೆ ಬೇಕಾದ ಭೂಮಿ ಸ್ವಾಧೀನಕ್ಕೆ ಯಾವುದೇ ಕೋರ್ಟ್‌ಗಳು ತಡೆಯಾಜ್ಞೆ ನೀಡಿ ತಡಮಾಡುವುದಿಲ್ಲ. ಪಕ್ಷಗಳು ಬದಲಾದಂತೆ ಯೋಜನೆಗಳೇ ಬದಲಾಗುವ ಚಮತ್ಕಾರ ಅಲ್ಲಿ ನಡೆಯುವುದಿಲ್ಲ. ಸಾರ್ವಜನಿಕ ಹಿತಾಸಕ್ತಿಯಲ್ಲಿ ಸ್ವಜನ ಪಕ್ಷಪಾತ ಇಲ್ಲವೆನ್ನುವಷ್ಟು ಕಡಿಮೆ. ವಿಶಾಲ ರಸ್ತೆಗಳು, ಸೈಕಲ್ ಮತ್ತು ದ್ವಿಚಕ್ರಗಳಿಗೆ ಪ್ರತ್ಯೇಕ ಲೇನ್‌ಗಳನ್ನು ನಿರ್ಮಿಸಿ, ಜೊತೆಗೆ ವಿಶಾಲ ಫುಟ್‌ಪಾತ್ ಗಳನ್ನು ನಿರ್ಮಿಸಿದ್ದಾರೆ. ನನಗೆ ತುಂಬ ಇಷ್ಟವಾದ ಸಂಗತಿಯೆಂದರೆ, ರಸ್ತೆಬದಿಯ ಮರಗಳು. ಒಂದೇ ಎತ್ತರದ, ಒಂದೇ ರೀತಿಯ ವ್ಯತ್ಯಾಸವೇ ಕಾಣದ ಸಾಲುಮರಗಳನ್ನು ಬೆಳೆಸುವುದು ಸಾಧ್ಯವೇ ಎಂದು ಅಚ್ಚರಿಪಟ್ಟಿದ್ದೇನೆ. ಆದರೆ ಈ ಮರಗಳನ್ನು ಕಸಿಮಾಡಿ ಬೆಳೆಸಿ, ಸುಮಾರು ಹತ್ತು ವರ್ಷಗಳಷ್ಟು ಹಳೆಯ ಮರಗಳನ್ನು ರಸ್ತೆಬದಿ ನೆಟ್ಟು ಕಾಪಾಡಿಕೊಂಡಿರುವ ಪರಿಸರ ಸೌಂದರ್ಯ ಮತ್ತು ಕಾಳಜಿ, ಭಾರತದ ಯಾವ ಮೂಲೆಯಲ್ಲೂ ಕಾಣಸಿಗದು. ನಮ್ಮೆಲ್ಲ ಶಾಸಕರು ತಮ್ಮ ಪಟ್ಟಣದ ಒಂದು ರಸ್ತೆಯನ್ನಾದರೂ ಪ್ರವಾಸದ ನೆನಪಿಗೆ ಈ ರೀತಿ ನಿರ್ಮಿಸಬೇಕೆಂಬುದು ನನ್ನ ಸಲಹೆ. ಗಗನಚುಂಬಿ ಕಟ್ಟಡಗಳು ಮತ್ತು ರಸ್ತೆಗಳೇ ಅಭಿವೃದ್ಧಿ ಅಲ್ಲವೆಂದು ವಾದಿಸುವ ಅರ್ಥಶಾಸ್ತ್ರಜ್ಞರೂ ಇದ್ದಾರೆ. ಆದರೆ ಯಾವುದೇ ದೇಶದ ಅಭಿವೃದ್ಧಿ ಸೂಚ್ಯಂಕದ ನಿರ್ಧಾರ ರಸ್ತೆ, ನೀರು, ಒಳಚರಂಡಿ ಮತ್ತು ಜನಜೀವನದ ನಾಗರಿಕ ಮಟ್ಟವನ್ನು ಅವಲಂಬಿಸಿದೆ ಎನ್ನುವುದು ಸುಳ್ಳಲ್ಲ. ಮುಂದಿನ ೫೦ ವರ್ಷಗಳಾದರೂ ಕನಿಷ್ಠ ದೂರದೃಷ್ಟಿಯ ಯೋಜನೆಗಳನ್ನು ರೂಪಿಸಬೇಕು. ನಮ್ಮಲ್ಲಿ ಸರ್ಕಾರಗಳ ಅವಧಿಯನ್ನೇ ಗಮನದಲ್ಲಿಟ್ಟುಕೊಂಡು ಯೋಜನೆ ರೂಪಿಸುವ ಮುತ್ಸದ್ದಿಗಳಿಗೆ ಏನೆನ್ನಬೇಕು ? ಅವರ ತಾಳಕ್ಕೆ ಸದಾ ಗೆಜ್ಜೆಗಟ್ಟಿ ಕುಣಿಯುವ ಅಧಿಕಾರಶಾಹಿಗಳಂತೂ ನಾಚಿಕೆಬಿಟ್ಟು ನಿಂತಿದ್ದಾರೆ !

ಪರಿಸರ ಅಸಮತೋಲನ ಚೀನಾದೇಶದಲ್ಲಿ ಈಗ ಬಹು ಚರ್ಚಿತ ವಿಚಾರ. ಎಚ್ಚರಿಕೆ ಗಂಟೆ ಬಾರಿಸುವ ಮೊದಲೇ ಕಮ್ಯುನಿಸ್ಟ್ ಪಕ್ಷದ ಅತ್ಯುನ್ನತ ಸಭೆಯಲ್ಲಿ ಚರ್ಚಿಸಿ ಸಮತೋಲನ ಕಾಯ್ದುಕೊಳ್ಳಲು ಬೇಕಾದ ಹಣವನ್ನು ಮುಂದಿನ ದಶಕಕ್ಕೆ ಈಗಲೇ ಮೀಸಲಿರಿಸಿದ್ದಾರೆ. ಒಂದು ಉದಾಹರಣೆಯ ಮೂಲಕ ಚೀನಿಯರ ಶಿಸ್ತು, ಪರಿಸರ ಕಾಳಜಿಯನ್ನು ನಾವು ಕಲಿಯಬೇಕು. ಸಾವಿರಾರು ಮೈಲಿಗಳ (೨೭೦೦ ಕಿ.ಮೀ.) ದೂರ ಹರಿಯುವ ಯಾಂಗ್ಸೆ ನದಿ ಚೀನಿಯರ ಜೀವನದಿ. ಪ್ರವಾಹದಿಂದ ತೊಂದರೆ ಉಂಟುಮಾಡುತ್ತಿದ್ದ ನದಿಯನ್ನು ಉತ್ತರ-ದಕ್ಷಿಣಕ್ಕೆ ಜೋಡಿಸಿ ವ್ಯವಸಾಯ, ಕುಡಿಯುವ ನೀರಿನ ಸಮಸ್ಯೆ ಪರಿಹರಿಸಲು ಯತ್ನಿಸಿದ್ದಾರೆ. ಇದಕ್ಕಿಂತಲೂ ಮಿಗಿಲಾದದ್ದು ಈ ನದಿಯ ಪೂರ್ಣ ಹಂತದಲ್ಲೂ ಸ್ವಚ್ಛವಾಗಿ ನಿಷ್ಕಲ್ಮಶವಾಗಿ ಕಾಪಾಡಿಕೊಂಡಿರುವುದು. ಗಂಗಾನದಿಯ ಕೊಳಕನ್ನು ಕಂಡವರಿಗೆ, ಅದರ ಪಾವಿತ್ರ್ಯದ ಬಗ್ಗೆ ಭಾಷಣಗಳನ್ನು ಮಾತ್ರ ಮಾಡುವ ಭಾರತೀಯರು ಮೊದಲು ಕಲಿಯಬೇಕಾದ್ದು ಇದು ಎಂದೆನಿಸುತ್ತದೆ.

**ಜಾಗತೀಕರಣ ಮತ್ತು ಚೀನಾ**

ವಿದೇಶಿ ಬಂಡವಾಳ ಹೂಡಿಕೆದಾರರು ದೊಡ್ಡ ಪ್ರಮಾಣದಲ್ಲಿ ಚೀನಾ ಪ್ರವೇಶಿಸಿದ್ದಾರೆ. ೧೯೭೨ರಲ್ಲಿ ಪ್ರಾರಂಭಿಸಿದ ವಿದೇಶ ಬಂಡವಾಳದ ಆಹ್ವಾನಕ್ಕೆ ೧೦೦೦ ಕಂಪನಿಗಳು ೨೦ ಬಿಲಿಯನ್ ಡಾಲರ್‌ನಷ್ಟು ದೊಡ್ಡ ಮೊತ್ತ ಹೂಡಿವೆ. ಪ್ರಪಂಚದ ಬಹುದೊಡ್ಡ ಕಂಪನಿಗಳು ತಮ್ಮ ವಹಿವಾಟನ್ನು ಚೀನಾಕ್ಕೆ ವಿಸ್ತರಿಸಲು ಮುಖ್ಯಕಾರಣ, ಅವರು ನಿರ್ಮಿಸಿರುವ ಮೂಲಭೂತ ಸೌಲಭ್ಯಗಳು. ಅದಕ್ಕಿಂತಲೂ ಮಿಗಿಲಾದದ್ದು ಸರಳವಾದ, ಹೂಡಿಕೆದಾರ ಸ್ನೇಹಿ ಪರಿಸರ. ವಿದೇಶಿ ಕಂಪನಿಯೊಂದು ಪರವಾನಗಿಯನ್ನು ಅರ್ಜಿ ಸಲ್ಲಿಸಿದ ೩೦ ದಿನಗಳಲ್ಲಿ ಆದೇಶ ನೀಡಲಾಗುತ್ತದೆ. ಸ್ವದೇಶಿ ಕಂಪನಿ ಪರವಾನಗಿಯನ್ನು ಕೇವಲ ೧೦ ದಿನಗಳಲ್ಲಿ ವಿತರಿಸಲಾಗುತ್ತಿದೆ. ಹೀಗೆ ಬಂಡವಾಳ ಹೂಡಿಕೆಗೆ ಬರುವ ಕಂಪನಿಗಳಿಗೆ ನಾವು ನೀಡುತ್ತಿರುವ ಕಿರುಕುಳ, ಅಧಿಕಾರಶಾಹಿಯ ನಿರ್ಲಕ್ಷ್ಯ ಮತ್ತು ಭ್ರಷ್ಟಾಚಾರವೇ ನಮ್ಮ ದೇಶದ ತೊಂದರೆಗಳು. ಭ್ರಷ್ಟಾಚಾರಕ್ಕೆ ತಲೆದಂಡದಂತಹ ಪ್ರಧಾನ ಶಿಕ್ಷೆ ಇರುವುದಲ್ಲದೆ ಅದನ್ನು ಜಾರಿಗೊಳಿಸುವ ನೈತಿಕ ಸ್ಥೈರ್ಯ ಕೂಡ ಇದೆ. ಆದರೂ ಭ್ರಷ್ಟಾಚಾರ ಸಂಪೂರ್ಣ ನಿರ್ನಾಮವಾಗಿಲ್ಲ. ಆದರೆ ಭಾರತದಷ್ಟು ವ್ಯಾಪಕವಾಗಿಲ್ಲ. ಇವೆಲ್ಲವೂ ಅವರ ಅಭಿವೃದ್ಧಿ ಯೋಜನೆಗಳಿಗೆ ಪೂರಕವಾದ ಅಂಶಗಳಾಗಿವೆ. ಭಾರತ ಖಂಡಿತವಾಗಿ ಈ ಅಂಶಗಳನ್ನು ಚೀನಿಯರಿಂದ ಕಲಿಯಲೇಬೇಕು. ಅವರು ಹೊಸದಾಗಿ ನಿರ್ಮಿಸುವ 'ವಿಶೇಷ ಆರ್ಥಿಕ ವಲಯ' ವಿಶ್ವಕ್ಕೇ ಮಾದರಿ. ಸಣ್ಣ ಪಟ್ಟಣಗಳಲ್ಲಿ ಸಾವಿರಾರು ಎಕರೆಯಲ್ಲಿ ತೆರೆದಿರುವ ಕೈಗಾರಿಕಾ ಪ್ರದೇಶದ ಪಕ್ಕದ ೪೦೦೦ ಚ.ಕಿ.ಮೀ.ನಲ್ಲಿ ಚಾಂಗಸೌ ವಿಶ್ವವಿದ್ಯಾಲಯವಿದೆ. ಆ ಮಕ್ಕಳಿಗೆ ಈ ಕೈಗಾರಿಕಾ ವಲಯದಲ್ಲಿ ತರಬೇತಿ ನೀಡಲಾಗುತ್ತಿದೆ. ಭಾರತದಲ್ಲಿ ವಿಶೇಷವಾಗಿ ಶಾಲಾ ಕಾಲೇಜು ಮತ್ತು ವಿಶ್ವವಿದ್ಯಾಲಯಗಳು ರಾಜಕಾರಣಿಗಳ ಮರ್ಜಿಗೆ ಪ್ರಾರಂಭ ವಾಗುವುದನ್ನು ನೋಡಿದರೆ ನಿಸ್ಸಂದೇಹವಾಗಿ ಚೀನಿಯರು ನಮ್ಮ ಮಾರ್ಗದರ್ಶಕರು.

ಅಂತಿಮವಾಗಿ ಅವರ ನಗರಾಭಿವೃದ್ಧಿ ಬಗ್ಗೆ ನಮ್ಮ ಮೆಚ್ಚುಗೆ ಸೂಚಿಸಲೇಬೇಕಾಗುತ್ತದೆ. ಎಷ್ಟೇ ವಾಹನಗಳಿದ್ದರೂ ಶಾಂಘೈ ನಗರದ ಫ್ಲೈ ಓವರ್‌ಗಳು, ನದಿಯೊಳಗಿನ ಸುರಂಗ ರಸ್ತೆಗಳು ಆ ದೇಶದ ಅಭಿವೃದ್ಧಿಯ ಮಾದರಿ. ಭಾರತ ಚೀನಾದ ಅಭಿವೃದ್ಧಿ ಮಾದರಿಯನ್ನು ಸಂಕೋಚವಿಲ್ಲದೆ ಅನುಕರಿಸಬೇಕು. ಅದಕ್ಕೆ ನಮ್ಮ ಜನಪ್ರತಿನಿಧಿಗಳು ನೋಡಿದ ಮೇಲಾದರೂ ಸರ್ಕಾರಗಳ ಯೋಜನೆಗಳಲ್ಲಿ ಪಾಲ್ಗೊಂಡು ಅಭಿವೃದ್ಧಿ ವಾರಸುದಾರರಾಗಬೇಕು.

**ಡಾ॥ ಎಲ್. ಹನುಮಂತಯ್ಯ**
ಕವಿ ಮತ್ತು ಮಾಜಿ ಶಾಸಕರು, ಮ. ಸಂಖ್ಯೆ ೨೦೭ಎ, ೩ನೇ 'ಡಿ' ಅಡ್ಡರಸ್ತೆ,
೨ನೇ ಬ್ಲಾಕ್, ೩ನೇ ಘಟ್ಟ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

# ಒಂದು ಸಂಜೆಯಲಿ ನಾನು ಹೊರಗೆ ನಡೆದಾಗ...

(W. H. Auden ಅವರ "As I walked out one evening" ಕವನದ ಅನುವಾದ)

**ನಾ**ನು ಹೊರಗೆ ನಡೆದಾಗ ಒಂದು ಸಂಜೆಯಲಿ,
ನಡೆಯುತ್ತಿದ್ದಾಗ ಬ್ರಿಸ್ಟಲ್‌ನ ಬೀದಿಯಲ್ಲಿ
ಕಾಲುದಾರಿಯ ಮೇಲಿನ ಜನವೆಲ್ಲ
ಆಗಿಬಿಟ್ಟಿದ್ದರು ಸುಗ್ಗಿಯ ಗೋಧಿ ಹೊಲ.

ತುಂಬಿ ಹರಿದಿದ್ದ ನದಿಯ ದಂಡೆಯಲಿ
ರೈಲು ಹಳಿಯ ಒಂದು ಕಮಾನಿನಡಿಯಲ್ಲಿ;
ಕೇಳಿಸಿತು ಪ್ರೇಮಿಯೊಬ್ಬ ಹಾಡುತಿರುವುದು
''ಪ್ರೇಮಕ್ಕೆ ಇಲ್ಲ ಎಂದೂ ಕೊನೆ.

''ಪ್ರೀತಿಸುವೆ ನಾನಿನ್ನ ನನ್ನಿನಿಯೆ, ಪ್ರೀತಿಸುವೆ ನಿನ್ನ ನಾ,
ಸಂಧಿಸುವವರೆಗೂ ಆಫ್ರಿಕಾ ಮತ್ತು ಚೀನಾ
ನದಿ ಬೆಟ್ಟದ ಮೇಲೆ ಹಾರುವ ತನಕ
ಮತ್ತು ಸಾಲ್ಮನ್ ರಸ್ತೆಯಲಿ ಹಾಡುವ ತನಕ

''ನಿನ್ನ ನಾ ಪ್ರೀತಿಸುವೆ ಸಾಗರವ
ಮಡಿಸಿ ಒಣಗಲು ಹರವುವ ತನಕ
ಮತ್ತು ಸಪ್ತನಕ್ಷತ್ರಗಳು ಬಾತುಕೋಳಿಗಳಾಗಿ
ಆಗಸದ ತುಂಬ ಕ್ವಾಕ್ ಎನುವ ತನಕ

''ಓಡುವುವು ವರುಷಗಳು ಮೊಲಗಳಂತೆ
ಏಕೆಂದರೆ, ಹಿಡಿದಿರುವೆ ನನ್ನ ತೋಳೊಳಗೆ ನಾನು
ಯುಗಯುಗಗಳ ಆ ಹೂವನ್ನು
ಪೃಥ್ವಿಯ ಪ್ರಥಮ ಪ್ರೇಮವನ್ನು.

''ಆದರೆ ಈ ಊರಿನಲ್ಲಿ ಗಡಿಯಾರಗಳು
ಝುಯ್ಯೆಂದು ಸುತ್ತಿ ನಿನದಿಸತೊಡಗಿದವು
''ಓ ವಂಚಿಸದಿರಲಿ ಕಾಲ ನಿನ್ನ
ನೀ ಜಯಿಸಲಾರೆ ಕಾಲವನ್ನ''

''ದುಃಸ್ವಪ್ನಗಳ ಡೊಗರಿನಲ್ಲಿ
ನ್ಯಾಯ ಬೆತ್ತಲಾಗಿರುವಲ್ಲಿ
ಕಾಲ, ಮರೆಯಿಂದ ನಿರುಕಿಸುತ್ತಾನೆ
ಮತ್ತು ನೀ ಚುಂಬಿಸುವಾಗೊಮ್ಮೆ ಕೆಮ್ಮುತ್ತಾನೆ.

''ಚಿಂತೆಯಲಿ, ತಲೆಶೂಲೆಗಳಲಿ
ಮಬ್ಬಾಗಿ ಸೋರಿ ಹೋಗುವುದು ಜೀವನ.
ಕಾಲ ನಡೆಯುವನು ತನ್ನಿಷ್ಟದಂತೆ
ನಾಳೆ ಅಥವಾ ಈ ದಿನ.

''ಎಷ್ಟೊ ಹಸಿರು ಕಣಿವೆಗಳಿಂದ
ತೇಲಿಬರುವುದು ಭಯಗೊಳಿಸುವ ಹಿಮಪಾತ
ಕಾಲ ಮುರಿಯುವನು ಹೆಣೆದ ಲಾಸ್ಯವನು
ಮತ್ತು ಮುಳುಗುವವನ ಹೊಳೆವ ಬಿಲ್ಲನ್ನು

''ಓ ನೀರೊಳಗೆ ನಿನ್ನ ಕೈಗಳ ಮುಳುಗಿಸು
ಪೂರಾ ಮಣಿಕಟ್ಟಿನ ತನಕ ಮುಳುಗಿಸು
ದಿಟ್ಟಿಸು, ಹರಿವಾಣದಲಿ ದಿಟ್ಟಿಸು,
ನೀ ಕಳೆದುಕೊಂಡಿರುವುದೇನೆಂದು ಅಚ್ಚರಿಪಡು.

''ಕದ ತಟ್ಟುವುದು ನೀರ್ಗಲ್ಲು ಅಲಮಾರಿನಲಿ
ನಿಡುಸುಯ್ಯುವುದು ಮರುಭೂಮಿ ಮಂಚದಲಿ
ಬಿರುಕು ಬಾಯ್ತೆರೆಯುವುದು ಚಹದ ಬಟ್ಟಲಲಿ
ಸತ್ತವರ ನಾಡಿಗೊಂದು ಕಿರುದಾರಿಯನು.

''ಭಿಕ್ಷುಕರು ಬ್ಯಾಂಕ್ ನೋಟುಗಳ ಲಾಟರಿ ಹಾಕುವಲಿ
ದೈತ್ಯನು ಜಾಕ್‌ನಿಗೆ ಮರುಳಾಗಿರುವಲ್ಲಿ
ಅಲ್ಲಿ ಬಿಳುಪಿನ ಹುಡುಗ ಗರ್ಜಿಸುವನಾಗುವಲ್ಲಿ
ಮತ್ತು ಜಿಲ್ ಅಂಗಾತ ಉರುಳುವಲ್ಲಿ,

''ಓ ನೋಡು ನೋಡು ಕನ್ನಡಿಯಲ್ಲಿ
ಓ ನೋಡು ನಿನ್ನ ದುಃಖದಲಿ,
ನೀ ಹರಸಲಾಗದಿದ್ದರೂ ಜೀವನ
ಎಂದಿಗೂ ಉಳಿಯುವುದು ವರದಾನ.

''ಓ ನಿಲ್ಲು ನಿಲ್ಲಲ್ಲಿ ಕಿಟಕಿಯಲಿ
ಕಣ್ಣೀರು ಕುದಿದು ಹೊರಬರಲು ಚೆಲ್ಲಿ
ನಿನ್ನ ಕುಟಿಲ ನೆರೆಯವರನೂ ನೀ ಪ್ರೀತಿಸುವೆ
ನಿನ್ನ ಕುಟಿಲ ಹೃದಯದಿಂದಲೂ.''

ತಡವಾಗಿತ್ತು, ಸಂಜೆಯಲಿ ತಡವಾಗಿತ್ತು,
ಆ ಪ್ರೇಮಿಗಳು, ಅವರು ಹೋಗಿಯಾಗಿತ್ತು;
ಆ ಗಡಿಯಾರಗಳು ತಮ್ಮ ಗಂಟೆ ದನಿಗಳ
ನಿಲಿಸಿಯಾಗಿತ್ತು
ಮತ್ತು ಆ ಆಳದಾ ನದಿ ಹರಿಯುತ್ತಲೇ ಇತ್ತು.

ಅನುವಾದ : **ಎಲ್. ವಿ. ಶಾಂತಕುಮಾರಿ**
ನಂ. ೧೫೮, ೪ನೇ ಮುಖ್ಯರಸ್ತೆ
೫ನೇ ಅಡ್ಡರಸ್ತೆ, ಪಿ.ಪಿ. ಲೇಔಟ್
ಬನಶಂಕರಿ ೩ನೇ ಸ್ಟೇಜ್
ಬೆಂಗಳೂರು - ೫೬೦ ೦೮೫



ಕಾಂಟ್ ಮತ್ತು ಫಿಶ್ಟೆ
ನೀಲ ಗಗನವನೇರಿದರು
ದೂರದತಿನಿಗೂಢ ತತ್ವಗಳ
ಹುಡುಕುತ್ತ!
ನಾನಾದರೋ
ಬೀದಿಗಿಳಿಯುತ್ತೇನೆ
ಊರು ಕೇರಿ ಸುತ್ತುತ್ತೇನೆ
ಅರಸುತ್ತ ಬದುಕಿನ ಯಥಾರ್ಥಗಳ!

– ಕಾರ್ಲ್ ಮಾರ್ಕ್ಸ್

# ಕಾರ್ಮಿಕರ ಸ್ನೇಹ ಜೀವಿ ಕಾರ್ಲ್ ಮಾರ್ಕ್ಸ್ ಫ್ರೆಡರಿಕ್ ಎಂಗೆಲ್ಸ್

■

**ಎಚ್. ಕೆ. ವೆಂಕಟೇಶ**



ಕಾರ್ಲ್ ಮಾರ್ಕ್ಸ್ ಜಗತ್ತು ಕಂಡ ಅತ್ಯಂತ ಶ್ರೇಷ್ಠ ವೈಚಾರಿಕ. ಡಾರ್ವಿನ್ ಜೈವಿಕ ಪ್ರಕೃತಿಯ ವಿಕಾಸದ ನಿಯಮವನ್ನು ಅನ್ವೇಷಿಸಿದಂತೆ, ಮಾರ್ಕ್ಸ್ ಮಾನವೇತಿಹಾಸದ ವಿಕಾಸ, ವಿಚಾರವನ್ನು ಅನ್ವೇಷಿಸಿದ. ಕಲೆ, ವಿಜ್ಞಾನ, ಧರ್ಮ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ಸೌಂದರ್ಯ ಮೀಮಾಂಸೆ ಮೊದಲಾದವುಗಳನ್ನು ಬೆಂಬತ್ತಿ ಹೋಗುವುದಕ್ಕೆ ಮೊದಲು ಮಾನವ ಜನಾಂಗಕ್ಕೆ ಮೂಲಭೂತ ಅಗತ್ಯವಾಗಿರುವ ಅನ್ನ, ನೀರು, ವಸತಿ ಮತ್ತು ಬಟ್ಟೆ ಒದಗಿಸುವ ಕೆಲಸ ಮೊದಲಾಗಬೇಕು. ಜೀವನಕ್ಕೆ ಆಧಾರಪ್ರಾಯವಾಗಿರುವ ಇಂಥ ಮೂಲಭೂತ ಅನಿವಾರ್ಯತೆಗಳ ಆಧಾರದ ಮೇಲೆ ಒಂದು ರಾಷ್ಟ್ರದ, ರಾಜ್ಯದ ಕಲೆ, ಧರ್ಮ, ಆರ್ಥಿಕ ವಿಕಾಸ, ಕಾನೂನಿನ ಪರಿಕಲ್ಪನೆಗಳು ರೂಪುಗೊಳ್ಳುವುವು. ಆದುದರಿಂದ ಇದುವರೆಗೆ ಮಾಡಿಕೊಂಡು ಬಂದಿದ್ದ ಜೀವನ ಸೌಲಭ್ಯ ಉತ್ತಮಪಡಿಸುವಂಥ ವಸ್ತುಗಳ ಬೆಳಕಿನಲ್ಲಿ ವಿಚಾರ ಮಾಡುವುದು ಅನಂತರದ ವಿಷಯ. ಜೀವನಕ್ಕೆ ಮೂಲಭೂತವಾಗಿ ಬೇಕಾಗಿರುವ ವಸ್ತುಗಳ ಬೆಳಕಿನಲ್ಲಿ ಜೀವನವನ್ನು ಉತ್ತಮಪಡಿಸುವ ವಸ್ತುಗಳನ್ನು ವಿವರಿಸಬೇಕಾದ ಹೊಸಹಾದಿಯನ್ನು ತೆರೆದು ತೋರಿದವನು, ತಳಮಟ್ಟದ ಶೋಧನೆಯಿಂದ ಮೊದಲು ಮಾಡಿದ ಜೀವನ್ಮುಖಿ ವಿಚಾರಮಂಡನೆ ಮಾರ್ಕ್ಸ್‌ವಾದದ ತಿರುಳು. ಹೀಗೆ ಇದುವರೆಗೆ ಮರೆಮಾಚಲಾಗಿದ್ದ ಸತ್ಯವನ್ನು ಈತನ ಚಿಂತನೆ, ತತ್ವ ಬದಲು ಮಾಡಿತು.

ಮಾರ್ಕ್ಸ್ ಕ್ರಾಂತಿಕಾರಿ ಚಿಂತಕ. ಸಿರಿವಂತರ ಕೋಟೆಯಾದ ಬಂಡವಾಳಶಾಹಿ ಸಮಾಜವನ್ನು ಬೇರುಸಹಿತ ಕಿತ್ತೊಗೆಯುವುದು ಹಾಗೂ ಆಧುನಿಕ ಶ್ರಮಜೀವಿ ವರ್ಗದ ವಿಮೋಚನೆಗೆ ನೆರವಾಗುವುದು ಮಾರ್ಕ್ಸ್‌ರವರ ಜೀವನದ ನಿಜವಾದ ಧ್ಯೇಯವಾಗಿತ್ತು. ಈ ಬಗೆಯ ಶಿಸ್ತಿನ ಚಿಂತನೆಗೆ ಈತನೇ ಮೊದಲಿಗ. ಸಂಘಟನಾತ್ಮಕ ಹೋರಾಟವೇ ಈತನ ಉಸಿರು. ಆದುದರಿಂದಲೇ ೧೮೬೪ರಷ್ಟು ಹಿಂದೆಯೇ ಜಗತ್ತಿನ ಮೊಟ್ಟಮೊದಲ ಅಂತರರಾಷ್ಟ್ರೀಯ ಕಾರ್ಮಿಕ ಸಂಘವನ್ನು ಸ್ಥಾಪಿಸಲು ಆತ ಮುಂದಾದ.

ಮಾರ್ಕ್ಸ್ ಶ್ರೀಮಂತ ಕುಟುಂಬದಲ್ಲಿ ಜನಿಸಿದರೂ ಸಮಾಜದ ಸಾಮಾನ್ಯ ಜನರತ್ತ ತನ್ನ ಒಲವನ್ನು ಬೀರಿದ. ಕಾರ್ಮಿಕರ, ಬಡವರ ಪರವಾಗಿ ಹೋರಾಡಲು ತನ್ನ ಜೀವನವನ್ನೇ ಮುಡಿಪಾಗಿರಿಸಿದ. ದಾಸ್ ಕ್ಯಾಪಿಟಲ್‌ನಂತಹ ಅಮೂಲ್ಯ ಗ್ರಂಥಗಳ ಮೂಲಕ, ನೊಯೆ ರ್ಹೈನಿಶ್ ಜೈತುಂಗ್‌ನಂಥ ಪತ್ರಿಕೆಗಳ ಮೂಲಕ ಹಾಗೂ ಹಲವು ಸಂಘಟನೆಗಳ ಮೂಲಕ ತನ್ನ ತತ್ವದ ಅನುಸಾರ ಪ್ರಚಾರ ನಡೆಸಿದ. ಇಂಥ ಕೆಲಸ ಮಾಡುತ್ತಲೇ ೧೮೪೫, ೧೮೪೮, ೧೮೪೯ರಲ್ಲಿ ಪ್ಯಾರಿಸ್, ಬೆಲ್ಜಿಯಮ್, ಜರ್ಮನಿಯಿಂದ ಗಡಿಪಾರು ಶಿಕ್ಷೆಗೊಳಗಾದ. ಅನಂತರದಲ್ಲಿ ಲಂಡನ್‌ನಲ್ಲೇ ಉಳಿದು ಕಾರ್ಮಿಕರ ಪರವಾಗಿ ಹೋರಾಡಿದ. ಮಾರ್ಕ್ಸ್ ಕಷ್ಟ ಸಹಿಷ್ಣು. "ಮಾರ್ಕ್ಸ್ ಮತ್ತು ಅವರ ಕುಟುಂಬವನ್ನು ಬಡತನ ಕಿತ್ತು ತಿನ್ನುತ್ತಿತ್ತು. ಎಂಗೆಲ್ಸ್ ಅವರ ಸತತ ಹಾಗೂ ಸ್ವಾರ್ಥರಹಿತ ಆರ್ಥಿಕ ನೆರವು ದೊರೆಯದೆ ಹೋಗಿದ್ದರೆ ಕ್ಯಾಪಿಟಲ್ (ಬಂಡವಾಳ) ಕೃತಿಯನ್ನು ಪೂರ್ಣಗೊಳಿಸಲು ಮಾರ್ಕ್ಸ್ ಅವರಿಗೆ ಸಾಧ್ಯವಾಗದೆ ಹೋಗುತ್ತಿದ್ದುದು ಮಾತ್ರವಲ್ಲ, ಅವರು ಅನಿವಾರ್ಯವಾಗಿ ದಾರಿದ್ರ್ಯದಿಂದ ಜರ್ಜರಿತರಾಗಿಬಿಡುತ್ತಿದ್ದರು."

ಮಾರ್ಕ್ಸ್ ತಮ್ಮ ಸಂಪೂರ್ಣ ಬದುಕನ್ನು ಜನತೆಗಾಗಿ ಮುಡಿಪಿಟ್ಟಿದ್ದರು. ಮಾರ್ಕ್ಸ್ ಅವರ ಕುಟುಂಬ ಕಡುಬಡತನದಲ್ಲಿ ತೊಳಲುತ್ತಿದ್ದ ಅವಧಿಯಲ್ಲಿ ಅವರ ಮಕ್ಕಳಲ್ಲಿ ಕೆಲವರು ಬಾಲ್ಯದಲ್ಲಿಯೇ ಸಾವನ್ನಪ್ಪಿದ್ದರು. ಆದರೂ ಮಾರ್ಕ್ಸ್ ತಮ್ಮ ವೈಯಕ್ತಿಕ ಕಷ್ಟಜೀವನದಿಂದ ಬೇಸರಿಸದೆ ಕಾರ್ಮಿಕರ ಸಂಘಟನೆಗಾಗಿ ದುಡಿದರು. ಬಂಡವಾಳಶಾಹಿ ಸಮಾಜದ ಬಿಗಿಹಿಡಿತ ಮಿತಿಮೀರಿದಾಗ ಕಾರ್ಮಿಕರು ಸಂಘಟಿತರಾಗಿ ಪ್ರಭುತ್ವದ ವಿರುದ್ಧ ಹೋರಾಡುವರು. ಆಗ ಕೊಳೆತ ಅಸಮತೆ ಸೃಷ್ಟಿಸಿದ ಹಳೆಯ ಬೂರ್ಷ್ವಾ ಸಮಾಜ ನಾಶಹೊಂದುವುದು. ಅದರ ಜಾಗದಲ್ಲಿ ಸಮಾನತೆ ಇರುವ, ಕಾರ್ಮಿಕರೇ ಪ್ರಭುಗಳಾಗಿರುವ ಹೊಸ ಸಮಾಜದ ನಿರ್ಮಾಣವಾಗುವುದು ಎಂದು ಮಾರ್ಕ್ಸ್ ಕ್ಯಾಪಿಟಲ್‌ನಲ್ಲಿ ಹೇಳಿರುವರು. ಎಂಗೆಲ್ಸ್ ಹೇಳುವಂತೆ "...ಮಾರ್ಕ್ಸ್ ಅವರು ಎಲ್ಲದಕ್ಕಿಂತ ಮಿಗಿಲಾಗಿ ಕ್ರಾಂತಿಕಾರಿಯಾಗಿದ್ದರು... ಜೀವನದಲ್ಲಿ ಅವರ ನಿಜವಾದ ಉದ್ದೇಶವು ಬಂಡವಾಳಶಾಹಿ ಸಮಾಜವನ್ನು ಹಾಗೂ ಅದು ಸ್ಥಾಪಿಸಿದ್ದ ಪ್ರಭುತ್ವದ ಅಂಗಾಂಗಗಳನ್ನು ಕಿತ್ತೊಗೆಯುವುದಾಗಿತ್ತು; ಹಾಗೂ ಆಧುನಿಕ ಶ್ರಮಜೀವಿ ವರ್ಗದ... ಬಂಧವಿಮೋಚನೆಗೆ ಸಹಾಯಕವಾಗುವುದಾಗಿತ್ತು."

ಲೆನಿನ್ ಹೇಳುವಂತೆ ಯಾರ್‌ಬುಹೆರ್‌ನಲ್ಲಿನ (ಪತ್ರಿಕೆ) ಮಾರ್ಕ್ಸ್‌ರವರ ಲೇಖನಗಳು, ಅವರು ಆಗಲೇ ಒಬ್ಬ ಕ್ರಾಂತಿಕಾರಿ ಆಗಿದ್ದರು ಎಂದು ತೋರಿಸುತ್ತವೆ. ಮಾರ್ಕ್ಸ್, ಕಾರ್ಮಿಕರೇ ತಮ್ಮ ಬಿಡುಗಡೆಗಾಗಿ ಹೋರಾಡಬೇಕಾಗುವುದು ಎಂದು ತಿಳಿದಿದ್ದರು. "ಕಾರ್ಮಿಕ ವರ್ಗದ ವಿಮೋಚನೆಯು ಕಾರ್ಮಿಕ ವರ್ಗದಿಂದಲೇ ಆಗಬೇಕಾಗಿದೆ: ಕಾರ್ಮಿಕ ವರ್ಗವು ವರ್ಗಭೇದವನ್ನು, ಶೋಷಣೆಯ ಪರಿಸ್ಥಿತಿಯನ್ನು ಸಂಪೂರ್ಣ ಅಳಿಸಿ ಹಾಕಲಾಕದೆ ತನ್ನ ಸ್ವಂತ ವಿಮೋಚನೆಯನ್ನು ಸಾಧಿಸಲಾರದು. ಆದ್ದರಿಂದ ವರ್ಗ

ಮಾರ್ಕ್ಸ್ ಕ್ರಾಂತಿಕಾರಿ ಚಿಂತಕ. ಸಿರಿವಂತರ ಕೋಟೆಯಾದ ಬಂಡವಾಳಶಾಹಿ ಸಮಾಜವನ್ನು ಬೇರುಸಹಿತ ಕಿತ್ತೊಗೆಯುವುದು ಹಾಗೂ ಆಧುನಿಕ ಶ್ರಮಜೀವಿ ವರ್ಗದ ವಿಮೋಚನೆಗೆ ನೆರವಾಗುವುದು ಮಾರ್ಕ್ಸ್‌ರವರ ಜೀವನದ ನಿಜವಾದ ಧ್ಯೇಯವಾಗಿತ್ತು. ಈ ಬಗೆಯ ಶಿಸ್ತಿನ ಚಿಂತನೆಗೆ ಈತನೇ ಮೊದಲಿಗ. ಸಂಘಟನಾತ್ಮಕ ಹೋರಾಟವೇ ಈತನ ಉಸಿರು. ಆದುದರಿಂದಲೇ ೧೮೬೪ರಷ್ಟು ಹಿಂದೆಯೇ ಜಗತ್ತಿನ ಮೊಟ್ಟಮೊದಲ ಅಂತರರಾಷ್ಟ್ರೀಯ ಕಾರ್ಮಿಕ ಸಂಘವನ್ನು ಸ್ಥಾಪಿಸಲು ಆತ ಮುಂದಾದ.

ಬಂಧನದಿಂದ ಮುಕ್ತಿ ಪಡೆಯುವುದು ಮೊದಲ ಕರ್ತವ್ಯವಾಗಬೇಕು.''

ಮಾರ್ಕ್ಸ್, ಪುರಾಣದ ಪ್ರೊಮಿಥಿಯಸ್‌ನಂತೆ ಮಾನವತಾವಾದಿಯಾಗಿದ್ದ, ಮಹಾ ಸಾಹಸಿಯಾಗಿದ್ದ, ದೈವದ್ವೇಷಿಯಾಗಿದ್ದ. ಭೂಲೋಕದ ಮನುಷ್ಯರ ಕಷ್ಟ ಪರಂಪರೆ ತೊಡೆದುಹಾಕುವ ಪಣತೊಟ್ಟಿದ್ದ. ಮನುಷ್ಯ, ಪ್ರಕೃತಿಯ ಅತ್ಯುತ್ತಮ ಸೃಷ್ಟಿ. ಆದುದರಿಂದ ಮನುಷ್ಯರಲ್ಲಿ ಕೀಳುತನ ಸೃಷ್ಟಿಸುವ, ದಾಸ್ಯ ಮನೋವೃತ್ತಿ ಬೆಳೆಸುವ, ಅಸಮಾನತೆ ಇರುವ ಎಲ್ಲ ಸಂಬಂಧಗಳನ್ನು ಮೊದಲು ಕಿತ್ತೊಗೆಯಬೇಕೆಂದು ಹೇಳಿದ. ''ಇಹ ಲೋಕದ ದುರ್ಭರ ಪರಿಸ್ಥಿತಿಯನ್ನು ಮರೆಯುವುದಕ್ಕೆ ಪರಲೋಕದ ಕನಸು; ಜೀವನದಲ್ಲಿ ಎದುರಾಗುವ ಕಷ್ಟಕಾರ್ಪಣ್ಯಗಳಿಗೆ ನಿಜವಾದ ಕಾರಣವನ್ನು ಹುಡುಕದೆ ಭ್ರಾಮಕವಾದ ಸಾಂತ್ವನ ಪಡೆಯುವ ಯತ್ನವೇ ಮತ ಮತ್ತು ಧರ್ಮವಾಗುತ್ತದೆ'' ಎಂದು ವ್ಯಾಖ್ಯಾನಿಸಿದ.

ಮಾರ್ಕ್ಸ್ ಒಂದು ತತ್ವನಿಷ್ಠೆಯ ಬದ್ಧತೆಗೊಳಗಾದ ವ್ಯಕ್ತಿ. ತನ್ನ ಕುಟುಂಬ, ಆರೋಗ್ಯ, ಸಂಪತ್ತು... ಎಲ್ಲವನ್ನು ಕಳೆದುಕೊಂಡರೂ ಹೋರಾಟದ ಹಾದಿ ಬಿಡದ ಛಲಗಾರ. ''ನಾನು ನನ್ನ ಸರ್ವಸ್ವವನ್ನೂ ಕ್ರಾಂತಿಕಾರೀ ಹೋರಾಟಕ್ಕೋಸ್ಕರ ಅರ್ಪಿಸಿದ್ದೇನೆಂದು ನಿಮಗೆ ಗೊತ್ತಿದೆ. ಅದಕ್ಕೆ ನಾನೇನೂ ಪಶ್ಚಾತ್ತಾಪ ಪಡುವುದಿಲ್ಲ. ನಾನು ನನ್ನ ಜೀವನವನ್ನು ಮತ್ತೊಮ್ಮೆ ಮೊದಲಿನಿಂದ ಆರಂಭಿಸಬೇಕಾದರೆ, ತಿರುಗಿ ಹಾಗೆಯೇ ಮಾಡುವೆನು.''



ಭಾರತದ ಬಗ್ಗೆ ಮಾರ್ಕ್ಸ್ ವಿಚಾರಧಾರೆ ಹೇಗಿತ್ತು ಎಂಬುದರ ಅರಿವು ನಮಗೆ ಅತ್ಯಗತ್ಯ. ನಾವು ಇದುವರೆಗೆ ಚಿಂತಿಸಿಕೊಂಡು ಬಂದಿದ್ದ ರೀತಿಯನ್ನೇ ಬದಲಿಸಿ ಹೊಸ ದೃಷ್ಟಿಯಿಂದ ನೋಡುವ ಪರಿಯನ್ನು ಇದು ತೋರಿಸುವುದು. ''ಹಿಂದುಸ್ಥಾನದಲ್ಲಿ ಒಂದು ಸುವರ್ಣ ಯುಗ ಇದ್ದಿತೆಂದು ನಂಬುವವರ ಅಭಿಪ್ರಾಯವನ್ನು ನಾನು ಒಪ್ಪುವುದಿಲ್ಲ... (ಬಹಳ) ಹಿಂದಿನ ಕಾಲದಲ್ಲೇ ಭಾರತದ ದುರವಸ್ಥೆಯು ಆರಂಭವಾಯಿತು... ಆದರೆ ಬ್ರಿಟಿಷರು ಹಿಂದುಸ್ಥಾನಕ್ಕೆ ಉಂಟುಮಾಡಿರುವ ದುರವಸ್ಥೆಯು ಸಾರಭೂತವಾಗಿಯೇ ಬೇರೆ ತೆರನಾದದ್ದು. ಅದಕ್ಕೆ ಮುನ್ನ ಹಿಂದುಸ್ಥಾನವು ಅನುಭವಿಸಿದ್ದ ಎಲ್ಲ ಸಂಕಷ್ಟಗಳಿಗಿಂತ ಹೆಚ್ಚು ಅಪಾರವಾಗಿ ತೀವ್ರವಾದದ್ದು. ಬ್ರಿಟಿಷ್ ಆಧಿಪತ್ಯವು ಭಾರತೀಯ ಸಮಾಜದ ಇಡೀ ಚೌಕಟ್ಟನ್ನೇ ಮುರಿದು ಹಾಕಿದೆ. ಆ ಚೌಕಟ್ಟನ್ನು ಪುನರ್ನಿರ್ಮಿಸುವ ಲಕ್ಷಣಗಳಾವುವೂ ಕಾಣಬರದಂತೆ ಮುರಿದುಹಾಕಿದೆ, ಹಿಂದುಸ್ಥಾನವನ್ನು ಅದರ ಎಲ್ಲ ಪುರಾತನ ಪರಂಪರೆಗಳಿಂದಲೂ ಅದರ ಇಡೀ ಗತ ಇತಿಹಾಸದಿಂದಲೂ ಪ್ರತ್ಯೇಕಿಸಿದೆ.''

ಫ್ರೆಡರಿಕ್ ಎಂಗೆಲ್ಸ್ ಮಾರ್ಕ್ಸ್‌ನ ಸಮಕಾಲೀನ, ಪ್ರಸಿದ್ಧ ಚಿಂತಕ ಮತ್ತು ಅವನ ಒಡನಾಡಿ. ಎಂಗೆಲ್ಸ್ ಹೊರತುಪಡಿಸಿದ ಮಾರ್ಕ್ಸ್ ಸಿದ್ಧಾಂತ ಪರಿಪೂರ್ಣ ಆಗಲಾರದು. ಎಂಗೆಲ್ಸ್ ಮಾರ್ಕ್ಸ್‌ನ ಸಾಂಸಾರಿಕ ಜೀವನದಲ್ಲಿ, ಕಾರ್ಮಿಕರ ಹೋರಾಟದ ಹಾದಿಯಲ್ಲಿ... ಬದುಕಿನುದ್ದಕ್ಕೂ ಹೆಗಲಿಗೆ ಹೆಗಲು ಕೊಟ್ಟು ನಿಂತವನು. ಮಾರ್ಕ್ಸ್-ಎಂಗೆಲ್ಸ್ ಜೊತೆಯಾಗಿ ಚಿಂತಿಸಿ, ವಾದಿಸಿ ರೂಪುಕೊಟ್ಟ ಹಲವು ಕೃತಿಗಳಿವೆ. ಸಮಾನ ಮನಸ್ಕರ ಸಾಮರಸ್ಯದ ಚಿಂತನೆ ಇವು. ಕಮ್ಯೂನಿಸಂನ ವಾದದ ಉಗಮ, ಬೆಳವಣಿಗೆ, ಪ್ರಚಾರ... ಎಲ್ಲವೂ ಇವರಿಬ್ಬರ

## ಎರಡು ಗಜಲ್‌ಗಳು

(೧)

**ತೋ**ಟದ ತುಂಬಾ ಗಿಡಮರಗಳು
ಕಾಣದಾದೆ ನಾನೆಲ್ಲೂ ನೆರಳು

ಬೆಳಗುವ ದೀಪಗಳು ದಾರಿಗುಂಟ
ಕಾಣದಾದೆ ನಾ ಬೆಳಕಿನ ಕರುಳು
ಪ್ರೇಮ ಮಂದಿರ ಕಟ್ಟಬೇಕೆಂದೆ
ನೆಲವಾಗಿದೆ ಮತ್ಸರದ ಹುದುಲು
ಕಾಯುವಿಕೆ ನನ್ನ ಕಾಯಕವಾಗಿದೆ
ಅರಳಲಿಲ್ಲಿನ್ನೂ ಅನುರಾಗದರಳು
ಕೆಳಗಿದೆ ಭೂಮಿ, ಮೇಲಿದೆ ಆಕಾಶ
ಅಂತರದಿ ತೇಲುತ್ತಿದೆ ತ್ರಿಶಂಕು ಬಾಳು

(೨)

ಇಂದಿನ ಋತುಮಾನಗಳಲಿ ಇದೆಂಥ ಹೂ ಅರಳುತ್ತಿವೆ
ಸುಗಂಧದ ಬದಲು ಅವು ದುರ್ಗಂಧ ಹರಡುತ್ತಿವೆ

ಬಿತ್ತಿ ಬೆಳೆದ ಹೊಲಗಳ ತೆನೆಗಳಲಿ ಮದ್ದು ತುಂಬಿದೆ
ತೆನೆಗಳಿಂದ ಅಣುಬಾಂಬಿನ ಕಾಳುಗಳು ಉದುರುತ್ತಿವೆ

ದೇವರು, ಧರ್ಮದ ಹೆಸರಿನಲಿ ದೀಪಗಳು ಬೆಳಗುತ್ತಿವೆ
ಆ ದೀಪಗಳೇ ಬದುಕು ಸುಡುವ ಮತ್ಸರ ಜ್ವಾಲೆ ಎಬ್ಬಿಸುತ್ತಿವೆ

ಮಾನವ, ಮಾನವನ ವೈರಿಯಾಗಿ ಅಟ್ಟಹಾಸಗೈಯ್ಯುವಾಗ
ಮಾನವತೆ ಪಾತಾಳಕ್ಕಿಳಿದು ರಕ್ತ ಕಣ್ಣೀರು ಸುರಿಸುತ್ತಿದೆ



ಜಂಬಣ್ಣ ಅಮರಚಿಂತ
ನಂ. ೮-೧೧ (ಬಿ) ೭೯೬, ವಿದ್ಯಾನಗರ, ರಾಯಚೂರು - ೫೮೪ ೧೦೩

ಸಾಧನೆ. ಶ್ರಮಜೀವಿ ವರ್ಗಕ್ಕೆ ಫ್ರೆಡರಿಕ್ ಏಂಗೆಲ್ಸ್ ಅವರ ಕೊಡುಗೆಯನ್ನು ಅರ್ಥಮಾಡಿಕೊಳ್ಳುವುದೆಂದರೆ ಸಮಕಾಲೀನ ಕಾರ್ಮಿಕ ವರ್ಗದ ಚಳುವಳಿಯ ಬೆಳವಣಿಗೆಯಲ್ಲಿ ಮಾರ್ಕ್ಸ್ ಅವರ ಬೋಧನೆ ಹಾಗೂ ದುಡಿಮೆಗಳ ಮಹತ್ವಪೂರ್ಣ ಪಾತ್ರದ ಸ್ಪಷ್ಟ ಕಲ್ಪನೆಯ ತಿಳಿವು. ಈ ಇಬ್ಬರೂ ಒಂದು ಸಾಮಾನ್ಯ ಧ್ಯೇಯಕ್ಕಾಗಿ (ಕಾರ್ಮಿಕರಿಗಾಗಿ) ತಮ್ಮ ಜೀವಮಾನವನ್ನೇ ಮೀಸಲಾಗಿಟ್ಟರು.

ಜರ್ಮನಿಯ ಹೆಗೆಲ್ ಏಂಗೆಲ್ಸ್‌ಗೆ ಪ್ರಾರಂಭದಲ್ಲಿ ಪ್ರಭಾವ ಬೀರಿದ ದಾರ್ಶನಿಕ. ಶ್ರೀಮಂತ ಕೈಗಾರಿಕೋದ್ಯಮಿಯ ಮಗನಾದರೂ ಏಂಗೆಲ್ಸ್ ಕೊಳಚೆ ಪ್ರದೇಶದ ಕಾರ್ಮಿಕರ ಗೋಳಿನ ಜೀವನವನ್ನು ಅಧ್ಯಯನ ಮಾಡಿದನು, ಅನುಭವಕ್ಕೆ ತಂದುಕೊಂಡನು. 'ದಿ ಕಂಡಿಷನ್ ಆಫ್ ದಿ ವರ್ಕಿಂಗ್ ಕ್ಲಾಸ್ ಇನ್ ಇಂಗ್ಲೆಂಡ್' ಎಂಬುದು ಈತನ ಪ್ರಮುಖ ಕೃತಿ. ಮಾರ್ಕ್ಸ್‌ನ ಅನಂತರ ಬಂಡವಾಳದ ೨ ಮತ್ತು ೩ನೆಯ ಸಂಪುಟಗಳನ್ನು ಪ್ರಕಟಿಸಿದ. ಸಮಾಜ ಕುರಿತ ಈತನ ವಿಮರ್ಶಾತ್ಮಕ ನೋಟ ಹೆಚ್ಚು ಅರ್ಥವಂತಿಕೆಯಿಂದ ಕೂಡಿದೆ. ಮಾರ್ಕ್ಸ್ ದಾಸ್ ಕ್ಯಾಪಿಟಲ್‌ನ ಮೊದಲ ಸಂಪುಟ ಪ್ರಕಟಿಸಿದರೂ ಅವನ ಮರಣಾನಂತರ ಅದರ ವಿಮರ್ಶೆಯ ೨-೩ನೆಯ ಸಂಪುಟಗಳನ್ನು ಏಂಗೆಲ್ಸ್ ಸಂಪಾದಿಸಿ ಪ್ರಕಟಿಸಿದ. ದಾಖಲೆಯಾಗಿರುವ ಇದುವರೆಗಿನ ಎಲ್ಲ ಇತಿಹಾಸವೂ ವರ್ಗ ಸಂಘರ್ಷದ ಇತಿಹಾಸವೇ ಆಗಿದೆ. ಕೆಲವು ಸಾಮಾಜಿಕ ವರ್ಗಗಳು ಇನ್ನಿತರ ವರ್ಗಗಳ ಮೇಲೆ ಸಾಧಿಸಿದ ವಿಜಯದ ಮತ್ತು ಆಳ್ವಿಕೆಯ ಪರಂಪರೆಯ ಇತಿಹಾಸವೇ ಆಗಿದೆ. ವರ್ಗ ಸಂಘರ್ಷದ ಹಾಗೂ ವರ್ಗ ಪ್ರಭುತ್ವದ ತಳಪಾಯಗಳು ಅವ್ಯವಸ್ಥಿತ ಸಾಮಾಜಿಕ ಉತ್ಪಾದನೆ ಮತ್ತು ಖಾಸಗಿ ಆಸ್ತಿಪಾಸ್ತಿಗಳು ಕಾಣದಾಗುವವರೆಗೆ ಇದು ಹೀಗೆಯೇ ಮುಂದುವರೆಯುತ್ತದೆ. ಮಾರ್ಕ್ಸ್ ಮತ್ತು ಏಂಗೆಲ್ಸ್ ಅವರ ಸಾಧನೆಯ ಸಾರ ಇದು. ''ಕಾರ್ಮಿಕ ವರ್ಗಕ್ಕೆ ತನ್ನನ್ನು ತಾನು ಅರಿತುಕೊಳ್ಳುವಂತೆ ಹಾಗೂ ತನ್ನ ವರ್ಗ ಪ್ರಜ್ಞೆಯನ್ನು ಬೆಳೆಸಿಕೊಳ್ಳುವಂತೆ ಅವರು ತಿಳಿಯ ಹೇಳಿದರು : ಕನಸಿಗೆ ಬದಲಾಗಿ ವಿಜ್ಞಾನವನ್ನು ತಂದಿರಿಸಿದರು.''

ಏಂಗೆಲ್ಸ್ ಅವರ ನಿಜವಾದ ಸಾಮರ್ಥ್ಯ ಮಾರ್ಕ್ಸ್ ಸಾವಿನ ಅನಂತರ ಸಾಬೀತಾಯಿತು. ನಾಯಕತ್ವ ವಹಿಸುವ ಸಾಮರ್ಥ್ಯ, ಕಾರ್ಮಿಕರನ್ನು ಮುನ್ನಡೆಸುವ ಛಲ... ಮಾರ್ಕ್ಸ್ ಇಲ್ಲದಿದ್ದರೂ ಅವರ ಆಪ್ತಮಿತ್ರನಿಂದ ಇದು ಸಾಧ್ಯವಾಯಿತು. ಮಾರ್ಕ್ಸ್ ಪ್ರಾರಂಭಿಸಿದ್ದ ಬಂಡವಾಳ ಕುರಿತ ಕೃತಿ ಸಂಪುಟಗಳ ಸಂಪೂರ್ಣ ಕೆಲಸ ಇವರ ಅದ್ಭುತ ಸಾಧನೆ. ಇಂಥ ಏಂಗೆಲ್ಸ್ ಸಾವು ಮಾನವ ಜಗತ್ತಿಗೆ ಆದ ಅಪಾರ ನಷ್ಟ. ಎನ್.ಎ. ನೆಕ್ರಸೋವ್ ಅವರ 'ಇನ್ ಮೆಮೊರಿ ಆಫ್ ದೊಬ್ರೊಲ್ಯುಬೊವ್' ಎಂಬ ಕವನದ ಈ ಸಾಲುಗಳು ಏಂಗೆಲ್ಸ್ ಅವರ ವ್ಯಕ್ತಿತ್ವಕ್ಕೆ ಹಿಡಿದ ದೀಪದ ಬೆಳಕುಗಳು, ಶ್ರದ್ಧಾಂಜಲಿಯ ಸಾರ್ಥಕ ರೂಪಗಳು.

*ನಂದಿಹೋಯಿತು ಎಂಥ ವಿವೇಕದ ಜ್ಯೋತಿ !*

*ನಿಂತುಹೋಯಿತು ಎಂಥ ಹೃದಯದ ಮಿಡಿತ* (ಸಮಕಾಲೀನರ ದೃಷ್ಟಿಯಲ್ಲಿ ಮಾರ್ಕ್ಸ್ ಮತ್ತು ಏಂಗೆಲ್ಸ್, ಪುಟ ೧೩)

ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡರಿಕ್ ಏಂಗೆಲ್ಸ್ ಕಾರ್ಮಿಕರ ಬದುಕಿಗಾಗಿ ತಮ್ಮ ಬದುಕನ್ನು ಪಣವಿಟ್ಟು ಹೋರಾಡಿದ ವೀರರು. ಜರ್ಮನಿ, ಫ್ರಾನ್ಸ್, ಇಂಗ್ಲೆಂಡ್... ಮುಂತಾದ ದೇಶಗಳ ಕಾರ್ಮಿಕರ ಜೀವನ ಸುಧಾರಣೆಗಾಗಿ ಪ್ರಾರಂಭಿಸಿದ ಇವರ ಚಳುವಳಿ ಅನಂತರ ವಿಶ್ವವ್ಯಾಪಿಯಾಯಿತು. ಬಂಡವಾಳ ಕೃತಿಯಲ್ಲಿ ಭಾರತದ ವಿಚಾರವೂ ಉಕ್ತವಾಗಿರುವುದು ಇಲ್ಲಿ ಉಲ್ಲೇಖನೀಯ. ಬಂಡವಾಳಶಾಹಿ ಪ್ರಭುತ್ವವನ್ನು ನಾಶಗೊಳಿಸಿ ಕಾರ್ಮಿಕರ ನೇತೃತ್ವದ ಹೊಸ ಸಮಾಜದ ಸ್ಥಾಪನೆ ಇವರ ಪರಮೋದ್ದೇಶ. ''ಉತ್ಪಾದನಾ ಸಾಧನಗಳ ಮೇಲೆ ಖಾಸಗಿ ಒಡೆತನವಿಲ್ಲದ ಸಮಾಜ ಮಾತ್ರವೇ ಬಡತನವಿಲ್ಲದ ಸಮಾಜವಾಗಲು ಸಾಧ್ಯ. ಕಾರ್ಮಿಕ ವರ್ಗದ ನೇತೃತ್ವ ಮುಖೇನ ಮಾನವ ಕುಲದ ವಿಮೋಚನೆಯನ್ನು ಸಾಧಿಸಿ ಭವ್ಯವಾದ ಹೊಸ ಸಮಾಜದ ನಿರ್ಮಾಣದ ಪಣತೊಟ್ಟ ಕ್ರಾಂತಿಕಾರಿಗಳು ಮಾರ್ಕ್ಸ್ - ಏಂಗೆಲ್ಸ್.''

ಮಾರ್ಕ್ಸ್ ಅವರನ್ನು ನೆನೆಯದೇ ಏಂಗೆಲ್ಸ್ ಅವರ ಬಗೆಗಾಗಲೀ, ಏಂಗೆಲ್ಸ್ ಅವರನ್ನು ನೆನೆಯದೆ ಮಾರ್ಕ್ಸ್ ಅವರ ಬಗೆಗಾಗಲೀ ಆಲೋಚಿಸುವುದು ಸಾಧ್ಯವೇ ಇಲ್ಲ. ಮಾರ್ಕ್ಸ್ ಮತ್ತು ಏಂಗೆಲ್ಸ್‌ರ 'ಮ್ಯಾನಿಫೆಸ್ಟೊ ಆಫ್ ದಿ ಕಮ್ಯುನಿಸ್ಟ್ ಪಾರ್ಟಿ' ಇಂದಿಗೂ ಶ್ರಮಜೀವಿ ವರ್ಗಕ್ಕೆ ಸ್ಫೂರ್ತಿಯನ್ನು ನೀಡುತ್ತಿದೆ, ಮಾರ್ಗದರ್ಶನ ಮಾಡುತ್ತಿದೆ. ಅವರ ಕೆಲವು ನುಡಿಮುತ್ತುಗಳನ್ನು ನೆನಪಿಸಿಕೊಳ್ಳುವುದು ಇಂದಿಗೂ ಪ್ರಸ್ತುತ.

''ಈವರೆಗೆ ನಡೆದಿದ್ದ ಎಲ್ಲ ಕ್ರಾಂತಿಗಳೂ ಅಲ್ಪಸಂಖ್ಯಾಕ ವರ್ಗಗಳ ಹಿತಾಸಕ್ತಿಗಳನ್ನು ಸಂರಕ್ಷಿಸುವುದಕ್ಕೋಸ್ಕರ ನಡೆದಿದ್ದವು... ಆದರೆ ಸಮಾಜವಾದೀ ಕ್ರಾಂತಿಯೊಂದಿಗೆ ಬಹುಸಂಖ್ಯಾಕರ ಹಿತಾಸಕ್ತಿಗಳನ್ನು ಮುಂದೊತ್ತುವುದಕ್ಕೆ ನಿರ್ಣಾಯಕ ಕಾರ್ಯಕ್ರಮ ಕೈಗೊಳ್ಳುವ ಕಾಲಘಟ್ಟ ಆರಂಭವಾಗುತ್ತದೆ... ಅದರೊಂದಿಗೆ ಇತಿಹಾಸವನ್ನು ಜನತೆಯು ಪ್ರಜ್ಞಾಪೂರ್ವಕವಾಗಿ ರೂಪಿಸುವ ಯುಗ ಉದಯವಾಗುತ್ತದೆ !'' – ಕಾರ್ಲ್ ಮಾರ್ಕ್ಸ್

''ಬಲಪ್ರಯೋಗವು ಹೊಸ ಸಮಾಜವೊಂದನ್ನು ಗರ್ಭದೊಳಗೆ ಧರಿಸಿರುವ ಪ್ರತಿಯೊಂದು ಹಳೆಯ ಸಮಾಜದ ಸೂಲಗಿತ್ತಿಯಾಗಿದೆ. ಅಂಥ ಬಲವೇ ಒಂದು ಆರ್ಥಿಕ ಶಕ್ತಿಯಾಗಿದೆ.'' – ಕಾರ್ಲ್ ಮಾರ್ಕ್ಸ್

''ಇದು ನಿಶ್ಚಿತ : ಮಾನ್ಯರೇ, ನಿಮ್ಮ
ದಾಸನಾಗಿ ನನ್ನ ದುಃಸ್ಥಿತಿಯನ್ನು
ಕಳೆದುಕೊಳ್ಳುವ ಇಚ್ಛೆ ಸರ್ವಥಾ ನನಗಿಲ್ಲ!'' – ಕಾರ್ಲ್ ಮಾರ್ಕ್ಸ್

ಬಂಡವಾಳಶಾಹೀ ಸಮಾಜವು ನನ್ನನ್ನೊಂದು ಹಣ ಸೃಷ್ಟಿಸುವ ಯಂತ್ರವನ್ನಾಗಿ ಮಾರ್ಪಡಿಸಲು ಸರ್ವಥಾ ಬಿಡಲಾರೆ.'' – ಕಾರ್ಲ್ ಮಾರ್ಕ್ಸ್

ಒಬ್ಬ ವ್ಯಕ್ತಿಯನ್ನು ಇನ್ನೊಬ್ಬ ವ್ಯಕ್ತಿ ಶೋಷಣೆ ಮಾಡುವುದನ್ನು ಕೊನೆಗಾಣಿಸುವುದಕ್ಕೆ ಸಮಸಮನಾಗಿ ಒಂದು ರಾಷ್ಟ್ರವನ್ನು ಮತ್ತೊಂದು ರಾಷ್ಟ್ರವು ಶೋಷಣೆ ಮಾಡುವುದನ್ನು ಕೊನೆಗಾಣಿಸಲಾಗುತ್ತದೆ. ಒಂದು ರಾಷ್ಟ್ರದೊಳಗೆ ವರ್ಗಗಳ ಸಂಘರ್ಷವು ಮರೆಯಾಗುವುದಕ್ಕೆ ಅನುಗುಣವಾಗಿ ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರದ ವಿರೋಧವಾಗಿ ವರ್ತಿಸುವುದೂ ಕೊನೆಗಾಣುತ್ತದೆ. – ಮಾರ್ಕ್ಸ್ ಮತ್ತು ಏಂಗೆಲ್ಸ್

**ಎಚ್. ಕೆ. ವೆಂಕಟೇಶ**
ಸಂಶೋಧಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬





ದಿನಾಂಕ ೨.೧೦.೨೦೦೭ರಂದು ಬೆಂಗಳೂರಿನ 'ನಯನ' ಸಭಾಂಗಣದಲ್ಲಿ ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ 'ಗಾಂಧಿ ಕಗ್ಗೊಲೆ – ಕಾರಣ ಪರಿಣಾಮ' (ಕೋ. ಚೆನ್ನಬಸಪ್ಪ), ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ (ಕೆ. ಎಸ್. ಪಾರ್ಥಸಾರಥಿ), ಯಾದ್ ವಶೇಮ್ (ನೇಮಿಚಂದ್ರ) ಮತ್ತು ಮುದ್ರಕನ ಸಾಹಿತ್ಯ ನಂಟು (ಶೇಷನಾರಾಯಣ) ಈ ನಾಲ್ಕು ಕೃತಿಗಳ ಲೋಕಾರ್ಪಣೆ ಕಾರ್ಯಕ್ರಮ ಪ್ರೊ|| ಜಿ.ಕೆ. ಗೋವಿಂದರಾವ್ ಅವರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ಜರುಗಿತು. ಶ್ರೀ ಎಚ್. ಎಸ್. ದೊರೆಸ್ವಾಮಿಯವರು ಪುಸ್ತಕ ಅನಾವರಣಗೊಳಿಸಿದರು.

# ವಾಸ್ತುಶಿಲ್ಪದ ಮೂಲಕ ಧರ್ಮ

ಸಾಂಪ್ರದಾಯಿಕ ಇಸ್ಲಾಮಿನಲ್ಲಿ ಮಸೀದಿ ಹಾಗೂ ದರ್ಗಾ ಸಂಸ್ಕೃತಿಗಳ ನಡುವೆ ತಾತ್ವಿಕ ಜಗಳಗಳಿವೆ. ಆರಂಭದ ಹಂತದಲ್ಲಿ ಇವು ಜತೆಯಲ್ಲಿರಲಿಲ್ಲ. ಕಾಲಕ್ರಮೇಣ ತಮ್ಮ ನಡುವಣ ವೈರುಧ್ಯಗಳನ್ನು ಕಡಿಮೆಗೊಳಿಸಿಕೊಂಡು ಅಕ್ಕಪಕ್ಕದಲ್ಲಿ ನೆಲೆಸತೊಡಗಿದವು; ಅಂದರೆ ಸೂಫಿಸಂತರ ಸುತ್ತ ಬೇರುಬಿಟ್ಟಿರುವ ಜನರ ನಂಬಿಕೆ ಆಚರಣೆಗಳನ್ನು ಕಿತ್ತುಹಾಕುವುದು ಅಸಾಧ್ಯವೆಂದು ಅರಿತು ನಮಾಜು ಸಂಸ್ಕೃತಿಯ ಮಸೀದಿಯೇ ದರ್ಗಾದ ಹತ್ತಿರ ಬಂದವೋ, ಅಧಿಕಾರಸ್ಥವಾದ ನಮಾಜು ಸಂಸ್ಕೃತಿಯ ವಿರೋಧ ಕಟ್ಟಿಕೊಂಡು ಬದುಕುವುದು ಕಷ್ಟ ಎಂಬ ಸತ್ಯ ಮನಗಂಡು ದರ್ಗಾಗಳೇ ಇವನ್ನು ಹತ್ತಿರ ತಂದುಕೊಂಡವೋ, ಅಥವಾ ಎರಡೂ ಸಂಪ್ರದಾಯಗಳು ವಿರೋಧವಿಲ್ಲದೆ ಜತೆಯಲ್ಲಿ ಬದುಕಬಹುದು ಎಂಬ ಹೊಂದಾಣಿಕೆ ಆಯಿತೋ ಖಚಿತವಾಗುವುದಿಲ್ಲ. ಒಟ್ಟಿನಲ್ಲಿ ಪ್ರಾಚೀನ ದರ್ಗಾಗಳ ಪಕ್ಕ ಆಧುನಿಕವಾದ ಮಸೀದಿಗಳು ಬಂದು ಕೂಡಿಕೊಂಡವು. ಈ ವಾಸ್ತುರಚನೆಗಳ ಹೊಂದಾಣಿಕೆಯು ಬಹುದೀರ್ಘ ಕಾಲದ ಸಂಘರ್ಷದ ಬಳಿಕ ಸಂಭವಿಸಿದೆ.

---

**ಡಾ|| ರಹಮತ್ ತರೀಕೆರೆ**



**ತುಂ**ಗಭದ್ರೆಯ ಉತ್ತರಕ್ಕಿರುವ ಕರ್ನಾಟಕದಲ್ಲಿ ಆಶೂರಖಾನಾ, ದರ್ಗಾ ಹಾಗೂ ಮಸೀದಿ ಎಂದು ಕರೆಯಲಾಗುವ ಮೂರು ವಾಸ್ತುರಚನೆಗಳಿವೆ. ಅವೆಂದರೆ (ಅ) ಸೂಫಿಸಂತರ ಸಮಾಧಿಗಳಿರುವ ದರ್ಗಾಗಳು, (ಆ) ಮೊಹರಂ ಅಥವಾ ಅಲಾಯಿ 'ದೇವರು'ಗಳನ್ನು ಕೂರಿಸುವ ಆಶೂರಖಾನಾಗಳು, (ಇ) ದಿನನಿತ್ಯ ಐದು ಹೊತ್ತು ನಮಾಜು ಮಾಡುವ ಜಾಗವೇ ಮಸೀದಿ ಹಾಗೂ ವರುಷದಲ್ಲಿ ಎರಡು ಸಲ ಮಾತ್ರ ರಂಜಾನ್ ಮತ್ತು ಬಕ್ರೀದ್ ಹಬ್ಬಗಳಲ್ಲಿ ಇಡೀ ಊರಿನ ಮುಸ್ಲಿಮರು ಸೇರಿ ನಮಾಜು ಮಾಡುವ ಈದಗಾಗಳು. ಮಸೀದಿಗಳು ಊರೊಳಗಿರುತ್ತವೆ. ಈದಗಾಗಳು ಸಾಮಾನ್ಯವಾಗಿ ಊರ ಹೊರಗಿರುತ್ತವೆ. (ಕೆಲವು ಊರು ಬೆಳೆದಂತೆ ಊರೊಳಗೆ ಬಂದಿರುವುದುಂಟು. ಆಗ ಅವುಗಳ ಮೈದಾನವು ಬೆಲೆಬಾಳುವ ಜಾಗವಾಗಿರುವುದು ದೊಡ್ಡ ಸಂಘರ್ಷಗಳಿಗೆ ಕಾರಣವಾಗಿದೆ. ಹುಬ್ಬಳ್ಳಿಯ ಈದಗಾ ಮೈದಾನ ಇದಕ್ಕೆ ಉದಾಹರಣೆ.) ಮೂರು ವಾಸ್ತುರಚನೆಗಳು ಇಸ್ಲಾಂ ಧರ್ಮದ ಮೂರು ಮುಖ್ಯ ಧಾರೆಗಳ ಸಂಕೇತಗಳು. ದರ್ಗಾಗಳು ಸೂಫಿ ಅನುಭಾವ ಪರಂಪರೆಯನ್ನೂ, ಮೊಹರಂ ಕಟ್ಟಡಗಳು ಶಿಯಾಗಳು ಆರಂಭಿಸಿದ ಕರ್ಬಲಾ ಯುದ್ಧದ ಶೋಕಾಚರಣೆಯನ್ನೂ, ಮಸೀದಿಗಳು ಮೂಲಭೂತ ಇಸ್ಲಾಮಿನ ನಮಾಜು ಸಂಸ್ಕೃತಿಯನ್ನೂ ಪ್ರತಿನಿಧಿಸುತ್ತವೆ. ದರ್ಗಾ ಹಾಗೂ ಮೊಹರಂ ಆಚರಣೆಗಳಲ್ಲಿ ಕೆಲವು ಮುಸ್ಲಿಮರು ಹೋಗುವುದಿಲ್ಲ. ಆದರೆ ಸಮಾಜದ ಮುಸ್ಲಿಮೇತರರು, ಅದರಲ್ಲೂ ಕೆಳಸ್ತರದ ಹಿಂದೂಗಳು ಹೋಗುತ್ತಾರೆ. ಮುಸ್ಲಿಂ ಮಹಿಳೆಯರು ಹೋಗುತ್ತಾರೆ. ಆದರೆ ನಮಾಜು ಮಾಡುವ ಮಸೀದಿಗೆ ಕೇವಲ ಮುಸ್ಲಿಮರು, ಅದರಲ್ಲೂ ಗಂಡಸರು ಮಾತ್ರ ಹೋಗುತ್ತಾರೆ.

ಈ ಮೂರು ಕರ್ನಾಟಕ ಸಮಾಜವು ಇಸ್ಲಾಂ ಧರ್ಮ, ಸೂಫಿ ಪಂಥ ಹಾಗೂ ಮುಸ್ಲಿಂ ಸಂಸ್ಕೃತಿಯನ್ನು ಬರಮಾಡಿರುವ ಬಗೆಯನ್ನು, ಬದುಕಗೊಟ್ಟಿರುವ ರೀತಿಯನ್ನು ಹಾಗೂ ಇದರಿಂದ ಉಂಟಾಗಿರುವ ವಿಶಿಷ್ಟತೆಯನ್ನು ಸೂಚಿಸುವ ಮಹತ್ವದ ಆಕರಗಳು. ಈಗ ಇವುಗಳಲ್ಲಿ ಸಂಭವಿಸುತ್ತಿರುವ ಪರಿವರ್ತನೆಗಳು ಕರ್ನಾಟಕದ ಇಸ್ಲಾಮಿನಲ್ಲಿಯೂ ಮುಸ್ಲಿಮರಲ್ಲಿಯೂ ಆಗುತ್ತಿರುವ ಪರಿವರ್ತನೆಯ ಸ್ವರೂಪವನ್ನೂ ಸೂಚಿಸುವಂತಿವೆ. ಅದನ್ನು ಕುರಿತ ಟಿಪ್ಪಣಿಯಿದು.

ಜಗತ್ತಿನಾದ್ಯಂತ ವಾಸ್ತುಶಿಲ್ಪದ ಪ್ರಯೋಗಕ್ಕೆ ಹಲವು ವಿಚಾರಗಳ ಧರ್ಮಗಳು ಪ್ರೇರಕವಾಗಿವೆ. ಅದರಲ್ಲೂ ಇಸ್ಲಾಮಿನಲ್ಲಿ ಅದರ ಪ್ರೇರಣೆಗೆ ಒಂದು ವಿಶಿಷ್ಟ ಕಾರಣವಿದೆ. ನಿರ್ಗುಣ ರೂಪಿಯಾದ ಏಕದೇವರನ್ನು ನಂಬುವ ಇಸ್ಲಾಂ ತಾತ್ವಿಕವಾಗಿ ವಿಗ್ರಹಾರಾಧನೆಯನ್ನು ನಿಷೇಧಿಸಿಕೊಂಡಿದೆ. ಆದರೆ ಬಹುದೇವತಾರಾಧನೆ ಇರುವ ಹಾಗೂ ಮೂರ್ತಿಪೂಜೆ ಇರುವ ಸಮಾಜಗಳಲ್ಲಿ ಅದು ಬದುಕುವಾಗ, ಅದಕ್ಕೆ ತನ್ನ ಮೂರ್ತಿಶಿಲ್ಪ ನಿಷೇಧದ ಕಟ್ಟುಪಾಡನ್ನು ಪಾಲಿಸುವುದು ಕಷ್ಟವಾಯಿತು. ಆಗ ಅದು ತನ್ನ ವ್ಯಕ್ತಿಪ್ರತಿಭೆ ಮತ್ತು ಸಾಮುದಾಯಿಕ ಕುಶಲತೆಯನ್ನು ಬೇರೆಬೇರೆ ರೂಪಗಳಲ್ಲಿ ವ್ಯಕ್ತಮಾಡತೊಡಗಿತು. ಅದರಲ್ಲಿಯೂ ಚಿತ್ರಕಲೆ ಹಾಗೂ ವಾಸ್ತುಶಿಲ್ಪಗಳಲ್ಲಿ ಪ್ರಕಟಿಸಿತು. ಈ ಹಿನ್ನೆಲೆಯಲ್ಲಿ ಇಂಡೋ-ಸಾರ್ಸೆನಿಕ್ ಎಂದು ಕರೆಯಲಾಗುವ ಇಸ್ಲಾಮಿಕ್ ವಾಸ್ತುಶೈಲಿಯು ಜಗತ್ತಿನಾದ್ಯಂತ ಬೆಳೆಯಿತು. ಭಾರತೀಯ ಸಂಸ್ಕೃತಿಗೆ ಇಸ್ಲಾಮಿನ ಕೊಡುಗೆಯ ವಿಷಯ ಬಂದಾಗ ಹೆಚ್ಚಿನ ವಿದ್ವಾಂಸರು ವಾಸ್ತುಕಲೆಯಲ್ಲಿ ಹುಡುಕಲು ಬಯಸುವುದಕ್ಕೆ ಇದೂ ಒಂದು ಕಾರಣ. ಇದರಲ್ಲಿ ಕೋಟೆಗಳು, ಅರಮನೆಗಳು, ಮಹಲುಗಳು, ಜಲತಾಣಗಳು, ಮಸೀದಿಗಳು, ದರ್ಗಾಗಳು, ಸೂಫಿ ಸಂತರು ವಾಸಿಸುವ ಖಾನಖಾ (ಮಠ)ಗಳು, ವಿದ್ಯಾಪೀಠಗಳು, ಮೀನಾರುಗಳು ಸೇರಿವೆ. ಕಮಾನು, ಮೀನಾರು, ಗುಂಬಜಗಳು ಇದರ ಮುಖ್ಯ ಲಕ್ಷಣಗಳು.

ಭಾರತದ ಇಸ್ಲಾಮಿಕ್ ವಾಸ್ತುಶಿಲ್ಪವನ್ನು ಅಧ್ಯಯನ ಮಾಡುವಲ್ಲಿ ಎರಡು ಪ್ರಮುಖ ದೃಷ್ಟಿಕೋನಗಳಿವೆ : (೧) ನಿರ್ದಿಷ್ಟ ಧರ್ಮದ ಮೂಲಭೂತ ತತ್ವಗಳು, ಅದರ ಧರ್ಮಶಾಸ್ತ್ರಗಳು, ವಾಸ್ತುಶಿಲ್ಪದ ಸ್ವರೂಪವನ್ನು ರೂಪಿಸುತ್ತಿವೆ ಮತ್ತು ನಿಯಂತ್ರಿಸುತ್ತವೆ ಎಂಬ ನೆಲೆಯಿಂದ ನೋಡುವ ದೃಷ್ಟಿಕೋನ. ಇದು ಉಳ್ಳವರು ಮತ್ತು ಅಧಿಕಾರಸ್ಥರು ಕಟ್ಟಿಸಿರುವ ಕಟ್ಟಡಗಳನ್ನು ಮುಖ್ಯವಾಗಿ ಗಮನಿಸುತ್ತದೆ. ಇಸ್ಲಾಮಿಕ್ ಶೈಲಿಯು ಹೇಗೆ ಮಧ್ಯ ಏಶಿಯಾದಿಂದ ಬಂದಿತು, ಅದರಲ್ಲಿ ಹೇಗೆ ಹಲವು ಬಗೆಯ ಇಮಾರತುಗಳು ಮೂಡಿದವು ಎಂಬುದನ್ನು ಇದು ವಿಶ್ಲೇಷಿಸುತ್ತದೆ. ಉದಾಹರಣೆಗೆ, ಬೀದರಿನ ಮಹಮೂದ್ ಗವಾನ ವಿಶ್ವವಿದ್ಯಾಲಯದ ಮುಂದಿನ

ಮಿನಾರುಸ್ತಂಭವು ಮಧ್ಯ ಏಶಿಯಾದ ಯಾವ ದೇಶದಲ್ಲಿರುವ ಮೀನಾರಿನ ಮಾದರಿಯಲ್ಲಿದೆ, ಗೋಳ ಗುಂಬಜವು ಯಾವ ಮಾದರಿಯಲ್ಲಿದೆ ಎಂದು ತೌಲನಿಕವಾಗಿ ಹುಡುಕುವುದು. ಇದು ಸಂಸ್ಕೃತಿಯನ್ನು ಆಮದಾಗಿ ಬಂದು ನೆಲೆಸಿದೆ ಎಂದು ನೋಡುವ ಕಥನ. ಇದನ್ನು ಸಂಸ್ಕೃತಿಯ ಸ್ಥಾವರವಾದಿ ಕಥನ ಎನ್ನಬಹುದು. ಬಿಜಾಪುರ, ಗುಲಬರ್ಗಾ, ಬೀದರ್, ಶ್ರೀರಂಗಪಟ್ಟಣ ಮುಂತಾದ ರಾಜಕೀಯ ಕೇಂದ್ರಗಳಲ್ಲಿ ಇರುವ ಕೋಟೆ, ಮಸೀದಿ, ದರ್ಗಾ, ಅರಮನೆಗಳ ವಾಸ್ತುಶಿಲ್ಪವನ್ನು ಕುರಿತು ಬಂದಿರುವ ಬಹುತೇಕ ಕ್ಲಾಸಿಕಲ್ ಅಧ್ಯಯನಗಳು ಇಂತಹವು. ಈ ಅಧ್ಯಯನಗಳು ವಾಸ್ತುಶಿಲ್ಪಕ್ಕೆ ಮಾತ್ರವಲ್ಲ, ಇಸ್ಲಾಮಿಗೆ ಸಂಬಂಧಿಸಿದ ಧರ್ಮ, ತತ್ವ, ಕಲೆ, ಭಾಷೆ, ಸಂಸ್ಕೃತಿ ಹಾಗೂ ಕಡೆಯಲ್ಲಿ ಜನರನ್ನು ಸಹ ಅವುಗಳ 'ಮೂಲ' ಮಾದರಿಗಳ ಜತೆ ಹೋಲಿಸಿ ನೋಡಲು ಯತ್ನಿಸುತ್ತವೆ. ಈ ಬಗೆಯ ಹುಡುಕಾಟಕ್ಕೆ ದೇಶೀಯ ವಿದೇಶೀಯ ಎಂದು ವಿಭಜಿಸಿ ನೋಡುವ ಬಲಪಂಥೀಯ ರಾಜಕಾರಣದ ಸಾಂಸ್ಕೃತಿಕ ಚಿಂತನೆಗಳೂ ಕೆಲಮಟ್ಟಿಗೆ ಕಾರಣ.

ಅಧಿಕಾರಸ್ಥ ರಾಜಕಾರಣದ ಭಾಗವಾಗಿ ಹುಟ್ಟುವ ಕಲೆ, ಭಾಷೆ, ಸಂಸ್ಕೃತಿ ಹಾಗೂ ಧರ್ಮಗಳ ಹಿಂದೆ ಕ್ಲಾಸಿಕಲ್ ಎನ್ನಬಹುದಾದದ್ದರ ಪ್ರಭಾವಗಳು ಇರುತ್ತವೆ. ಅವು ತಮ್ಮ 'ಮೂಲ'ದ್ದೆನ್ನುವ ಲಕ್ಷಣಗಳನ್ನು ಉಳಿಸಿಕೊಂಡಿರುತ್ತವೆ ಎಂಬ ವಾದದಲ್ಲಿ ನಿಜವಿದೆ. ಆದರೆ ಇಲ್ಲಿ 'ಮೂಲ'ವೆನ್ನಲಾಗುವ ಪ್ರಭಾವಗಳು ಅಳಿಸಲಾಗದ ಬರೆಹದಂತೆ ನಿರ್ಣಾಯಕವಾಗಿ ಕೆಲಸ ಮಾಡುತ್ತವೆ ಎಂದು ಭಾವಿಸಲಾಗುವುದು ಮಾತ್ರ ಸಮಸ್ಯಾತ್ಮಕವಾಗಿದೆ. ಯಾಕೆಂದರೆ, ಹೊರಗಿನಿಂದ ಬಂದಿದ್ದು ತಾನು ವಲಸೆಹೋದ ಕಡೆ ನೆಲೆನಿಲ್ಲುವಾಗ, ಪಡೆವ ರೂಪಾಂತರಗಳನ್ನು ಇದು ಗಮನಿಸುವುದಿಲ್ಲ. ಯಾವುದೇ ಜೀವಂತ ಜನಸಮುದಾಯವು, ತಾನು ಬೇರೆಡೆಯಿಂದ ಪಡೆದಿದ್ದನ್ನು ಬಾಯಿಪಾಠ ಒಪ್ಪಿಸುವ ಗಿಳಿಯಂತೆ ಪುನರುಕ್ತಿ ಮಾಡುವುದಿಲ್ಲ. ತನ್ನ ಒಳ ಅಗತ್ಯ ಹಂಬಲಗಳಿಗೆ ತಕ್ಕಂತೆ ಅದನ್ನು ರೂಪಾಂತರಿಸಿಕೊಳ್ಳುತ್ತದೆ; ಹೀಗೆ ರೂಪಾಂತರ ಮಾಡುವಾಗ ಅನೇಕ ರೀತಿಯ ಪ್ರತಿರೋಧ, ಸಂಘರ್ಷ, ಹೊಂದಾಣಿಕೆಗಳನ್ನು ಮಾಡಿಕೊಳ್ಳುತ್ತದೆ. ಅನೇಕ ಕಾಲಗಳಲ್ಲಿ ಹಲವು ತಲೆಮಾರುಗಳು ತೊಡಗಿಕೊಂಡು ತಮ್ಮ ಸಂಸ್ಕೃತಿಯನ್ನು ರೂಪಿಸುತ್ತವೆ. ಆ ಸಂಸ್ಕೃತಿಗೆ ಸಂಬಂಧಿಸಿದ ಒಂದು ಪದ, ವಾಸ್ತುಶಿಲ್ಪ, ತತ್ವದರ್ಶನ, ಧರ್ಮ, ಹಾಡು, ಪುರಾಣ ಅಥವಾ ಆಚರಣೆ ಇರಬಹುದು; ಅವು ಆಯಾ ನಾಡಿನ ವಿಶಾಲ ಜನಸಮುದಾಯದ ಸಂಸ್ಕೃತಿಯೊಳಗೆ ಮರುಹುಟ್ಟು ಪಡೆಯುತ್ತವೆ. ಹೀಗೆ ಚಿಂತಿಸುವ ನೆಲೆಯನ್ನು ಸಂಸ್ಕೃತಿಯ ಚಲನಶೀಲವಾದಿ ಕಥನ ಎನ್ನಬಹುದು. ಈ ರೂಪಾಂತರವನ್ನು ಚಾರಿತ್ರಿಕವಾಗಿ ಮಾತ್ರವಲ್ಲ, ಸಾಂಸ್ಕೃತಿಕವಾದ ಸೂಕ್ಷ್ಮತೆಯಲ್ಲಿ ಕಾಣಬೇಕಾಗುತ್ತದೆ. ಆದರೆ ಕ್ಲಾಸಿಕಲ್ ಅಧ್ಯಯನಗಳ ದೃಷ್ಟಿಗೆ ಸ್ಥಾವರವಾದ ಸ್ವೀಕಾರ ಮಾಡುವ ಸಮುದಾಯದ ಸೃಷ್ಟಿಶೀಲತೆಯ ಹುಡುಕಾಟ ಮುಖ್ಯವಾಗುವುದಿಲ್ಲ.

ವಾಸ್ತುಶಿಲ್ಪದಲ್ಲಿ ಮೂಲ-ರೂಪಾಂತರ, ಕ್ಲಾಸಿಕಲ್-ಜನಪದ ಎಂಬ ವಿಂಗಡಣೆ ಮಾಡಬಹುದು. ಆದರೂ ವಾಸ್ತವದಲ್ಲಿ ಇವೆರಡೂ ಚರಿತ್ರೆಯ ಪ್ರವಾಹದಲ್ಲಿ ಒಟ್ಟಿಗೆ ಹರಿದು ಕಲಸಿಕೊಂಡಿವೆ. ಇದನ್ನು ಸಾಂಸ್ಕೃತಿಕ ಸಂಕರ ಎನ್ನಬಹುದು. ಬಿಜಾಪುರದ ಗೋಳಗುಮ್ಮಟವು ಪರ್ಶಿಯಾದಿಂದ ಬಂದ ಇಸ್ಲಾಮಿಕ್ ಶೈಲಿಯಲ್ಲಿ ಇರಬಹುದು. ಆದರೆ ಅವನ್ನು ಕಟ್ಟಿಸಿದ ದೊರೆ ಮತ್ತು ಕಟ್ಟಿದ ಕೆಲಸಗಾರರು ಬಿಜಾಪುರದವರು ಎಂಬುದು ಅದರಲ್ಲಿ ಗುಣಾತ್ಮಕವಾದ ಬದಲಾವಣೆಗಳನ್ನು ತಂದುಬಿಡುತ್ತದೆ. ವ್ಯಂಗ್ಯವೆಂದರೆ, ಇಸ್ಲಾಮಿಕ್ ಸಂಸ್ಕೃತಿಯ ಆಕ್ರಮಣವನ್ನು ದಕ್ಷಿಣದಲ್ಲಿ ತಡೆಗಟ್ಟಲು ಕೋಟೆಯಂತೆ ಹುಟ್ಟಿದ ಹಿಂದೂ ಸಾಮ್ರಾಜ್ಯ ಎಂದು ಮತೀಯವಾದಿ ಇತಿಹಾಸಕಾರರು ವ್ಯಾಖ್ಯಾನಿಸುವ ವಿಜಯನಗರವು ಇಸ್ಲಾಮಿಕ್ ವಾಸ್ತುವಿನ ರಚನೆಗಳಿಂದ ತುಂಬಿಹೋಗಿದೆ. ಆದರೆ ವಿಜಯನಗರದ ಅರಸರು ಮುಸ್ಲಿಮರಿಗೆ ಕಟ್ಟಿಸಿಕೊಟ್ಟಿರುವ ಮಸೀದಿಗಳು ಸ್ಥಳೀಯ ಮಂಟಪಗಳಂತೆಯೇ ಇವೆ.

ಇದಕ್ಕೆ ಪ್ರತಿಯಾಗಿ, ಉತ್ತರ ಕರ್ನಾಟಕದ ಮೂಲೆ ಹಳ್ಳಿಯಲ್ಲಿರುವ ಒಂದು ಮಸೀದಿಯು, ಆ ಪರಿಸರದಲ್ಲಿ ಸಿಗುವ ವಸ್ತುಗಳಿಂದಲೇ, ಆ ಹಳ್ಳಿಯ ಮನೆಗಳ ವಾಸ್ತುವಿನಲ್ಲಿಯೇ ರೂಪುಗೊಂಡಿರಬಹುದು. ಎಷ್ಟೋ ಸಲ ಜಿಲ್ಲಾ ಕೇಂದ್ರದ ಪಟ್ಟಣವನ್ನು ನೋಡದಷ್ಟು ತಮ್ಮ ಊರಿಗೆ ಸೀಮಿತವಾಗಿ ಬದುಕುವ ಕೆಲಸಗಾರರು ಅದರ ನಿರ್ಮಾಣದಲ್ಲಿ ಭಾಗವಹಿಸಿರಬಹುದು. ಆದರೆ ಅವರು ಕಟ್ಟಡದ ಎರಡೂ ಬದಿಗೆ ಮೊಳದುದ್ದ ಮೊಗ್ಗು ಅಣಬೆಯಂತಿರುವ ಎರಡು ಮೀನಾರುಗಳನ್ನು ನಿಲ್ಲಿಸಿದ ಕೂಡಲೇ ಮಧ್ಯ ಏಶಿಯಾದ ವಾಸ್ತುಶಿಲ್ಪದ ಲಕ್ಷಣವನ್ನು ಅದರೊಳಗೆ



ಆವಾಹನೆ ಮಾಡಿಬಿಡುತ್ತಾರೆ. ಆದ್ದರಿಂದ ವಾಸ್ತುವಿನಲ್ಲಿ ಕ್ಲಾಸಿಕಲ್ ಹಾಗೂ ಜಾನಪದ ಎಂಬುವು ಪರಸ್ಪರ ಮೈ ಮಿಲಾಯಿಸುವ ಸಂಗತಿಗಳಾಗಿಯೇ ಕೆಲಸ ಮಾಡುತ್ತವೆ.

ಆದರೆ ಕರ್ನಾಟಕದ ಜಾನಪದ ಅಧ್ಯಯನಗಳಲ್ಲಿ ವಿಶ್ವಾತ್ಮಕತೆ ಮತ್ತು ಸ್ಥಳೀಯತೆಗಳು, ಕ್ಲಾಸಿಕಲ್ ಮತ್ತು ದೇಶೀಯತೆಗಳು ಕೂಡಿ ಹೊಸ ಹೊಸ ಸಂಕರಗಳನ್ನು ಹುಟ್ಟಿಸಿದೆ. ಅದನ್ನು ಅರಿಯಲು ಬೇಕಾದ ವಿಧಾನಗಳು ಕನ್ನಡದಲ್ಲಿ ಇನ್ನೂ ನಿರ್ಮಾಣವಾಗಬೇಕಿದೆ. ಚರಿತ್ರೆಯ ದೊಡ್ಡ ಸಾಂಸ್ಕೃತಿಕ ಸಾಧನೆಗಳ ಹಿಂದೆ ದೇಶೀಯ ಪ್ರತಿಭೆಯ ಕೈವಾಡವನ್ನು ನೋಡುವ ದೇಶೀಯವಾದೀ ದೃಷ್ಟಿಕೋನವೊಂದು ಕನ್ನಡದಲ್ಲಿದೆ. ಇದು ಕೆಲವೊಮ್ಮೆ ಅಭಿಜಾತವಾದದ್ದನ್ನು ತನ್ನ ಎದುರಾಳಿಯಾಗಿ ಇಟ್ಟುಕೊಂಡು ಎಲ್ಲವೂ ಇಲ್ಲಿಂದ ಹೋಗಿದ್ದು ಎಂದು ವಾದಿಸುತ್ತದೆ. ಕೀಳರಿಮೆಯನ್ನು ಮೀರುವ ಹಾಗೂ ಚರಿತ್ರೆಯ ಹಕ್ಕುದಾರಿಕೆ ಪಡೆದುಕೊಳ್ಳುವ ಕೆಳವರ್ಗ ಹಾಗೂ ಕೆಳಜಾತಿಗಳ ಸಾಂಸ್ಕೃತಿಕ ರಾಜಕಾರಣದ ತುಡಿತಗಳು ಈ ವಾದದ ಹಿಂದೆ ಕೆಲಸ ಮಾಡುತ್ತಿರಬಹುದು. ಎಲ್ಲವೂ ವಿದೇಶದಿಂದ ಬಂದದ್ದು ಎಂಬುದು ಒಂದು ಅತಿಯಾದರೆ, ಎಲ್ಲವನ್ನೂ ಸ್ಥಳೀಯ ಮೂಲದಿಂದ ನೋಡುವುದು ಇನ್ನೊಂದು ಅತಿ. ಎಲ್ಲ ಅತಿ ಮತ್ತು ಹಠಗಳು ಸರಳೀಕರಣ ಮಾಡುತ್ತವೆ. ಹೀಗಾಗಿ ಮೂಲದ ನೆರಳುಗಳನ್ನು ಹುಡುಕುವ ಕ್ಲಾಸಿಕಲ್ ಅಧ್ಯಯನಗಳಾಗಲೀ, ಎಲ್ಲವನ್ನೂ ನೆಲದೊಡಲಿನಿಂದಲೇ ಹುಟ್ಟಿಸುವ ದೇಶೀವಾದಿ ಅಧ್ಯಯನಗಳಾಗಲೀ ಸಂಸ್ಕೃತಿ ವಿಶ್ಲೇಷಣೆಯಲ್ಲಿ ಅಷ್ಟು ಉಪಯುಕ್ತವಲ್ಲ.

ಈ ಹಿನ್ನೆಲೆಯಲ್ಲಿ ಕರ್ನಾಟಕದ ಜನಪದ ಇಸ್ಲಾಮಿನ ಧಾರ್ಮಿಕ ವಾಸ್ತುಶಿಲ್ಪದ ಪ್ರಮುಖ ಮಾದರಿಗಳು (ದರ್ಗಾ, ಮೊಹರಂ ಮಸೀದಿ ಹಾಗೂ ನಮಾಜು ಮಾಡುವ ಮಸೀದಿ ಮತ್ತು ಈದಗಾಗಳು) ಮೇಲುನೋಟಕ್ಕೆ ಒಂದೇ ಬಳ್ಳಿಯ ಕುಡಿಗಳು ಎಂಬಂತೆ ತೋರುತ್ತವೆ. ಆದರೆ ಹಿಂದೆ ಸೂಚಿಸಿದಂತೆ ಇವು ತಾತ್ವಿಕವಾಗಿ ಧರ್ಮದ ಬೇರೆ ಬೇರೆ ನೆಲೆಗಳನ್ನು ಪ್ರತಿನಿಧಿಸುತ್ತವೆ ಮಾತ್ರವಲ್ಲ, ಇವುಗಳ ಒಳಗೆ ಬಗೆಹರಿಯದ ಸಂಘರ್ಷಗಳೂ ಇವೆ. ಪ್ರತಿದಿನ ೫ ಹೊತ್ತು ನಮಾಜು ಮಾಡಬೇಕು ಎಂಬ ಇಸ್ಲಾಮಿನ ಮೂಲಭೂತ ಶರತ್ತುಗಳ ಪ್ರತೀಕವಾದ ಮಸೀದಿಗಳು ಸಾಂಪ್ರದಾಯಿಕ ಇಸ್ಲಾಂನಲ್ಲಿ ಬಹಳ ಆಳವಾಗಿ ನೆಲೆಯೂರಿರುವ ಶಕ್ತಿಕೇಂದ್ರಗಳು. (ಆದರೆ ವರುಷಕ್ಕೆರಡು ಬಾರಿ ನಮಾಜು ನಿರ್ವಹಿಸಲು ಅಡ್ಡಗೋಡೆಯಂತೆ ಆಸರೆಯಾಗುವ ಈದಗಾಗಳು ಉಳಿದ ೩೬೩ ದಿನಗಳಲ್ಲಿ ಸಾರ್ವಜನಿಕ ಬಳಕೆಗೆ ಬರುವ ಪರಿಯು ಕುತೂಹಲಕರ. ಹುಬ್ಬಳ್ಳಿಯ ಈದಗಾದ ಸುತ್ತ ಬಾಡಿಗೆ ಕಾರುಗಳು ನಿಂತರೆ, ಚಾಮರಾಜಪೇಟೆಯ ಈದಗಾದಲ್ಲಿ ಕುರಿ ದನಗಳ ಮಾರಾಟ ನಡೆಯುತ್ತದೆ. ಅವು ಸಾರ್ವಜನಿಕವಾಗಿ ನಮಾಜು ಮಾಡುವ ಜಾಗಗಳಾಗಿರುವುದಕ್ಕೂ ಸಾರ್ವಜನಿಕ ಬಳಕೆಯಾಗುವುದಕ್ಕೂ ಸಂಬಂಧವಿದೆ.) ಆದರೆ ಸೂಫಿಗಳ ಅನುಭಾವ ಹಾಗೂ ದರ್ಗಾ ಸಂಸ್ಕೃತಿಗಳು ಸಾಂಪ್ರದಾಯಿಕ ಇಸ್ಲಾಮಿನಲ್ಲಿ ಅತ್ಯಂತ ವಿವಾದಗ್ರಸ್ತ ವಿಷಯಗಳಾಗಿವೆ. ಸಾಂಪ್ರದಾಯಿಕ ನಮಾಜು ಸಂಸ್ಕೃತಿಯು ಇದನ್ನು ಮೂರ್ತಿಪೂಜೆಗೆ ಸಮಾನ ಎಂದು ಕಟುವಾಗಿ ಟೀಕಿಸುತ್ತದೆ; ಜನಪ್ರಿಯ ಸೂಫಿಸಂತನಾದ ಅಬ್ದುಲ್ ಖಾದರ್ ಜೀಲಾನಿಯ ಹೆಸರಲ್ಲಿ ಕರ್ನಾಟಕದಲ್ಲಿರುವ ಸಹಸ್ರಾರು ತೋರುಗದ್ದಿಗೆಗಳು ಸಹ ಸೂಫಿಸಂಪ್ರದಾಯಕ್ಕೆ ಸೇರುತ್ತವೆ. (ಹಸಿರು ಬಾವುಟ ಕಟ್ಟಿದ ಬೇವಿನಮರದ ಬುಡದಲ್ಲಿ ದೀಪದ ಗೂಡಿರುವ ಈ

ತೋರುಗದ್ದುಗೆಗಳು ಉತ್ತರ ಕರ್ನಾಟಕದ ಪ್ರತಿ ಊರಲ್ಲೂ ಇವೆ.) ಇವನ್ನು ಸಂಪ್ರದಾಯವಾದಿಗಳು ವೃಕ್ಷಪೂಜೆ ಎಂದು ಟೀಕಿಸುತ್ತಾರೆ.

ಮೊಹರಂ ಮಸೂತಿ ಎನ್ನಲಾಗುವ ಆಶೂರಖಾನಾಗಳು ಇನ್ನೊಂದು ನೆಲೆಯವು. ಇವು ಊರ ಮಧ್ಯದಲ್ಲಿರುವ ಚಚ್ಚೌಕದ ಬಾಗಿಲಿಲ್ಲದ ಕಟ್ಟಡಗಳು. ಇದರಲ್ಲಿ ಮೊಹರಂ ಆಚರಣೆಗೆ ಸಂಬಂಧಿಸಿದ ದೇವರುಗಳನ್ನು ಅವಕ್ಕೆ ಸುತ್ತುವ ಬಣ್ಣದ ಬಟ್ಟೆಗಳನ್ನು ತುಂಬಿದ ಒಂದು ಪೆಟ್ಟಿಗೆಯನ್ನು ತೂಗುಹಾಕಲಾಗಿರುತ್ತದೆ. ಮೊಹರಂ ಮೂಲತಃ ಮಹಮದ್ ಪೈಗಂಬರರನ್ನು ಕೊನೆಯ ಪ್ರವಾದಿಯನ್ನಾಗಿ ಒಪ್ಪದಿರುವ ಶಿಯಾ ಸಂಪ್ರದಾಯಕ್ಕೆ ಸೇರಿದ ಆಚರಣೆಯಾಗಿದ್ದು, ಇದನ್ನು ನಮಾಜು ಸಂಸ್ಕೃತಿಯ ಸುನ್ನಿ ಮುಸ್ಲಿಮರು ನಿರಾಕರಿಸುತ್ತಾರೆ.

ಮುಸ್ಲಿಮರೆಂದರೆ ಜಗತ್ತಿನಾದ್ಯಂತ ಏಕರೂಪಿಯಾಗಿ ಬದುಕುವವರು ಎಂಬ ಗ್ರಹಿಕೆಗೆ ಈ ತಾತ್ವಿಕ ವೈರುಧ್ಯಗಳು ಸೋಜಿಗ ಬರಿಸಬಹುದು. ಆದರೆ ಮೇಲುತೋರಿಕೆಗೆ ಒಂದೇ ಎಂಬಂತೆ ಕಾಣುವ ಧಾರ್ಮಿಕ ವಾಸ್ತುವಿನ ಈ ಮೂರು ಮಾದರಿಗಳು ಇಸ್ಲಾಮಿನ ಏಕರೂಪೀ ಗ್ರಹಿಕೆಯನ್ನು ಒಡೆಯುತ್ತವೆ. ಈ ಮಾದರಿಗಳು ವಾಸ್ತುಕಲೆಯ ಒಳವೈವಿಧ್ಯ ಆಯಾ ಪ್ರಾದೇಶಿಕ ವಿಶಿಷ್ಟತೆಯನ್ನು ಮಾತ್ರವಲ್ಲದೆ, ಇವುಗಳ ಭಾಗವಾಗಿ ಬೆಳೆದಿರುವ ವಿಭಿನ್ನ ಆಚರಣಾ ಲೋಕವನ್ನೂ ಒಳಗೊಂಡಿವೆ.

ಕ್ಲಾಸಿಕಲ್ ಪರಂಪರೆಯ ಇಂಡೋ-ಸಾರ್ಸೆನಿಕ್ ಶೈಲಿಯ ಮಸೀದಿಗಳು ಇಡೀ ಭಾರತದಲ್ಲಿ ಇರುವಂತೆ ಕರ್ನಾಟಕದಲ್ಲೂ ಇವೆ. ಬಹಮನಿಗಳೂ ಆದಿಲ್‌ಶಾಹಿ ಕುತುಬ್‌ಶಾಹಿ ಮುಂತಾದ ಸುಲ್ತಾನರೂ, ಸವಣೂರು, ಶ್ರೀರಂಗಪಟ್ಟಣ, ಶಿರಾ ಮುಂತಾದ ಕಡೆಯಿದ್ದ ನವಾಬರೂ ಸ್ಥಳೀಯ ಅಧಿಕಾರಿಗಳೂ ಇವನ್ನು ಕಟ್ಟಿಸಿದರು; ಬಿಜಾಪುರದ ಸುಪ್ರಸಿದ್ಧ ಜುಮ್ಮಾ ಮಸೀದಿ, ಗುಲಬರ್ಗಾದ ಕೋಟೆ ಮಸೀದಿ ಅಥವಾ ಶ್ರೀರಂಗಪಟ್ಟಣದ ಮಸೀದಿ ಇದಕ್ಕೆ ಉದಾಹರಣೆಗಳು. ಇವೆಲ್ಲವೂ ಕೋಟೆಯ ಒಳಗಿವೆ ಎನ್ನುವುದಕ್ಕೂ ಅವು ರಾಜಪ್ರಭುತ್ವದಿಂದ ಮಾನ್ಯತೆ ಪಡೆದಿದ್ದವು ಎನ್ನುವುದಕ್ಕೂ ನೇರ ಸಂಬಂಧವಿದೆ. ಆದರೆ ಸಣ್ಣಪುಟ್ಟ ಹಳ್ಳಿಗಳಲ್ಲಿ ಇರುವ ಮಸೀದಿಗಳಲ್ಲಿ ಜನಪದ ವಾಸ್ತುಶಿಲ್ಪದ ಕೈವಾಡವಿರುತ್ತದೆ. ಇವನ್ನು ಜನ ತಮ್ಮ ಮನೆಗಳನ್ನು ಕಟ್ಟುವ ಮಾದರಿಗಳಲ್ಲೇ ನಿರ್ಮಿಸಿಕೊಳ್ಳುತ್ತಾರೆ. ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಮೇಲ್ಮುದ್ದೆ ಹಾಕಿ ಮಾಡಿದ ಮಾಳಿಗೆಯ ಮಸೀದಿಗಳಿವೆ. ಹೆಚ್ಚು ಮಳೆಬೀಳುವ ಮಲೆನಾಡು ಮತ್ತು ಕರಾವಳಿ ಭಾಗದಲ್ಲಿ ಅಲ್ಲಿಯ ಪ್ರಾದೇಶಿಕ ವಾಸ್ತುವಿನಂತೆ ಹೆಂಚಿನಲ್ಲಿ ಕಟ್ಟಲ್ಪಟ್ಟಿವೆ. ಮೈಸೂರು ಭಾಗದಲ್ಲಿ ಕರಿಹೆಂಚಿನ ಮಸೀದಿಗಳೂ ಇವೆ. ವಿಜಯ ವಿಠಲ ಗುಡಿಗೆ ಹೋಗುವ ದಾರಿಯಲ್ಲಿರುವ ವಿಜಯನಗರದ ಕಟ್ಟಿಗೆಖಾನನ ಮಸೀದಿಯು ಮಂಟಪದ ರಚನೆಯಾಗಿದೆ. ಅಂದರೆ ಚಚ್ಚೌಕದ ಕಲ್ಲುಕಂಬಗಳ ಮಂಟಪದ ಮೇಲೆ ಕಲ್ಲುಚಪ್ಪಡಿಗಳ ಛಾವಣಿ ಹಾಕಿ ಮೇಲೆ ಗಾರೆಗಚ್ಚನ್ನು ಲೇಪಿಸಿದೆ. ಅದರ ಪ್ರವೇಶದ್ವಾರದ ಮೇಲೆ ದೊರೆ ಪ್ರೌಢದೇವ ರಾಯನಿಗೆ ಒಳಿತನ್ನು ಹಾರೈಸುವ ಕನ್ನಡ ಶಾಸನವಿದೆ. ಈ ಮಸೀದಿಯು ಪುರಂದರ ಮಂಟಪದಂತೆ ಇರುವುದು ಹಾಗೂ ಮಹಾನವಮಿ ದಿಬ್ಬ ಹಾಗೂ ಹಜಾರ ರಾಮಸ್ವಾಮಿ ಗುಡಿಯ ಪಕ್ಕದ ಕಮಲ ಮಹಲ್ ಮುಂತಾದ ಕಟ್ಟಡಗಳು ಇಸ್ಲಾಮಿಕ್ ವಾಸ್ತುಕಲೆಯಲ್ಲಿರುವುದು ಮಾರ್ಮಿಕವಾಗಿದೆ. ವಿಜಯನಗರದ ಮುಸ್ಲಿಮರು ಮಸೀದಿಯನ್ನು ಇಸ್ಲಾಮಿಕ್ ವಾಸ್ತುವಿನಲ್ಲಿ ಕಟ್ಟಿಕೊಳ್ಳಬೇಕೆಂದು ಹಠ ಮಾಡಿದಂತಿಲ್ಲ. ಈ ಸಂಕರಕ್ಕೆ ಇನ್ನೊಂದು ಕಾರಣ ಅಭಿಜಾತ ಮಾದರಿಯಲ್ಲಿ ಕಟ್ಟಲು ಬೇಕಾದ ಮೂಲವಸ್ತುಗಳು ಅವರ ಪರಿಸರದಲ್ಲಿ ಇಲ್ಲದಿರುವುದೂ ಅಥವಾ ಅದನ್ನು ಕಟ್ಟುವ ಕಾಲಕ್ಕೆ ಇಸ್ಲಾಮಿಕ್ ವಾಸ್ತುಶೈಲಿಯಲ್ಲಿ ಕಟ್ಟುವ ಕೆಲಸಗಾರರು ಸಿಗದಿರುವುದೂ ಕಾರಣ ಇರಬಹುದು. ಎಲ್ಲಿ ಧರ್ಮದ ಆಚರಣೆಗಳು ನಿತ್ಯ ಬದುಕಿನಿಂದ ಬೇರೆಯಾದ ವಿಶಿಷ್ಟ ಚಟುವಟಿಕೆ ಆಗಿಲ್ಲವೋ ಅಲ್ಲಿ ಮಸೀದಿಗಳು ವಾಸದ ಮನೆಯಂತೆಯೇ ಇರುತ್ತವೆ. ಆದರೆ ಕೆಲವು ಕಡೆ ದೊರೆಗಳು ಕಟ್ಟಿಸಿದ ಬೃಹದಾಕಾರದ ಮಸೀದಿಗಳು ಬಳಕೆಯಾಗದೆ ಪಾಳುಬಿದ್ದಿರುತ್ತವೆ.

ಸೂಫಿ ದರ್ಗಾಗಳಲ್ಲಿ ಕೂಡ ಮಸೀದಿಗಳಲ್ಲಿ ಇರುವಂತೆ ಜನಪದ ಹಾಗೂ ಕ್ಲಾಸಿಕಲ್ ವಾಸ್ತುಗಳಿವೆ. ರಾಜರನ್ನು, ದೊಡ್ಡ ಅಧಿಕಾರಿಗಳನ್ನು ಭಕ್ತರನ್ನಾಗಿ ಪಡೆದ ಸಂತರ ಗೋರಿಗಳ ಮೇಲೆ ಭಾರಿ ಗಾತ್ರದ ಕ್ಲಾಸಿಕಲ್ ಶೈಲಿಯ ದರ್ಗಾಗಳು ನಿರ್ಮಾಣವಾದವು. ಅವುಗಳ ಪಕ್ಕದಲ್ಲಿ ಖಾನಖಾಗಳು ಇದ್ದವು. ಗುಲಬರ್ಗಾದ ಬಂದೇನವಾಜ್ ದರ್ಗಾ ಮತ್ತು ಖಾನಖಾ ಒಟ್ಟಿಗೆ ಇವೆ. (ಖಾನಖಾ ಎಂದರೆ ಸೂಫಿಮಠ. ದರ್ಗಾದ ಪಕ್ಕದಲ್ಲಿ ಸೂಫಿ ಗುರುವೂ ಅವನ ಶಿಷ್ಯರೂ ಅತಿಥಿಗಳೂ ಉಳಿದುಕೊಳ್ಳಲು ಇರುವ ಕಟ್ಟಡ.) ಆದರೆ ಕರ್ನಾಟಕದ ನೂರಾರು ಸೂಫಿಸಂತರ ದರ್ಗಾಗಳಿಗೆ ಈ ಭಾಗ್ಯ ಸಿಗಲಿಲ್ಲ. ಬಹಳಷ್ಟು ದರ್ಗಾಗಳು ತೆರೆದ ಬಯಲಿನಲ್ಲಿವೆ. ಗೋರಿಯ ಮೇಲೆ ನೆರಳಿಗೆ ಮರ, ಬಂದ ಭಕ್ತರಿಗೆ ಉಳಿದುಕೊಳ್ಳಲು ತೆರೆದ ಮಂಟಪಗಳಿರುವ ಮುಸಾಫಿರ್‌ಖಾನಾಗಳು. ಉದಾಹರಣೆಗೆ, ಬಳ್ಳಾರಿ ಸಮೀಪದ ಸುಪ್ರಸಿದ್ಧ ಹೊನ್ನೂರಿನ ಹೊನ್ನೂರುಸ್ವಾಮಿ ಹಾಗೂ ಲಕ್ಷ್ಮೇಶ್ವರದ ದೂದಪೀರಾ, ಹುಲಗೂರಿನ ಹಜರೇಶಾ ಇವರ ದರಗಾ ಸಂಕೀರ್ಣಗಳು. ಹುಲಗೂರಿನ ಹಜರೇಶಾ ತನ್ನ ಮೇಲೆ ಯಾವುದೇ ಕಟ್ಟಡ ಕಟ್ಟಬಾರದು ಎಂದು ಅಪ್ಪಣೆ ಮಾಡಿದ್ದಾನೆ ಎಂದು ಭಕ್ತರು ಹೇಳಿದರು. ನಿಜಸಂಗತಿಯೆಂದರೆ ದರ್ಗಾಗಳಿಗೆ ಬರುವ ಭಕ್ತರು ಬಡವರಾದ ಕಾರಣದಿಂದ ಕೂಡ ಭಾರೀ ದರ್ಗಾ ಕಟ್ಟಲಾಗಿರುವುದಿಲ್ಲ. ಒಂದೊಮ್ಮೆ ಕಟ್ಟಿದರೆ ಆಯಾ ಪ್ರದೇಶದ ಮನೆ ವಾಸ್ತುವಿನಲ್ಲಿಯೇ ಸರಳವಾಗಿ ಕಟ್ಟಲಾಗುತ್ತದೆ.

ಕೆಲವು ಕಡೆ ಗುಹಾ ದರ್ಗಾಗಳೂ ಇವೆ. ಇವು ನೈಸರ್ಗಿಕ ಬಂಡೆಗಲ್ಲಿನ ಗುಹೆಗಳಲ್ಲಿವೆ. ನಾಥ ದತ್ತ ಅವಧೂತ ಸಹವಾಸ ಪಡೆದಿದ್ದ ಸಂತರು, ತಾವು ಯೋಗಾಚರಣೆಗೆ ಆಯ್ದುಕೊಂಡಿದ್ದ ಗುಹೆಗಳಲ್ಲಿಯೇ ಸಮಾಧಿಗೊಂಡರು. ಹಾಸನ ಜಿಲ್ಲೆಯ ಬಾಣಾವರದಲ್ಲಿ ಹಾಗೂ ಬಾಬಾಬುಡನ್‌ಗಿರಿಯಲ್ಲಿ ಗುಹಾದರ್ಗಾಗಳಿವೆ. ಈ ಗುಹಾದರ್ಗಾದ ಸೂಫಿಗಳು ತಮ್ಮ ಜೀವಿತಕಾಲದಲ್ಲಿ ರಾಜಪ್ರಭುತ್ವದ ಹೊರಗೆ ಬದುಕಿದವರು ಎಂಬುದು ಗಮನಾರ್ಹ.

ಸಾಂಪ್ರದಾಯಿಕ ಇಸ್ಲಾಮಿನಲ್ಲಿ ಮಸೀದಿ ಹಾಗೂ ದರ್ಗಾ ಸಂಸ್ಕೃತಿಗಳ ನಡುವೆ ತಾತ್ವಿಕ ಜಗಳಗಳಿವೆ. ಆರಂಭದ ಹಂತದಲ್ಲಿ ಇವು ಜತೆಯಲ್ಲಿರಲಿಲ್ಲ. ಕಾಲಕ್ರಮೇಣ ತಮ್ಮ ನಡುವಣ ವೈರುಧ್ಯಗಳನ್ನು ಕಡಿಮೆಗೊಳಿಸಿಕೊಂಡು ಅಕ್ಕಪಕ್ಕದಲ್ಲಿ ನೆಲೆಸ ತೊಡಗಿದವು; ಅಂದರೆ ಸೂಫಿಸಂತರ ಸುತ್ತ ಬೇರುಬಿಟ್ಟಿರುವ ಜನರ ನಂಬಿಕೆ ಆಚರಣೆಗಳನ್ನು ಕಿತ್ತುಹಾಕುವುದು ಅಸಾಧ್ಯವೆಂದು ಅರಿತು ನಮಾಜು ಸಂಸ್ಕೃತಿಯ ಮಸೀದಿಯೇ ದರ್ಗಾದ ಹತ್ತಿರ ಬಂದವೋ, ಅಧಿಕಾರಸ್ಥವಾದ ನಮಾಜು ಸಂಸ್ಕೃತಿಯ ವಿರೋಧ ಕಟ್ಟಿಕೊಂಡು ಬದುಕುವುದು ಕಷ್ಟ ಎಂಬ ಸತ್ಯ ಮನಗಂಡು ದರ್ಗಾಗಳೇ ಇವನ್ನು ಹತ್ತಿರ ತಂದುಕೊಂಡವೋ, ಅಥವಾ ಎರಡೂ ಸಂಪ್ರದಾಯಗಳು ವಿರೋಧವಿಲ್ಲದೆ ಜತೆಯಲ್ಲಿ ಬದುಕಬಹುದು ಎಂಬ ಹೊಂದಾಣಿಕೆ ಆಯಿತೋ ಖಚಿತವಾಗುವುದಿಲ್ಲ. ಒಟ್ಟಿನಲ್ಲಿ ಪ್ರಾಚೀನ ದರ್ಗಾಗಳ ಪಕ್ಕ ಆಧುನಿಕವಾದ ಮಸೀದಿಗಳು ಬಂದು ಕೂಡಿಕೊಂಡವು. ಈ ವಾಸ್ತುರಚನೆಗಳ ಹೊಂದಾಣಿಕೆಯು ಬಹುದೀರ್ಘ ಕಾಲದ ಸಂಘರ್ಷದ ಬಳಿಕ ಸಂಭವಿಸಿದೆ.

ಇಸ್ಲಾಮಿಕ್ ವಾಸ್ತುವಿಲ್ಲಿ ಅಷ್ಟೇನೂ ಪ್ರಸಿದ್ಧವಲ್ಲದ ಆದರೆ ಸಾಂಸ್ಕೃತಿಕವಾಗಿ ಕುತೂಹಲಕಾರಿಯಾದ ರಚನೆಗಳೆಂದರೆ ಆಶೂರಖಾನಗಳು. ಇದನ್ನು ಮುಸ್ಲಿಮರು ಮಕಾನ್ (ಮನೆ) ಎಂತಲೂ, ಕನ್ನಡದಲ್ಲಿ ಮಸೂತಿ ಎಂತಲೂ ಕರೆಯುವರು. ಹಳ್ಳಿಗಾಡಿನ ಮಸೀದಿ ಮತ್ತು ದರ್ಗಾಗಳಂತೆ ಈ ಮೊಹರಂ ಮಸೂತಿಗಳು ಬಹುತೇಕ



ಜನಪದ ವಾಸ್ತುವಿನಲ್ಲಿ ಮೂಡಿದವು. ಪ್ರತಿದಿನ ಪ್ರಾರ್ಥನೆ ಮಾಡಲಾಗದ ಧಾರ್ಮಿಕವಾಗಿ ಅಶಿಕ್ಷಿತ ಮುಸ್ಲಿಮರು ಅದರಲ್ಲೂ ಪಿಂಜಾರರು ಇರುವ ಕಡೆ ಈ ಮಸೂತಿಗಳು ಸಾಮಾನ್ಯ. ಇವು ಒಂದೂ ಮುಸ್ಲಿಂ ಕುಟುಂಬವಿಲ್ಲದ ಹಳ್ಳಿಗಳಲ್ಲೂ ಇವೆ. ಕಮಲಾಪುರದಲ್ಲಿ ಆಯಾ ಜಾತಿಯವರು ತಮ್ಮ ಕೇರಿಗಳಲ್ಲಿ ತಮ್ಮವೇ ಆದ ಮೊಹರಂ ಮಸೀದಿಗಳನ್ನು ರಚಿಸಿಕೊಂಡಿದ್ದಾರೆ. ಉತ್ತರ ಕರ್ನಾಟಕ ಹಾಗೂ ಹೈದರಾಬಾದು ಕರ್ನಾಟಕದ ಹಳ್ಳಿಗಳಲ್ಲಿರುವ ಈ ಮಸೂತಿಗಳಲ್ಲಿ ೯ ದಿನಗಳ ಕಾಲ ಮೊಹರಂ ಹಬ್ಬದಲ್ಲಿ ದೇವರುಗಳನ್ನು ಕೂರಿಸಲಾಗುತ್ತದೆ. ವರ್ಷದ ಉಳಿದ ೩೫೬ ದಿನಗಳಲ್ಲಿ ಇವು ಊರಗುಡಿಯ ಪಡಸಾಲೆಗಳಂತೆ ನಾನಾ ಲೌಕಿಕ ಕಾರ್ಯಗಳಿಗೆ ಬಳಕೆಯಾಗುತ್ತವೆ. ಉದಾಹರಣೆಗೆ, ಮಧ್ಯಾಹ್ನದ ಹೊತ್ತಲ್ಲಿ ಊರವರ ವಿಶ್ರಾಂತಿಗೃಹ ಆಗುವುದು; ಮಸೀದಿಗಳಿಲ್ಲದ ಹಳ್ಳಿಗಳಲ್ಲಿ ರಂಜಾನ್ ತಿಂಗಳ ಪ್ರಾರ್ಥನೆಗೆ ಮಸೀದಿಯಾಗಿ ರೂಪಾಂತರ ಪಡೆಯುವುದು; ಶಾಲಾ ಕಟ್ಟಡ ಇಲ್ಲದ ಕಡೆ ಅಂಗನವಾಡಿ ಶಾಲೆಯಾಗುವುದು; ಊರ ಜನ ಊರೊಟ್ಟಿನ ಸೇರುವ ಸಭಾಭವನ ಅಥವಾ ಪಂಚಾಯಿತಿಕಟ್ಟೆಯಾಗುವುದು. ಮುಂಜಾನೆ ಸಂಜೆ ಕೆಲಸವಿಲ್ಲದವರು ಕೂತು ಹರಟೆ ಹೊಡೆಯುವ ಸೋಮಾರಿಕಟ್ಟೆಗಳಾಗುವುದು; ಊರಿಗೆ ಬರುವ ಹೆಳವರು, ದುರುಗ ಮುರಗಿಯವರು, ಚೌಡಕಿಯವರು, ಫಕೀರರು, ಅಪರಿಚಿತರು ರಾತ್ರಿ ವಸ್ತಿ ಮಾಡುವ ಉಚಿತ ಲಾಜುಗಳಾಗುವುದು; ಊರೂರು ತಿರುಗುವ ಕಸಬುದಾರರು ಹಾಗೂ ಸಣ್ಣಪುಟ್ಟ ವ್ಯಾಪಾರಿಗಳಿಗೆ ಬಿಡದಿಮನೆ ಆಗುವುದು; ಕೊನೆಗೆ ಮುನಿಸಿಕೊಂಡ ಗಂಡನೊ ಹೆಂಡತಿಯೊ ಹೋಗಿ ಕುಳಿತುಕೊಳ್ಳುವ ಕೋಪಗೃಹವೂ ಆಗುವುದು. ೯ ದಿನಗಳನ್ನು ಹೊರತುಪಡಿಸಿದರೆ ಇಲ್ಲಿ ನಡೆಯುವ ಯಾವ ಚಟುವಟಿಕೆಗಳೂ ಇಸ್ಲಾಮಿಕ್ ಎನ್ನಬಹುದಾದವಲ್ಲ. ಇದಕ್ಕೆ ತಕ್ಕಂತೆ ಈ ಕಟ್ಟಡದ ಬಾಗಿಲಿಲ್ಲದ ತೆರೆದ ರಚನೆಯಿದೆ. ಈ ತೆರೆದ ವಾಸ್ತುಸ್ವರೂಪಕ್ಕೂ ಅದರ ಜಾತ್ಯತೀತ ಬಳಕೆಗೂ ನೇರ ಸಂಬಂಧವಿದೆ. ಈ ಮುಕ್ತವಾದ ಸಾರ್ವಜನಿಕ ಬಳಕೆಯು ನಮಾಜು ಮಾಡುವ ಮಸೀದಿಯಲ್ಲಿ ಸಾಧ್ಯವಿಲ್ಲ.

ಇಸ್ಲಾಮಿಕ್ ಶೈಲಿ ಎಂದು ಕರೆಯಲಾಗುವ ಈ ವಾಸ್ತುರಚನೆಗಳಲ್ಲಿ ಕೇವಲ ಇಸ್ಲಾಮ್ ಧರ್ಮಕ್ಕೆ ಸಂಬಂಧಿಸಿದ ಸಂಗತಿಗಳೇ ಇರುತ್ತವೆ ಎಂದು ತಿಳಿಯುವಂತಿಲ್ಲ. ಕರ್ನಾಟಕದ ಅನೇಕ ಅನುಭಾವಿಗಳ ಗದ್ದುಗೆಗಳು ಈ ಶೈಲಿಯ ವಾಸ್ತುವಿನಲ್ಲಿ ರಚನೆಯಾಗಿವೆ. ಅವುಗಳಲ್ಲಿ ಮುಖ್ಯವಾದವು, ಜಲದುರ್ಗದ ಪರಮಪ್ರಭು, ಸಾವಳಗಿಯ ಶಿವಲಿಂಗ, ಶಿರಹಟ್ಟಿಯ ಫಕೀರೇಶ್ವರ, ಕೊಡೇಕಲ್ ಬಸವಣ್ಣ, ತಿಂಥಿಣಿಯ ಮೋನಪ್ಪ, ವಾಡ್ಯಾಳದ ಅಲ್ಲಮಪ್ರಭು ಮುಂತಾದವರ ಗದ್ದುಗೆಗಳು, ಮಡಿಕೇರಿಯ ಓಂಕಾರೇಶ್ವರ ಮುಂತಾದ ಗುಡಿಗಳು. ಇದಕ್ಕೆ ಪ್ರತಿಯಾಗಿ ಕೆಲವು ದರ್ಗಾಗಳು ಇಸ್ಲಾಮಿಕ್ ಶೈಲಿಯಲ್ಲೇ ಇಲ್ಲ. ಅದರಲ್ಲಿ ಯಮನೂರಿನ ಬಾಗಸವಾರನ ದರ್ಗಾವೂ ಒಂದು.

ಆದರೆ ಧರ್ಮ ಮತ್ತು ವಾಸ್ತುವಿನ ಈ ಚರಿತ್ರೆಯು ಈಚೆಗೆ ಆರ್ಥಿಕ, ರಾಜಕೀಯ ಪರಿಸ್ಥಿತಿಗಳಿಗೆ ಸಿಕ್ಕು ತಾನೂ ಬದಲಾವಣೆಯಾಗುತ್ತಿದೆ. ಈ ವಾಸ್ತು ಬದಲಾವಣೆಗಳು ಜನರ ಆಲೋಚನ ಕ್ರಮವನ್ನು ಬದಲಿಸುತ್ತಿವೆಯೋ ಜನರ ಬದಲಾದ ಆಲೋಚನ ಕ್ರಮವು ವಾಸ್ತುವಿನಲ್ಲಿ ಬದಲಾವಣೆ ತರುತ್ತಿದೆಯೋ ಹೇಳುವುದು ಕಷ್ಟವಾಗಿದೆ. ಇದರಲ್ಲಿ ಹಳ್ಳಿಗಳ ಮಸೀದಿ ವಾಸ್ತುವಿನಲ್ಲಿ ಆಗುತ್ತಿರುವ ಪರಿವರ್ತನೆ ಗಮನಾರ್ಹ. ಕೃಷಿಪ್ರಧಾನ ಹಳ್ಳಿಯ ಜನ ತಮ್ಮ ಸಾಂಪ್ರದಾಯಿಕ ವೃತ್ತಿಗಳನ್ನು ತೊರೆದು ಪಕ್ಕದ ಪಟ್ಟಣಗಳಿಗೆ ವ್ಯಾಪಾರಕ್ಕಾಗಿ ಆಧುನಿಕ ಶಿಕ್ಷಣಕ್ಕಾಗಿ ಹೋಗಿಬರುತ್ತಿದ್ದಂತೆ, ಅವರ ಆರ್ಥಿಕ ಪರಿಸ್ಥಿತಿಗಳಲ್ಲಿಯೂ ಬದಲುತನ ಕಾಣಿಸಿಕೊಂಡಿದೆ. ಹೊಸ ಆರ್ಥಿಕತೆ ಹಾಗೂ ಪಟ್ಟಣದ ಜತೆಗಿನ ಹೊಸ ಸಂಬಂಧಗಳು ಅವರನ್ನು ಶಿಷ್ಟ ಧಾರ್ಮಿಕ ನೆಲೆಗಳ ಜತೆ ಜೋಡಿಸಿವೆ. ಈ ಧಾರ್ಮಿಕ ನೆಲೆಗಳು ''ನಾವು ಮುಸ್ಲಿಮರು : ನಮಗೆ ನಮ್ಮದೇ ಆದ ಜಾಗತಿಕ ಪರಂಪರೆಯೊಂದು ಇದೆ. ಅದನ್ನು ನಾವು ಪಾಲಿಸಬೇಕು'' ಎಂಬ ಸ್ವಕೇಂದ್ರಿತ ಪ್ರಜ್ಞೆಯನ್ನು ಕಲಿಸಿವೆ. ಆಧುನಿಕ ಶಿಕ್ಷಣಕ್ಕೆ ತೆರೆದುಕೊಂಡ, ಸಾಮಾಜಿಕವಾಗಿ ಎಚ್ಚರವುಳ್ಳ ಧಾರ್ಮಿಕರಾಗುತ್ತಿರುವ ಪಟ್ಟಣದ ಮುಸ್ಲಿಮರ ಸಹವಾಸಕ್ಕೆ ಗ್ರಾಮೀಣ ಮುಸ್ಲಿಮರು ಸಿಲುಕಿದ್ದಾರೆ. ಕಳೆದ ಕೆಲವು ವರ್ಷಗಳಲ್ಲಿ ಪಟ್ಟಣ ಮತ್ತು ಹಳ್ಳಿಗಳಲ್ಲಿ ಕೋಮುವಾದವು ಪ್ರಸಾರವಾಗಿರುವುದು ಈ ಬಗೆಯ ಕೂಡುವಿಕೆಯನ್ನು ಗಟ್ಟಿಮಾಡುತ್ತಿದೆ. ಇದರಿಂದ ಹಳ್ಳಿಯ ಇತರ ಜಾತಿಯ ಜನರ ಜತೆಯಿದ್ದ ಮುಸ್ಲಿಮರ ಸಂಬಂಧಗಳಲ್ಲಿ ಸಣ್ಣ ಬಿರುಕೊಂದು ಕಾಣಿಸಿದೆ. ಈ ಹೊಸ



ಧಾರ್ಮಿಕ ಎಚ್ಚರ ಮತ್ತು ಸಾಮಾಜಿಕವಾಗಿ ಬಿರುಕು ಗ್ರಾಮಜಗತ್ತಿನ ಇತರೆ ಧಾರ್ಮಿಕ ಪರಂಪರೆಗಳ ಸಹಬಾಳುವೆ ಮಾಡುವುದನ್ನು ಕಡಿಮೆಗೊಳಿಸುವತ್ತ ಚಲಿಸುವಂತೆ ಕಾಣುತ್ತಿದೆ. 'ಅನ್ಯ' ಧರ್ಮದ ಜತೆಗಿನ ಸಹವಾಸ ಈಗ ಒಂದು ಬಗೆಯ ಮುಜುಗರ. ಈಗ ಹಳ್ಳಿಯ ಮುಸ್ಲಿಮರ ಧಾರ್ಮಿಕ ಐಡೆಂಟಿಟಿಯಾಗಿ ಊರೊಟ್ಟಿಗೆ ಮಾಡುತ್ತಿದ್ದ ಮೊಹರಂ ಹಾಗೂ ಸೂಫಿ ಉರುಸುಗಳು ಹಿಂಜರಿಯುತ್ತಾ, ಮುಸ್ಲಿಮರು ಮಾತ್ರ ಮಸೀದಿಯಲ್ಲಿ ಕೂಡಿ ಮಾಡುವ ಶಿಷ್ಟ ಆಚರಣೆಯಾದ ನಮಾಜು ಮುನ್ನೆಲೆಗೆ ಬರತೊಡಗಿದೆ. ಇದರ ತಾರ್ಕಿಕ ಪರಿಣಾಮವೆಂಬಂತೆ ದರ್ಗಾ ಮತ್ತು ಮೊಹರಂ ಮಸೂತಿಗಳು ತಮ್ಮ ಹಿಂದಿನ ಆಕರ್ಷಣೆ ಕಳೆದುಕೊಂಡು ಪಾಳುಬೀಳುತ್ತಿವೆ ಮತ್ತು ಆಧುನಿಕ ಮಸೀದಿಗಳು ನಿರ್ಮಾಣವಾಗುತ್ತಿವೆ. ಹೀಗಾಗಿ ಹಳ್ಳಿಯ ತೆರೆದ ಬಾಗಿಲಿನ ಮೇಲುಮುದ್ದೆಯ ಕಟ್ಟಿಗೆ ಸೊಪ್ಪುಗಳಿಂದ ಅಥವಾ ಮಂಗಳೂರು ಹೆಂಚಿನ ಸ್ಥಳೀಯ ವಾಸ್ತುವಿನ ಚಿಕ್ಕಪುಟ್ಟ ಮಸೀದಿಗಳ ಜಾಗದಲ್ಲಿ ಕಾಂಕ್ರೀಟಿನ ಎತ್ತರದ ಮೀನಾರುಗಳುಳ್ಳ ಬೃಹದಾಕಾರದ ಕಾಂಪೌಂಡು ಗೋಡೆಯುಳ್ಳ ಮಸೀದಿಗಳು ಕಾಣಿಸಿಕೊಳ್ಳುತ್ತಿವೆ. ಅದರಲ್ಲೂ ಮಂಗಳೂರು ಸೀಮೆಯಲ್ಲಿ ಕೊಲ್ಲಿ ದೇಶಗಳಿಗೆ ದುಡಿಯಲು ಹೋದವರು ಕಳಿಸುತ್ತಿರುವ ಹಣವು ಅಲ್ಲಿನ ದರ್ಗಾ ಹಾಗೂ ಮಸೀದಿಗಳ ವಾಸ್ತುವಿನಲ್ಲಿ ತಂದಿರುವ ಬದಲಾವಣೆ ವಿಶಿಷ್ಟವಾಗಿದೆ. ತೆಂಗುಗರಿಗಳ ಹಸಿರಿನ ನಡುವೆ ಗಗನಕ್ಕೆ ತಿವಿಯುವಂತೆ ಚಿಮ್ಮಿ ಚೂಪಾದ ಸೂಜಿಯಂತಹ ಮೀನಾರುಗಳು ಹೊಸ ಆರ್ಥಿಕತೆಯ ಸಂಕೇತವಾಗಿವೆ. ಕೆಲವು ಮಸೀದಿಗಳು ಪಾಶ್ ಆಗುತ್ತಿವೆ. ಜನ ತಮ್ಮ ಧಾರ್ಮಿಕ ಶ್ರದ್ಧೆಯನ್ನು ಮಸೀದಿ ಕಟ್ಟಿಸುವ ಮೂಲಕ ತೋರುತ್ತಿದ್ದಾರೆ. ಆಧುನಿಕೀಕರಣ, ಶ್ರೀಮಂತೀಕರಣ ಹಾಗೂ ಸಾಂಪ್ರದಾಯಿಕತೆ ಒಟ್ಟಿಗೇ ಜರುಗುತ್ತಿವೆ.

ಹೀಗೆ ಇಸ್ಲಾಮಿಕ್ ವಾಸ್ತುಗಳಲ್ಲಿ ಸಂಭವಿಸುತ್ತಿರುವ ಭೌತಿಕ ಬದಲಾವಣೆಗಳು ನಮ್ಮ ಸುತ್ತಮುತ್ತ ಜರುಗುತ್ತಿರುವ ವಿದ್ಯಮಾನಗಳಿಗೆ ಸಂಬಂಧ ಪಡೆದುಕೊಂಡಿವೆ. ಆಧುನಿಕ ಬೆಳವಣಿಗೆ ಮತ್ತು ಆರ್ಥಿಕ ಸಾಮರ್ಥ್ಯಗಳು ಧಾರ್ಮಿಕ ಪ್ರತ್ಯೇಕತೆಯನ್ನು ಬೆಳೆಸುತ್ತಿವೆ. ಎಲ್ಲ ಧರ್ಮಗಳ ಜನರು, ಮುಖ್ಯವಾಗಿ ಮಹಿಳೆಯರು, ಒಗ್ಗೂಡುವ ಕೂಡು ಸಂಸ್ಕೃತಿಯ ದರ್ಗಾ ಮತ್ತು ಮೊಹರಂ ಸಂಸ್ಕೃತಿಗಳು ಅನಧಿಕೃತತೆಯನ್ನು ಪಡೆಯುತ್ತ ಹಿಂಜರಿಯುತ್ತಿವೆ. ಹಾಗೆಂದು ಮಸೀದಿ ಸಂಸ್ಕೃತಿಯಲ್ಲೂ ಏಕತೆಯಿಲ್ಲ. ಹಿರಿಯ ತಲೆಮಾರಿನ ಗ್ರಾಮೀಣ ಭಾಗದ ಉದಾರವಾದಿ ದೃಷ್ಟಿಕೋನದ ಉರುಸು ಮತ್ತು ಮೊಹರಂ ಮಾಡುವ ಮುಸ್ಲಿಮರು ಒಂದೆಡೆಯಾಗಿದ್ದಾರೆ. ಅವರ ಮಸೀದಿಯೇ ಬೇರೆ. ಅವರನ್ನು ಅಶುದ್ಧ ಮುಸ್ಲಿಮರೆಂದು ನಿರಾಕರಿಸುವ ಇಸ್ಲಾಮಿಕ್ ಪರಿಷ್ಕರಣ ವಾದಿಗಳಾದ ತಬ್ಲೀಘ್‌ನವರ ಮಸೀದಿಯೇ ಬೇರೆ. ಇಸ್ಲಾಮಿನೊಳಗಿನ ಈ ವೈರುಧ್ಯ, ವೈವಿಧ್ಯ ಹಾಗೂ ರೂಪಾಂತರಗಳನ್ನು ವಾಸ್ತುರಚನೆಗಳು ಕನ್ನಡಿಯಿಟ್ಟು ತೋರುತ್ತಿವೆ. ಈ ರೂಪಾಂತರಗಳು ಎಲ್ಲಿಗೆ ಕರೆದೊಯ್ಯುತ್ತವೆ ಎಂದು ಹೇಳುವುದು ಕಷ್ಟ.

**ಡಾ|| ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಅಂಚೆ,
ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ - ೫೮೩ ೨೭೬

## ಮ್ಯನ್ಮಾರ್ ಮಿಲಿಟರಿ ದಬ್ಬಾಳಿಕೆ, ಹಿಂಸಾಚಾರ ಕಳವಳಕಾರಿ

ನಮ್ಮ ನೆರೆಯ ರಾಷ್ಟ್ರ ಮ್ಯನ್ಮಾರ್‌ನ ನಲವತ್ತೆಂಟು ಮಿಲಿಯ ಜನ ನಲವತ್ತೈದು ವರ್ಷಗಳಿಂದ ಮಿಲಿಟರಿ ಸರ್ವಾಧಿಕಾರದ ಆಡಳಿತಕ್ಕೀಡಾಗಿದ್ದಾರೆ. ಮಿಲಿಟರಿ ಆಡಳಿತ ಪ್ರಾರಂಭವಾದಾಗಿನಿಂದ ದೇಶ ಒಂದು ಬಗೆಯಲ್ಲಿ ಜಾಗತಿಕ ಸಮುದಾಯ ದಿಂದ ದೂರ ಉಳಿದಿದೆ. ಪ್ರಜಾಪ್ರಭುತ್ವಕ್ಕಾಗಿ ಮ್ಯನ್ಮಾರ್‌ನ ಜನಾಂದೋಳನವನ್ನು ಮಿಲಿಟರಿ ಆಡಳಿತ ಕ್ರೂರ ದಬ್ಬಾಳಿಕೆ, ದೌರ್ಜನ್ಯಗಳಿಂದ ಹತ್ತಿಕ್ಕುತ್ತ ಬಂದಿದೆ. ಇತ್ತೀಚೆಗೆ, ಎಂದರೆ ಸೆಪ್ಟೆಂಬರ್ ತಿಂಗಳಲ್ಲಿ, ಬೌದ್ಧ ಸಂನ್ಯಾಸಿಗಳು ಮುಂದಾಳತ್ವ ವಹಿಸಿ ನಡೆಸಿದ ಶಾಂತಿಯುತ ಹೋರಾಟವನ್ನು ಮಿಲಿಟರಿ ಆಡಳಿತ ನೆತ್ತರು ಕೋಡಿ ಹರಿಸಿ ಅಡಗಿಸಿತು. ನಾಗರಿಕ ಜಗತ್ತು ಈ ದಬ್ಬಾಳಿಕೆಗೆ ಮೂಕಪ್ರೇಕ್ಷಕವಾಗಿತ್ತು. ವಿಶ್ವಸಂಸ್ಥೆಯಲ್ಲಿ ಪಶ್ಚಿಮ ರಾಷ್ಟ್ರಗಳು, ಮುಖ್ಯವಾಗಿ ಅಮೆರಿಕಾ, ಆರ್ಥಿಕ ದಿಗ್ಬಂಧನದ ಆರ್ಭಟ ಮಾಡಿದ್ದು ಬಿಟ್ಟರೆ ಮಿಲಿಟರಿ ಆಡಳಿತದ ಮೇಲೆ ಒತ್ತಡ ತರಲು ಬೇರೆ ಉಪಕ್ರಮಗಳೇನೂ ಇರಲಿಲ್ಲ. ಆರ್ಥಿಕ ದಿಗ್ಬಂಧನ ಹೊರಿಸುವುದರಿಂದ ಜನಜೀವನ ಇನ್ನಷ್ಟು ದುಸ್ತರವಾಗುವುದು ಬಿಟ್ಟರೆ ಆಡಳಿತಗಾರರಿಗೆ ಬಿಸಿ ತಟ್ಟದು. ಇದರ ಅನುಭವ ಸಾಕಷ್ಟಿದೆ. ಹಾಗಾಗಿ, ರಾಜಕೀಯವಾಗಿ ಒತ್ತಡ ತರುವುದು ಅಗತ್ಯ. ದಬ್ಬಾಳಿಕೆ, ದೌರ್ಜನ್ಯ ಗಳನ್ನು ಖಂಡಿಸಿ, ಮಿಲಿಟರಿ ಅಧಿಕಾರವನ್ನು ಕೊನೆಗೊಳಿಸಿ ದೇಶದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಸ್ಥಾಪಿಸಲು ಕ್ರಮ ಕೈಗೊಳ್ಳುವಂತೆ ಒತ್ತಾಯ ತರಬೇಕಾಗಿದೆ. ಮ್ಯನ್ಮಾರ್‌ನಲ್ಲಿ ನಡೆಯುತ್ತಿರುವ ಜನತೆಯ ಹೋರಾಟಕ್ಕೆ ಪ್ರಪಂಚದ ಎಲ್ಲ ಪ್ರಜಾಪ್ರಭುತ್ವ ಶಕ್ತಿಗಳು, ಸಂಘಟನೆಗಳು ಒಕ್ಕೊರಲಿನಿಂದ ಬೆಂಬಲ ಸೂಚಿಸಬೇಕಾಗಿದೆ.

ವಿಶ್ವವೀಕ್ಷಣ

ಮ್ಯನ್ಮಾರ್‌ನಲ್ಲಿ ಇತ್ತೀಚೆಗೆ ಸಂಭವಿಸಿದ ಘಟನೆಗಳ ಬಗ್ಗೆ ಭಾರತ ಸರಕಾರ ತಳೆದ ಧೋರಣೆ ಹಲವು ಪ್ರಶ್ನೆಗಳಿಗೆಡೆಕೊಟ್ಟಿದೆ. ಮೊದಲಿನಲ್ಲಿ ದಿವ್ಯ ಮೌನದಿಂದಿದ್ದ ಸರಕಾರ ಅನಂತರ ಮಿಲಿಟರಿ ಸರ್ವಾಧಿಕಾರವು ಮಾತುಕತೆಗಳ ಮೂಲಕವಾಗಿ ಸಮಸ್ಯೆಯನ್ನು ಬಗೆಹರಿಸಬೇಕು ಎಂದು ಹೇಳಿತೇ ಹೊರತು ದಬ್ಬಾಳಿಕೆ ಯನ್ನು ಖಂಡಿಸುವ ಗೋಜಿಗೆ ಹೋಗಲಿಲ್ಲ. ಇದೊಂದು ನೆರೆರಾಷ್ಟ್ರದ ಆಂತರಿಕ ವಿಷಯ ಎಂದು ಕೈಕಟ್ಟಿ ಕುಳಿತುಕೊಳ್ಳುವುದು ಎಷ್ಟು ಸರಿ? ಆಂತರಿಕ ವಿಷಯ ಎಂದು ನಮ್ಮ ಕಣ್ಮುಂದೆಯೇ ನಡೆಯುತ್ತಿರುವ ದೌರ್ಜನ್ಯವನ್ನು ಖಂಡಿಸದೆ ಇರುವುದು ಸರಿಯೆ? ಈ ಪ್ರಶ್ನೆಗಳು ನೇಪಾಳ, ಬಂಗ್ಲಾದೇಶ ಹಾಗೂ ಪಾಕಿಸ್ತಾನದ ಸಂದರ್ಭದಲ್ಲೂ ಉದ್ಭವಿಸಿವೆ. ಇದರ ಬಗ್ಗೆ ಸ್ಪಷ್ಟವಾದ ನಿಲುವು ತಳೆಯಲು ಕೂಲಂಕಷವಾಗಿ ಚರ್ಚೆಯಾಗಬೇಕು. ಜನಪರವಾದ ನಿಲುವು ತಳೆಯದೇ ಹೋದಲ್ಲಿ ಅವರ ಹೋರಾಟಕ್ಕೆ ದ್ರೋಹ ಬಗೆದಂತಾಗುತ್ತದೆ. ಆಳುವ ವರ್ಗದ ಆಕ್ರೋಶಕ್ಕೆ ಒಳಗಾಗುವ ಹೆಸರಿನಲ್ಲಿ ಜನತೆಯ ಹೋರಾಟಕ್ಕೆ ಸ್ಪಂದಿಸದಿರುವುದು ಸರಿಯಲ್ಲ. ಮ್ಯನ್ಮಾರ್‌ನಲ್ಲಿ ಬೌದ್ಧ ಸಂನ್ಯಾಸಿಗಳ ಹೋರಾಟ ಉತ್ತುಂಗದಲ್ಲಿದ್ದ ಸಮಯದಲ್ಲಿಯೇ ನಮ್ಮ ದೇಶದ ಪೆಟ್ರೋಲಿಯಂ ಸಚಿವ ಮುರಲಿ ದೆಯೋರಾ ಆ ದೇಶಕ್ಕೆ ಭೇಟಿ ನೀಡಿ ಪೂರ್ವನಿಯೋಜಿತ ಮಾತುಕತೆಗಳಲ್ಲಿ ತೊಡಗಿದ್ದು ಸಮಂಜಸವಲ್ಲ. ಅದು ಹೋರಾಟದಲ್ಲಿ ನಿರತವಾಗಿರುವ ಜನತೆಗೆ ತಪ್ಪು ಸಂದೇಶ ತಲುಪಿಸುತ್ತದೆ. ಮ್ಯನ್ಮಾರ್‌ನ ಬೆಳವಣಿಗೆಗಳನ್ನು ಖಂಡಿಸಿ, ಜನತೆಯ ಹೋರಾಟಕ್ಕೆ ಮೊದಲು ಬೆಂಬಲ ಸೂಚಿಸಿದ್ದು ನಮ್ಮ ದೇಶದ ಎಡಪಕ್ಷಗಳು. ಅನಂತರ ಇತರರು ಮುಂದಾದರು.

ಸೀಯಾರ್ಕೆ

ಮ್ಯನ್ಮಾರ್‌ನಲ್ಲಿ ಮಿಲಿಟರಿ ಸರ್ವಾಧಿಕಾರ ಸ್ಥಾಪನೆಗೊಂಡ ನಂತರ ಭಾರತ ದೊಂದಿಗೆ ಸಂಬಂಧಗಳು ಅಷ್ಟೇನೂ ಸ್ನೇಹಯುತವಾಗಿರಲಿಲ್ಲ. ಪ್ರಜಾಪ್ರಭುತ್ವದ ಸ್ಥಾಪನೆಗಾಗಿ ಹೋರಾಡುತ್ತಿರುವ ಆಂಗ್ ಸಾನ್ ಸೂಕಿ ನೇತೃತ್ವದಲ್ಲಿರುವ ನ್ಯಾಷನಲ್ ಲೀಗ್ ಫಾರ್ ಡೆಮಾಕ್ರಸಿ ಸಂಸ್ಥೆಗೆ ಭಾರತ ಬೆಂಬಲ ನೀಡಿದೆ. ಆಕೆಯನ್ನು ಗೃಹಬಂಧನದಿಂದ ಮುಕ್ತಗೊಳಿಸಬೇಕೆಂದು ಭಾರತ ಬಲವಾಗಿ ಒತ್ತಾಯಿಸುತ್ತ ಬಂದಿದೆ. ೧೯೯೩ರಲ್ಲಿ ಭಾರತ ಸರಕಾರ ಆಂಗ್ ಸಾನ್ ಸೂಕಿಗೆ ನೆಹರೂ ಸ್ಮಾರಕ ಪುರಸ್ಕಾರವನ್ನು ನೀಡಿತ್ತು. ಮಿಲಿಟರಿ ಸರ್ವಾಧಿಕಾರದೊಂದಿಗೆ ಸಂಬಂಧಗಳು ಕುದುರಿದ್ದು ಎನ್.ಡಿ.ಎ. ಸರಕಾರ ಅಧಿಕಾರಕ್ಕೆ ಬಂದ ಮೇಲೆ. ಎರಡೂ ದೇಶಗಳ ೧,೬೦೦ ಕಿ.ಮೀ. ಗಡಿ ಪ್ರದೇಶದಲ್ಲಿ ವಿಧ್ವಂಸಕಾರರನ್ನು ಹತ್ತಿಕ್ಕಲು ಮ್ಯನ್ಮಾರ್ ಸರಕಾರದೊಂದಿಗೆ ಎನ್.ಡಿ.ಎ. ಸರಕಾರ ಕೈಜೋಡಿಸಿತು. ಅಂದು ವಿದೇಶಾಂಗ ಸಚಿವರಾಗಿದ್ದ ಜಸ್ವಂತ್ ಸಿಂಗ್ ಮೊದಲಬಾರಿಗೆ ಮ್ಯನ್ಮಾರ್‌ಗೆ ಭೇಟಿ ನೀಡಿ ಮಿಲಿಟರಿ ಆಡಳಿತಗಾರರೊಂದಿಗೆ ಮಾತುಕತೆ ನಡೆಸಿದ್ದರು. ಈಗ ಅದು ಮುಂದುವರಿದಿದೆ, ಅಷ್ಟೆ. ಇದನ್ನು ಸರಿಪಡಿಸಿ ಭಾರತ ಸರಕಾರ ಮ್ಯನ್ಮಾರ್‌ನಲ್ಲಿ ಪ್ರಜಾಪ್ರಭುತ್ವ ಸರಕಾರದ ಸ್ಥಾಪನೆಗೆ ಒತ್ತಾಯ ತರಬೇಕಾಗಿದೆ.

ಮ್ಯನ್ಮಾರ್‌ನಲ್ಲಿ ಮಿಲಿಟರಿ ಸರ್ವಾಧಿಕಾರ ಸ್ಥಾಪನೆಗೊಂಡಿದ್ದು ಸ್ವಾತಂತ್ರ್ಯ ಬಂದ ಹದಿನಾಲ್ಕು ವರ್ಷಗಳ ನಂತರ, ೧೯೬೨ರಲ್ಲಿ. ಅಧಿಕಾರ ವಹಿಸಿಕೊಂಡ ಜನರಲ್ ನೆವಿನ್ ೨೬ ವರ್ಷ ಆಡಳಿತ ನಡೆಸಿದ. ಚುನಾಯಿತ ಪ್ರಜಾಪ್ರಭುತ್ವ ಸರಕಾರದ ಸ್ಥಾಪನೆಗಾಗಿ ಜನತೆಯ ಹೋರಾಟದ ಒತ್ತಡದಿಂದ ಅಧಿಕಾರ ತ್ಯಜಿಸಿದ. ಬೌದ್ಧ ಸಂನ್ಯಾಸಿಗಳು ೧೯೬೫ರಿಂದಲೇ ಹೋರಾಟದಲ್ಲಿ ನಿರತರಾಗಿದ್ದಾರೆ. ೧೯೬೫, ೧೯೭೪, ೧೯೭೬ ಮತ್ತು ೧೯೭೮ರಲ್ಲಿ ಅವರು ಹೋರಾಟ ನಡೆಸಿ ವಿಫಲರಾಗಿದ್ದರು. ೧೯೮೮ರಲ್ಲಿ ನಡೆದ ಆಂದೋಳನದಲ್ಲಿ ೬೦೦ ಮಂದಿ ಸಂನ್ಯಾಸಿಗಳು ಮಡಿದರು. ಮ್ಯನ್ಮಾರ್‌ನಲ್ಲಿ ೫೧,೩೨೨ ಬೌದ್ಧ ಸಂನ್ಯಾಸಿ ಮಠಗಳಿದ್ದು, ಸುಮಾರು ೪,೦೬,೯೦೩ ಸಂನ್ಯಾಸಿಗಳಿದ್ದಾರೆ, ಪ್ರಬಲ ರಾಜಕೀಯ ಶಕ್ತಿಯಾಗಿದ್ದಾರೆ. ಇವರ ಮಧ್ಯೆ ಪ್ರಜಾಪ್ರಭುತ್ವ ಸರಕಾರದ ಸ್ಥಾಪನೆಯ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ ಮಿಲಿಟರಿ ಸರ್ವಾಧಿಕಾರದ ವಿರುದ್ಧ ಹೋರಾಟದಲ್ಲಿ ಒಂದುಗೂಡಿದ್ದಿದೆ. ಹೆಚ್ಚಿನ ಜನರ ಬೆಂಬಲ ಇರುವುದು ಆಂಗ್ ಸಾನ್ ಸೂಕಿ ನೇತೃತ್ವದಲ್ಲಿರುವ ಚಳವಳಿಗೆ. ೧೯೯೦ರಲ್ಲಿ ಮಿಲಿಟರಿ ಆಡಳಿತಗಾರರು ನಡೆಸಿದ ಚುನಾವಣೆಯಲ್ಲಿ ಆಕೆಯ ಪಕ್ಷಕ್ಕೆ ಶೇ. ೯೦ರಷ್ಟು ಬೆಂಬಲ ದೊರೆಯಿತು. ಆದರೆ, ಆಡಳಿತಗಾರರು ಅಧಿಕಾರ ವಹಿಸಿಕೊಡುವ ಬದಲು ಆಕೆಯನ್ನು ಬಂಧನದಲ್ಲಿರಿಸಿದರು. ಈಚಿನ ವರ್ಷಗಳಲ್ಲಿ ದೀರ್ಘಕಾಲ ಗೃಹಬಂಧನಕ್ಕೆ ಒಳಗಾಗಿರುವ ವ್ಯಕ್ತಿ ಈಕೆ. ಮಿಲಿಟರಿ ಸರ್ವಾಧಿಕಾರದ ವಿರುದ್ಧ ಅವ್ಯಾಹತವಾಗಿ ಹೋರಾಟ ನಡೆಸುತ್ತಿರುವ ಸೂಕಿಗೆ ನೊಬೆಲ್ ಶಾಂತಿ ಪುರಸ್ಕಾರ ದೊರೆತಿದೆ. ಈಕೆಯ ಬಿಡುಗಡೆಗಾಗಿ ಜಾಗತಿಕ ಒತ್ತಾಯ ವಿದ್ದರೂ ಮಿಲಿಟರಿ ಸರ್ವಾಧಿಕಾರ ಅಂತಹ ಎಲ್ಲ ಒತ್ತಾಯಗಳನ್ನು ಅಲಕ್ಷಿಸಿದೆ.

ಸಹಮತವುಳ್ಳ ಇತರ ದೇಶಗಳ ಜೊತೆಗೂಡಿ ಮ್ಯನ್ಮಾರ್ ಮಿಲಿಟರಿ ಆಡಳಿತೆಯೊಂದಿಗೆ ಮಾತುಕತೆ ನಡೆಸಿ ಪರಿಸ್ಥಿತಿಯನ್ನು ಸುಧಾರಿಸುವುದಕ್ಕೆ ಭಾರತ ಒಲವು ತೋರಿದೆ. ಈ ಪ್ರಯತ್ನ ಸಫಲವಾಗಲಿ ಎಂದು ಹಾರೈಸೋಣ. ಮಿಲಿಟರಿ ಸರ್ವಾಧಿಕಾರದ ದಬ್ಬಾಳಿಕೆಯನ್ನು ಖಂಡಿಸಿ, ಎಲ್ಲ ಪ್ರಜಾಪ್ರಭುತ್ವ ಶಕ್ತಿಗಳು ಮ್ಯನ್ಮಾರ್ ಜನತೆಯ ಹೋರಾಟಕ್ಕೆ ಪೂರ್ಣ ಬೆಂಬಲ ನೀಡುವುದು ಇಂದು ಜರೂರು ಅಗತ್ಯವಾಗಿದೆ. ಪರಿಸ್ಥಿತಿ ಹದಗೆಟ್ಟರೆ ಮ್ಯನ್ಮಾರ್‌ನ ತೈಲ ಸಂಪತ್ತಿನ ಮೇಲೆ ಕಣ್ಣಿರಿಸಿರುವ ಪಾಶ್ಚಾತ್ಯ ದೇಶಗಳು ತಲೆತೂರಿಸುವ ಸಂಭವವಿದೆ. ಇದರ ಬಗ್ಗೆ ಎಚ್ಚರದಿಂದಿರಬೇಕಾಗಿದೆ.

## ಅಪಾಯಕಾರಿ ಶಸ್ತ್ರಾಸ್ತ್ರ ಪೈಪೋಟಿ

ಶೀತಲಯುದ್ಧ ಕಾಲವನ್ನು ನೆನಪಿಗೆ ತರುವಂಥ ಶಸ್ತ್ರಾಸ್ತ್ರ ಪೈಪೋಟಿ ನಿಧಾನವಾಗಿ ಪ್ರಾರಂಭವಾಗಿದೆ. ಅಂದಿನಂತೆ ಭಾರಿ ಪ್ರಮಾಣದಲ್ಲಿ ಅಬ್ಬರದಿಂದ ನಡೆಯದೆ ಇದ್ದರೂ ಅಗೋಚರವಾಗಿ ನಡೆಯುತ್ತಿದೆ. ಇದು ತೀವ್ರಸ್ವರೂಪ ಪಡೆದುಕೊಳ್ಳುವುದಕ್ಕೆ ಮುನ್ನವೇ ಶಾಂತಿಪ್ರಿಯರು ಇದನ್ನು ತಡೆಯಲು ಸಜ್ಜಾಗಬೇಕಿದೆ.

ಸೋವಿಯತ್ ಒಕ್ಕೂಟ ವಿಘಟನೆಗೊಂಡು ದುರ್ಬಲವಾದರೂ ಅಮೆರಿಕಾ ತನ್ನ ಶಸ್ತ್ರಾಸ್ತ್ರಗಳನ್ನು ಆಧುನೀಕರಿಸುವ, ಹೊಸ ಬಗೆಯ ಅಸ್ತ್ರಗಳನ್ನು ತನ್ನ ಶಸ್ತ್ರಾಗಾರದಲ್ಲಿ ಸೇರಿಸುವ ಕಾರ್ಯವನ್ನು ನಿಲ್ಲಿಸಲಿಲ್ಲ. ರಷ್ಯಾದಲ್ಲಿ ಬೋರಿಸ್ ಎಲ್ಟ್ಸಿನ್ ಅಧಿಕಾರ ದಲ್ಲಿದ್ದಷ್ಟು ದಿನ, ಸುಮಾರು ಒಂದು ದಶಕ ಅಮೆರಿಕಾ ಆ ದೇಶವನ್ನು ತನ್ನ ಬಗಲಿಗೆ ಸೇರಿದ್ದೆನ್ನುವ ರೀತಿಯಲ್ಲಿ ನೋಡಿಕೊಂಡಿತು. ರಷ್ಯಾದಲ್ಲಿ ಅಂದಿನ ರಾಜಕೀಯ ಆರ್ಥಿಕ ಪರಿಸ್ಥಿತಿ ಅದಕ್ಕೆ ಅನುಕೂಲಕರವಾಗಿಯೇ ಇತ್ತು. ಆದರೆ ಈಗ ಕಳೆದ ಹತ್ತು ವರ್ಷಗಳಲ್ಲಿ ರಷ್ಯಾ ಚೇತರಿಸಿಕೊಳ್ಳುತ್ತಿರುವುದು ಅಮೆರಿಕಾಗೆ ತಲೆನೋವಾಗಿದೆ. ಪ್ರಪಂಚದಲ್ಲಿ ತನ್ನ ಅಧಿನಾಯಕತ್ವದ ಸ್ಥಾಪನೆಗಾಗಿ ಹಂಬಲಿಸುತ್ತಿರುವ ಜಾರ್ಜ್

೩೮ನೇ ಪುಟಕ್ಕೆ

# ನೃತ್ಯ ಮತ್ತು ಮಾನಸಿಕ ಆರೋಗ್ಯ

ಬುದ್ಧಿಮಾಂದ್ಯತೆಯಲ್ಲಿಯೂ ನೃತ್ಯವನ್ನು ವರ್ತನಾ ಸಮಸ್ಯೆಗಳನ್ನು ಹತೋಟಿಗೆ ತರಲು, ಭಾವನೆಗಳ ಅಸಮತೋಲನವನ್ನು ಹತೋಟಿಗೆ ತರಲು, ಕೈ ಕಣ್ಣುಗಳ ಚಲನೆಯಲ್ಲಿ ಸಮತೋಲನವನ್ನು ಸಾಧಿಸಲು ಉಪಯೋಗಿಸುವ ಬಗ್ಗೆ ಸಂಶೋಧನೆಗಳು ಸಮರ್ಪಕವಾಗಿ ನಡೆಯಬೇಕಿದೆ. ಮಾನಸಿಕ ಅನಾರೋಗ್ಯದ ನಿವಾರಣೆಗೆ ಕಲಾ ಚಿಕಿತ್ಸೆಯ ಬಗೆಗಿನ ಚರ್ಚೆಗಿಂತ ಮುಖ್ಯವಾದದ್ದು ಸಮಾಜದ ಎಲ್ಲಾ ಸ್ತರಗಳಿಗೂ, ವರ್ಗಗಳಿಗೂ ಮಾನಸಿಕ ಆರೋಗ್ಯವರ್ಧನೆಗೆ, ಒತ್ತಡ ನಿಯಂತ್ರಣಕ್ಕೆ, ಮನೋ-ಬೌದ್ಧಿಕ ವಿಕಾಸಕ್ಕೆ ಕಾರಣವಾಗಬಹುದಾದ ಕಲಾಭ್ಯಾಸದ ಬಗೆಗಿನ ಚರ್ಚೆ. ನೃತ್ಯ ವಿದ್ಯಾರ್ಥಿಗಳೂ, ನೃತ್ಯ ಶಿಕ್ಷಕರೂ, ಮನಃಶಾಸ್ತ್ರಜ್ಞರೂ ಈ ಬಗೆಗೆ ಕಲೆತು ಸಂಶೋಧನೆ ನಡೆಸುವುದರೆಡೆಗೆ ಸಾಗಬೇಕಾಗಿದೆ.

**ನೃ**ತ್ಯವನ್ನು ಮಾನಸಿಕ ಕಾಯಿಲೆಗಳ ಚಿಕಿತ್ಸೆಗಾಗಿ ಬಳಸುವ ಬಗ್ಗೆ ಇತ್ತೀಚಿನ ದಿನಗಳಲ್ಲಿ ಪ್ರಯೋಗಗಳೂ, ಚರ್ಚೆಗಳೂ ನಡೆಯುತ್ತಿರುವುದು ಸರಿಯಷ್ಟೆ. ಕಾಯಿಲೆ ಬರುವುದಕ್ಕಿಂತ ಮೊದಲೇ, ಕಾಯಿಲೆಯೇ ಬರದಂತೆ ತಡೆಗಟ್ಟುವಲ್ಲಿ, ಮನೋ-ಬೌದ್ಧಿಕ ವಿಕಾಸಕ್ಕೆ ನೃತ್ಯ ಹೇಗೆ ಸಹಕಾರಿಯಾಗಬಲ್ಲದು ಎಂಬುದರ ಬಗ್ಗೆ ಚರ್ಚಿಸುವ ಕಿರು ಪ್ರಯತ್ನ ಇಲ್ಲಿದೆ.

ಲಲಿತ ಕಲೆಗಳು ನಮ್ಮ ಬದುಕಿಗೆ ಅತ್ಯವಶ್ಯ ಎಂಬ ಸತ್ಯವನ್ನು ಮನಗಂಡೋ ಅಥವಾ ಸಾಮಾಜಿಕ ಪ್ರತಿಷ್ಠೆಯ ಕಾರಣವೋ, ಹೆಚ್ಚು ಹೆಚ್ಚು ವಿದ್ಯಾರ್ಥಿಗಳು ಇಂದು ನೃತ್ಯ ಕಲಿಯತೊಡಗಿದ್ದಾರೆ. ಆದರೆ ಆ ವಿದ್ಯಾರ್ಥಿಗಳಿಗೂ, ಅವರ ತಂದೆ-ತಾಯಿಗಳಿಗೂ, ಅದನ್ನು ಕಲಿಸುವ ಶಿಕ್ಷಕರಿಗೂ ನೃತ್ಯದಿಂದ ಆಗುವ ಮನೋ-ಬೌದ್ಧಿಕ ವಿಕಾಸಗಳ ಅರಿವಿಲ್ಲದಿದ್ದರೆ, ಅದರಿಂದುಂಟಾಗುವ ಪ್ರಯೋಜನಗಳೂ ಮಿತವೇ. 'ಮನಸ್ಸು ಅರಿತದ್ದನ್ನು ಕಣ್ಣುಗಳು ಕಾಣುತ್ತವೆ' ಎಂಬ ಉಕ್ತಿಯಂತೆ ಈ ಅರಿವು ನೃತ್ಯದಿಂದುಂಟಾಗುವ ಪ್ರಯೋಜನಗಳನ್ನು ಅರ್ಥಪೂರ್ಣವಾಗಿಸಲು, ಪ್ರಾಯೋಗಿಕವಾಗಿ ಬದುಕಿನಲ್ಲಿ ಅಳವಡಿಸಿಕೊಳ್ಳಲು ಸಹಾಯಕವಾದೀತು.

ನೃತ್ಯ ಮತ್ತು ಮನಸ್ಸಿನ ಸಂಬಂಧ ಅನ್ಯೋನ್ಯ ಮತ್ತು ವಿಶಿಷ್ಟ. ಆದಿಮಾನವ ತನ್ನ ಮನಸ್ಸಿನ ಭಾವನೆಗಳನ್ನು ಹೊರಹಾಕಲು ನರ್ತಿಸುತ್ತಿದ್ದ ಎಂಬ ವಿವರಣೆ ಚರಿತ್ರೆಯಲ್ಲಿದ್ದರೆ, ಇಂದಿಗೂ ನಮ್ಮ ಭಾವನೆಗಳನ್ನು ವ್ಯಕ್ತಪಡಿಸುವಾಗ ನಾವು ಹಸ್ತಮುದ್ರೆಗಳನ್ನು, ಮುಖಭಾವಗಳನ್ನು, ಕಣ್ಣಿನ ಚಲನೆಗಳನ್ನು ನಮಗೇ ಗೊತ್ತಿಲ್ಲದಂತೆ ಉಪಯೋಗಿಸುತ್ತೇವೆ. ಮನೋವಿಜ್ಞಾನ ಎಂಟು ಮೂಲಭೂತ ಭಾವನೆಗಳನ್ನು (ಉದ್ವೇಗ, ಸಂತೋಷ, ಆಶ್ಚರ್ಯ, ಅಸಹ್ಯ, ದುಃಖ, ಕೋಪ, ನಾಚಿಕೆ, ಭಯ) ಹೆಸರಿಸುತ್ತದೆ. ಅಷ್ಟೇ ಅಲ್ಲ, ಆಧುನಿಕ ಮನೋವಿಜ್ಞಾನ ಬೌದ್ಧಿಕ ಬುದ್ಧಿಮತ್ತೆಯಷ್ಟೇ ಅಥವಾ ಅದಕ್ಕಿಂತ ಮುಖ್ಯವಾದುದು ಎಂದು ಭಾವನಾತ್ಮಕ ಬುದ್ಧಿಮತ್ತೆಯ ಕುರಿತು ವಿವರಿಸುತ್ತದೆ.

■

**ಡಾ॥ ಕೆ. ಎಸ್. ಪವಿತ್ರ**



ಇನ್ನು ನೃತ್ಯದಲ್ಲಿ ಮನೋವಿಜ್ಞಾನದ ಪರಿಕಲ್ಪನೆಗಳನ್ನು ಗಮನಿಸೋಣ. ಭರತನ ನಾಟ್ಯಶಾಸ್ತ್ರದ ಆರಂಭದ ಅಧ್ಯಾಯದಲ್ಲಿ ನಾಟ್ಯ ಭೂಲೋಕಕ್ಕೆ ಬಂದ ಕಾರಣವನ್ನೂ, ಬಗೆಯನ್ನೂ ವಿವರಿಸಲಾಗಿದೆಯಷ್ಟೆ. ಅಲ್ಲಿ ಭರತ ''ಕಾಮ-ಲೋಭ-ಈರ್ಷ್ಯೆ- ಕ್ರೋಧಗಳಿಂದ ಜನತೆಯಲ್ಲಿ ಸುಖ-ದುಃಖಗಳೆರಡೂ ಉಂಟಾಗಿ ಅಸಭ್ಯ ನೀತಿ ತಲೆದೋರಿದಾಗ ಕೇಳಲು-ನೋಡಲು ರಂಜಿತವಾದಂತಹ ವೇದವನ್ನು ಸೃಷ್ಟಿಸು ಎಂದಾಗ ಬ್ರಹ್ಮ ಋಗ್ವೇದದಿಂದ ಪಾಠ್ಯ, ಸಾಮವೇದದಿಂದ ಗೀತ, ಯಜುರ್ವೇದದಿಂದ ಅಭಿನಯ ಮತ್ತು ಅಥರ್ವಣದಿಂದ ರಸಗಳನ್ನೊಳಗೊಂಡ ನಾಟ್ಯ ವೇದವನ್ನು ಸೃಷ್ಟಿಸಿದನು'' ಎಂಬುದನ್ನು ವಿವರಿಸುತ್ತಾನೆ. ಮುಂದುವರೆದು ''ಮನ ಕುಗ್ಗಿದವರಿಗೆ ಉತ್ಸಾಹ-ಸ್ಫೂರ್ತಿಯನ್ನೂ, ಆಯಾಸಗೊಂಡವರಿಗೆ ವಿನೋದವನ್ನೂ ನೃತ್ಯ ನೀಡುತ್ತದೆ'' ಎನ್ನುತ್ತಾನೆ.



ನಂದಿಕೇಶ್ವರನ ಅಭಿನಯದರ್ಪಣದಲ್ಲಿಯೂ ಈ ರೀತಿಯಾದ ಉಲ್ಲೇಖವಿದೆ.

*ದುಃಖಾರ್ತಿ ಶೋಕನಿರ್ವೇದ ಖೇದ ವಿಚ್ಛೇದ ಸಾಧನಮ್*
*ಅಪಿ ಬ್ರಹ್ಮಪರಾನಂದಾದಿದಮಪ್ಯಧಿಕಂ ಭವೇತ್*

ಅರ್ಥಾತ್ ''ಇದು ದುಃಖ, ಪೀಡೆ, ಶೋಕ, ನಿರ್ವೇದ, ಖೇದಗಳನ್ನು ನೀಗಲು ಸಾಧನವಾಗುವುದಲ್ಲದೆ ಬ್ರಹ್ಮಾನಂದಕ್ಕಿಂತಲೂ ಅಧಿಕವಾದ ಆನಂದವನ್ನು ನೀಡುವುದು.''

ಕನ್ನಡದಲ್ಲೇ ಬರೆಯಲ್ಪಟ್ಟಿರುವ ಸಿಂಹಭೂಪಾಲನ ಲಾಸ್ಯರಂಜನದಲ್ಲಿಯೂ ನೃತ್ಯದ ಬಗ್ಗೆ ''ಅತಿ ದುಃಖವೆಂಬ ವಿಷವನ್ನು ಹೊಂದಿ ಹೆಚ್ಚು ನೊಂದಿರುವ ಈ ಲೋಕಕ್ಕೆ ಇದು ಸಂಜೀವಿನಿಯು''ಎಂಬ ಉಕ್ತಿಯಿದೆ.

ನೃತ್ಯದಲ್ಲಿ ಸಾಮಾನ್ಯವಾಗಿ ಉಪಯೋಗಿಸಲ್ಪಡುವ ಮುಖ್ಯ ಸೂತ್ರ

*ಯತೋ ಹಸ್ತಸ್ತತೋ ದೃಷ್ಟಿಃ ಯತೋ ದೃಷ್ಟಿಸ್ತತೋ ಮನಃ*
*ಯತೋ ಮನಸ್ತತೋ ಭಾವಃ ಯತೋ ಭಾವಸ್ತತೋ ರಸಃ*

ಇದನ್ನೇ ಗಮನಿಸಿ ನೋಡಿ ಮನೋವಿಜ್ಞಾನವು ಸಂಬಂಧಗಳಲ್ಲಿ 'ಸಹೃದಯ ಸಂಬಂಧ'ದ ಬಗ್ಗೆ ಒತ್ತುನೀಡುತ್ತದೆ. ಈ ಆತ್ಮೀಯತೆಗೆ ತುಂಬಾ ಮುಖ್ಯವಾಗಿ ಬೇಕಾದ್ದು ಮಾತನಾಡುವಾಗಿನ ಭಾವ, ಮುಖ ನೋಡಿ ಮಾತನಾಡುವಂಥದ್ದು ಮತ್ತು ಸಂಭಾಷಣೆಯಲ್ಲಿ ಮನಸ್ಸು ತೊಡಗಿಸಿ ಮಾತನಾಡುವಂಥದ್ದು. ಈ ಸೂತ್ರಕ್ಕೂ

ಮನೋವಿಜ್ಞಾನ ಹೇಳುವ 'ಸಹೃದಯ ಸಂಬಂಧ' ಮತ್ತು 'ಕಣ್ಣಲ್ಲಿ ಕಣ್ಣಿಟ್ಟು'ಗಳಿಗೂ ಸಾಮ್ಯವಿದೆ.

ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸೂಕ್ಷ್ಮವಾಗಿ ಗಮನಿಸಿದರೆ ಮನೋ-ಬೌದ್ಧಿಕ ವಿಕಾಸಕ್ಕೆ ನೃತ್ಯದ ಸಹಕಾರವನ್ನು ಹೀಗೆ ಪಟ್ಟಿಮಾಡಬಹುದು :

* ಹಂತ ಹಂತವಾಗಿ ಕ್ಲಿಷ್ಟವಾಗುವ ಶಾಸ್ತ್ರೀಯ ನೃತ್ಯ ಶಿಕ್ಷಣ ಕಲಿಯುವ ವಿದ್ಯಾರ್ಥಿಗೆ ದೈಹಿಕ ಸಾಮರ್ಥ್ಯವನ್ನು ಹೆಚ್ಚಿಸುವುದರ ಜೊತೆಗೇ ಬೌದ್ಧಿಕ-ಭಾವನಾತ್ಮಕ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ.
* ತಾಳದ ಮಿತಿ-ಪರಿಕಲ್ಪನೆಗಳು ವಿದ್ಯಾರ್ಥಿಗೆ ಮನಸ್ಸಿನಲ್ಲೇ ಗಣಿತ ಮಾಡುವ ಕಲೆಯನ್ನು ಕಲಿಸುವುದರೊಂದಿಗೇ, ಏಕಕಾಲಕ್ಕೆ ಮನಸ್ಸು ಸಾಧಿಸಬಹುದಾದ ಹಲವು ಕ್ರಿಯೆಗಳನ್ನು ಗಮನಕ್ಕೆ ತರುತ್ತದೆ.
* ನೃತ್ಯದಲ್ಲಿ ಬರುವ ಸಂಚಾರಿ ಭಾವಗಳನ್ನು (ಒಂದೇ ಸಾಹಿತ್ಯದ ಸಾಲಿಗೆ ಇಡೀ ಕಥಾನಕ, ಉದಾಹರಣೆಗೆ ಕೃಷ್ಣನ ಲೀಲೆಗಳು, ಗಜೇಂದ್ರ ಮೋಕ್ಷ, ದ್ರೌಪದೀ ವಸ್ತ್ರಾಪಹರಣ ಇತ್ಯಾದಿ) ಅಭಿನಯಿಸುವ ಕಲೆಯಲ್ಲಿ ಅಮೂರ್ತ ಕಲ್ಪನೆಗಳನ್ನು ಚಿತ್ರಿಸುವ ಸಾಮರ್ಥ್ಯ, ಪ್ರತಿಯೊಂದನ್ನು ಹೊಸದಾಗಿ ನೋಡುವ ಶಕ್ತಿಗಳ ಪರಿಚಯವಾಗುತ್ತದೆ.
* ಉಸಿರಾಟವನ್ನು ನಿಯಂತ್ರಿಸಬಲ್ಲ, ಆಳವಾಗಿ ಉಸಿರಾಡುವ, ತನ್ಮೂಲಕ ಭಾವನೆಗಳನ್ನು ನಿಯಂತ್ರಿಸುವ ಪ್ರತಿಭೆ ನರ್ತಕ/ನರ್ತಕಿಗೆ ನೃತ್ಯವನ್ನು ಗಂಭೀರವಾಗಿ ಅಭ್ಯಸಿಸಿದಾಗ ಲಭ್ಯವಾಗುತ್ತದೆ.
* ನೃತ್ಯ ಪ್ರದರ್ಶನವು ಕಲೆಯಾದ್ದರಿಂದ, ಬೇರೆಯವರೆದುರು ಧೈರ್ಯವಾಗಿ ತನ್ನ ಕಲೆಯನ್ನು ಪ್ರದರ್ಶಿಸಬಲ್ಲ ಸಾಮರ್ಥ್ಯದಿಂದ ಕೀಳರಿಮೆ ತನ್ನಿಂತಾನೇ ಮಾಯವಾದರೆ, ಆತ್ಮವಿಶ್ವಾಸ ವೃದ್ಧಿಯಾಗುತ್ತದೆ.
* ಜೀವನ ಕೌಶಲಗಳಲ್ಲಿ ಒಂದಾದ ಸೃಜನಶೀಲತೆ ನೃತ್ಯದ ಅವಿಭಾಜ್ಯ ಅಂಗ. ಗುರುವಿನಿಂದ ಕ್ರಮಬದ್ಧವಾಗಿ ಕಲಿತದ್ದನ್ನೇ ರಂಗದ ಮೇಲೆ ಅಭಿನಯಿಸಿದ್ದಾಗ್ಯೂ, ನರ್ತಕ/ನರ್ತಕಿಯ ಸೃಜನಶೀಲತೆ ರಂಗದ ಮೇಲೆ ಬೇರೆ ಬೇರೆ ಪ್ರಮಾಣಗಳಲ್ಲಿ ವ್ಯಕ್ತವಾಗುತ್ತದೆ.
* ಸಮೂಹ ನೃತ್ಯಗಳಲ್ಲಿ ಹೊಂದಾಣಿಕೆ, ಒಗ್ಗಟ್ಟಿನ ಮನೋಭಾವ, ಮಾತಿಲ್ಲದೇ ಬೇರೆಯವರ ಚಲನೆಗಳನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯಗಳು ಸಿದ್ಧಿಸುತ್ತವೆ.
* ಇನ್ನು ಮಾನಸಿಕ ಕಾಯಿಲೆಗಳಲ್ಲಿ ನೃತ್ಯ ಚಿಕಿತ್ಸೆಯ ಕುರಿತು ನೋಡಿದಾಗ ನೃತ್ಯ ಚಿಕಿತ್ಸೆ ಹೆಚ್ಚಿನ ಮಾನಸಿಕ ಕಾಯಿಲೆಗಳಿಗೆ 'ಪ್ರಾಥಮಿಕ' ಚಿಕಿತ್ಸೆಯಾಗಲು ಸಾಧ್ಯವಿಲ್ಲವೆನ್ನುವುದು ವೈಜ್ಞಾನಿಕ ಸತ್ಯ. ಆದರೆ ಔಷಧೀಯ ಮತ್ತು ಮನೋ ಚಿಕಿತ್ಸೆಗಳೊಡನೆ ಯಾವುದೇ ಕಲಾ ಚಿಕಿತ್ಸೆಯನ್ನು ಒಗ್ಗೂಡಿಸಿದಾಗ ಅದರ ಪರಿಣಾಮ ಖಂಡಿತವಾಗಿ ಹೆಚ್ಚು ಲಾಭದಾಯಕ. ಅಂದರೆ ಔಷಧೀಯ ಚಿಕಿತ್ಸೆಯಿಂದ/ಮನೋಚಿಕಿತ್ಸೆಯಿಂದ ಒಮ್ಮೆ ಕಾಯಿಲೆಯ ತೀವ್ರತೆ ಕಡಿಮೆಯಾದ ನಂತರದಲ್ಲಿ ರೋಗಿಯನ್ನು ಮರಳಿ ಸಹಜ ಬದುಕಿಗೆ ಕರೆತರಲು, ಸಂಭಾಷಣಾ ಕೌಶಲಗಳನ್ನು ಕಲಿಸಲು, ಉತ್ಸಾಹವನ್ನು ಮರಳಿ ಪಡೆಯಲು ನೃತ್ಯ ಸಹಕಾರಿ. ಇಲ್ಲಿ ನಿರ್ದಿಷ್ಟ ನೃತ್ಯ ಚಲನೆಗಳನ್ನು ಕಲಿಸಬೇಕೆ, ಅಥವಾ ಶಾಸ್ತ್ರೀಯ ನೃತ್ಯ ಪದ್ಧತಿಯನ್ನು ಸಾಮಾನ್ಯವಾಗಿ ಕಲಿಸುವ ಕ್ರಮದಲ್ಲಿಯೇ ಈ ರೋಗಿಗಳು ಅಭ್ಯಸಿಸಬೇಕೆ ಎನ್ನುವುದರ ಬಗ್ಗೆ ಸಂಶೋಧನೆ ಅಗತ್ಯ.



ಈ ವರ್ಷ 'ಕನ್ನಡ ಸಾಹಿತ್ಯ ಸಮ್ಮೇಳನ' ಕನ್ನಡ ರಾಜ್ಯೋತ್ಸವ ಒಟ್ಟೊಟ್ಟಿಗೆ ಬಂದಿದೆಲೀ... ಹುಟ್ಟು ಹೋರಾಟಗಾರರಿಗೆ ಬಿಡುವಿಲ್ಲದ ಕೆಲಸ ಕಣ್ರೀ...!!!

ಬುದ್ಧಿಮಾಂದ್ಯತೆಯಲ್ಲಿಯೂ ನೃತ್ಯವನ್ನು ವರ್ತನಾ ಸಮಸ್ಯೆಗಳನ್ನು ಹತೋಟಿಗೆ ತರಲು, ಭಾವನೆಗಳ ಅಸಮತೋಲನವನ್ನು ಹತೋಟಿಗೆ ತರಲು, ಕೈ ಕಣ್ಣುಗಳ ಚಲನೆಯಲ್ಲಿ ಸಮತೋಲನವನ್ನು ಸಾಧಿಸಲು ಉಪಯೋಗಿಸುವ ಬಗ್ಗೆ ಸಂಶೋಧನೆಗಳು ಸಮರ್ಪಕವಾಗಿ ನಡೆಯಬೇಕಿದೆ.

ಈ ಲೇಖನದ ಆರಂಭದಲ್ಲಿಯೇ ಹೇಳಿದಂತೆ ಮಾನಸಿಕ ಅನಾರೋಗ್ಯದ ನಿವಾರಣೆಗೆ ಕಲಾ ಚಿಕಿತ್ಸೆಯ ಬಗೆಗಿನ ಚರ್ಚೆಗಿಂತ ಮುಖ್ಯವಾದದ್ದು ಸಮಾಜದ ಎಲ್ಲಾ ಸ್ತರಗಳಿಗೂ, ವರ್ಗಗಳಿಗೂ ಮಾನಸಿಕ ಆರೋಗ್ಯವರ್ಧನೆಗೆ, ಒತ್ತಡ ನಿಯಂತ್ರಣಕ್ಕೆ, ಮನೋ-ಬೌದ್ಧಿಕ ವಿಕಾಸಕ್ಕೆ ಕಾರಣವಾಗಬಹುದಾದ ಕಲಾಭ್ಯಾಸದ ಬಗೆಗಿನ ಚರ್ಚೆ. ನೃತ್ಯ ವಿದ್ಯಾರ್ಥಿಗಳೂ, ನೃತ್ಯ ಶಿಕ್ಷಕರೂ, ಮನಃಶಾಸ್ತ್ರಜ್ಞರೂ ಈ ಬಗೆಗೆ ಕಲೆತು ಸಂಶೋಧನೆ ನಡೆಸುವುದರೆಡೆಗೆ ಸಾಗಬೇಕಾಗಿದೆ.

ನಾಟ್ಯಶಾಸ್ತ್ರದ ಭರತ ವಾಕ್ಯ ಇಲ್ಲಿ ಸ್ಮರಣೀಯ :

ನ ತಜ್ಞಾನಂ ನ ತಚ್ಛಿಲ್ಪಂ
ನ ಸಾ ವಿದ್ಯಾ ನ ಸಾ ಕಲಾ
ನಾಸೌ ಯೋಗೋ ನ ತತ್ಕರ್ಮ
ನಾಟ್ಯೇಸ್ಮಿನ್ ಯನ್ನ ದೃಶ್ಯತೇ

[redacted] ಕೆ. ಎಸ್. ಪವಿತ್ರ
'ಶ್ರೀ ವಿಜಯ', ಕಲಾನಿಕೇತನ, ೭ನೇ ಅಡ್ಡರಸ್ತೆ
ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪

೩೭ನೇ ಪುಟದಿಂದ

ಬುಷ್ ಸರಕಾರ ರಷ್ಯಾದ ಪ್ರಗತಿಗೆ ಕಡಿವಾಣ ಹಾಕಲು ಎಲ್ಲ ಬಗೆಯ ಪ್ರಯತ್ನಗಳನ್ನು ನಡೆಸುತ್ತಿದೆ. ಅದರಲ್ಲಿ ಶಸ್ತ್ರಾಸ್ತ್ರ ಪೈಪೋಟಿಯೂ ಒಂದು.

ಹಿಂದಿನ ಸೋವಿಯತ್ ಒಕ್ಕೂಟದ ಗಣರಾಜ್ಯಗಳು ರಷ್ಯಾದೊಂದಿಗೆ ವಿಘಟನೆಯ ನಂತರ ಸ್ಥಾಪಿಸಿಕೊಂಡ ಕಾಮನ್‌ವೆಲ್ತ್ ಕೂಟವನ್ನು ಒಡೆಯಲು ಎಲ್ಲ ಪ್ರಯತ್ನಗಳನ್ನೂ ಅಮೆರಿಕಾ ಮಾಡುತ್ತಿದೆ. ಜಾರ್ಜಿಯ, ಉಕ್ರೇನ್ ಮೊದಲಾದ ಕಡೆಗಳಲ್ಲಿ ಆರೆಂಜ್ ಕ್ರಾಂತಿ ನಡೆಸಿದೆ. ಈ ದೇಶಗಳನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳಲು ಅಮೆರಿಕಾ ಸರಕಾರ ನೋಡುತ್ತಿದೆ. ಇದರ ಜೊತೆಗೆ ರಷ್ಯಾದೊಂದಿಗೆ ಮಾಡಿಕೊಂಡಿದ್ದ ಎಲ್ಲ ಒಪ್ಪಂದಗಳನ್ನು ಗಾಳಿಗೆ ತೂರಿ ನ್ಯಾಟೋ ಕೂಟವನ್ನು ಪೂರ್ವ ಯೂರೋಪಿನ ರಾಷ್ಟ್ರಗಳಿಗೂ ವಿಸ್ತರಿಸಲಾಗುತ್ತಿದೆ. ಅಷ್ಟೇ ಅಲ್ಲ, ಪೂರ್ವ ಯೂರೋಪಿನಲ್ಲಿ ಕ್ಷಿಪಣಿಗಳನ್ನು ನೆಲೆಗೊಳಿಸಲು ಅಮೆರಿಕಾ ಸಂಚು ನಡೆಸಿದೆ. ಆದರೆ ಅಧ್ಯಕ್ಷ ಪುಟಿನ್ ನೇತೃತ್ವದಲ್ಲಿ ಆರ್ಥಿಕವಾಗಿ, ರಾಜಕೀಯವಾಗಿ ಚೇತರಿಸಿಕೊಂಡಿರುವ ರಷ್ಯಾ ಸರಕಾರ ಅಮೆರಿಕಾದ ಕುತಂತ್ರಗಳನ್ನು ಎದುರಿಸಲು ಅಗತ್ಯವಾದ ಪ್ರತಿತಂತ್ರ ರೂಪಿಸಿದೆ. ತನ್ನ ಹಿತಾಸಕ್ತಿಗಳಿಗೆ ಆತಂಕ ಉಂಟಾದಲ್ಲಿ ಪ್ರತಿರೋಧ ಕ್ರಮಗಳನ್ನು ಕೈಗೊಳ್ಳುವುದಾಗಿ ಪುಟಿನ್ ಸರಕಾರ ಬುಷ್ ಆಡಳಿತಕ್ಕೆ ಎಚ್ಚರಿಕೆ ನೀಡಿದೆ.

ಸರ್ವನಾಶ ಉಂಟುಮಾಡುವ ನ್ಯೂಕ್ಲಿಯರ್ ಅಸ್ತ್ರಗಳ ದಾಸ್ತಾನು ಹೊಂದಿರುವ ಅಮೆರಿಕಾ ಈಗ ಸಾಂಪ್ರದಾಯಿಕ ಬೃಹತ್ ಬಾಂಬು ತಯಾರಿಕೆಯಲ್ಲಿ ತೊಡಗಿದೆ. ಕ್ಲಸ್ಟರ್ ಬಾಂಬು, ಬೆಂಕಿ ಉಗುಳುವ ನಪಾಮ್ ಬಾಂಬು ಹಾಗೂ ಇತರ ಬಾಂಬುಗಳನ್ನು ಹೊಂದಿರುವ ಅಮೆರಿಕಾ ಬೃಹತ್ ಬಾಂಬು ಬಂಕನ್ನು ನಾಲ್ಕು ವರ್ಷಗಳ ಹಿಂದೆ ತಯಾರಿಸಿ ಪ್ರಯೋಗ ನಡೆಸಿತು. ಇವು ನ್ಯೂಕ್ಲಿಯರ್ ಬಾಂಬಿನಷ್ಟೇ ಪ್ರಬಲವಾಗಿರುವುದಲ್ಲದೆ ಸಾಕಷ್ಟು ಬೆಂಕಿ ಉಗುಳಿ ಅನಾಹುತ ಉಂಟುಮಾಡುವುದಲ್ಲದೆ, ಬಂಕರ್‌ಗಳಿಗೂ ಆಸ್ಫೋಟನೆಗೊಳ್ಳುವ ಚೈತನ್ಯ ಹೊಂದಿರುತ್ತವೆ. ಅಮೆರಿಕಾ ಈ ಬಾಂಬಿಗೆ 'ಎಲ್ಲ ಬಾಂಬುಗಳ ಮಾತೆ' ಎಂದು ಬೀಗುತ್ತಿತ್ತು. ಈಗ ರಷ್ಯಾ ಅದಕ್ಕಿಂತ ಪ್ರಬಲವಾದ ಬಾಂಬು ತಯಾರಿಸಿ ಅದಕ್ಕೆ 'ಎಲ್ಲ ಬಾಂಬುಗಳ ಪಿತ' ಎಂದು ನಾಮಕರಣ ಮಾಡಿದೆ. ಹೀಗೆ ಪೈಪೋಟಿ ಮುಂದುವರಿದರೆ ಮುಂದೇನು ?

ಸೀಯಾರ್ಕೆ
'ಚೌಬೀನ', ೮೪೯, ೭ನೇ ಕ್ರಾಸ್, ೧ನೇ ಮೇನ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

*ಕಳೆದ ಸೆಪ್ಟೆಂಬರ್ ೧೭ರಂದು ತುಮಕೂರಿನಲ್ಲಿ ನಿಧನರಾದ ಪ್ರೊ॥ ಎಚ್. ಜಿ. ಸಣ್ಣಗುಡ್ಡಯ್ಯನವರ ಸಾಹಿತ್ಯ ಕೃಷಿ ಗಮನಾರ್ಹವಾದುದು. ಪ್ರಗತಿಪರ ಚಿಂತನೆಗಳಿಗೆ ಓಗೊಡುತ್ತ ತಮ್ಮ ಕೊನೆಯ ಗಳಿಗೆಯವರೆಗೂ ಕ್ರಿಯಾಶೀಲ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರು. ಇವರ ಕವನಗಳು, ಲಲಿತ ಪ್ರಬಂಧಗಳು ಓದುಗರ ಅಪಾರ ಮೆಚ್ಚುಗೆ ಗಳಿಸಿವೆ.*

*'ನನ್ನ ತವರು' ಅವರ 'ಏಕಾಂತ ಮತ್ತು ಇತರ ಪ್ರಬಂಧಗಳು' ಕೃತಿಯಿಂದ ಆಯ್ದ ಪ್ರಬಂಧ.*



# ನನ್ನ ತವರು

*- ಪ್ರೊ॥ ಎಚ್. ಜಿ. ಸಣ್ಣಗುಡ್ಡಯ್ಯ*

Where the mind is without fear and the head is held high...

– ರವೀಂದ್ರನಾಥ ಟಾಗೋರ್

ಅಲ್ಲಿ ದಾರಿದ್ರ್ಯವನ್ನು, ಸಮೃದ್ಧಿಯ ಅಭಾವವನ್ನು, ಅಭಾವದ ಪರಿಸ್ಥಿತಿಯಲ್ಲಿ ನಡೆದಿರುವ ಗಳಿಗೆಯ ಹೋರಾಟದ ಕೂಗನ್ನು ಬಾಯಿ ಕಟ್ಟಿಸಲು ಹಗಲೂ ಇರುಳೂ ಧ್ವನಿವರ್ಧಕಗಳನ್ನು ಮೊಳಗಿಸುವುದಿಲ್ಲ. ಸೀಮೆಎಣ್ಣೆ, ಡೀಸೆಲ್ಲು, ಪೆಟ್ರೋಲು ಮುಂತಾದ ಭೂಗರ್ಭದ ಕೀವುರಕ್ತಗಳನ್ನು ಉರಿಸಿ ಕರ್ಕಶಕಂಠದ ವಾಹನಗಳನ್ನು ದೌಡಾಯಿಸಿ ಜನ ತಮ್ಮ ಡೌಲು ಪ್ರದರ್ಶಿಸುವುದಿಲ್ಲ. ಸಹಸ್ರ ಸಹಸ್ರ ಜನ ಉದುರಿಸಿದ ಉಚ್ಛಿಷ್ಟವನ್ನು ಅವಲಂಬಿಸಿದ ನಾಯಿಗಳ ಸಂಖ್ಯೆ ಇಲ್ಲಿರುವಷ್ಟು ಅಲ್ಲಿಲ್ಲ; ಅವುಗಳ ಬೊಬ್ಬೆ ಇರುಳದೇವಿಯ ಪ್ರಶಾಂತ ಸಾನ್ನಿಧ್ಯವನ್ನು ಕಲಕಿ, ಅವಳ ಕೋಮಲ ಕಪೋಲಗಳನ್ನು ತಿವಿದು ಗಾಯಗೊಳಿಸುವುದಿಲ್ಲ. ಹರಿಯುವ ಕೊಳಚೆಯ ಪ್ರವಾಹದ ಮೇಲೆ ಉದ್ರಿಕ್ತ ಸೌಧಗಳ ಕಪಟ ಇಲ್ಲಿನಂತೆ ಅಲ್ಲಿ ವಿರಾಜಿಸುವುದಿಲ್ಲ. ನನ್ನ ಬಯಕೆಯ ತವರು ಬಹು ಸುಕುಮಾರನಾದ ನಿಷ್ಕಪಟಿ. ಅದಕ್ಕೆ ನಾಗರಿಕತೆಯ ಬೆಡಗಿಲ್ಲ, ಹೆದರಿಕೆಯನ್ನು ಹುಟ್ಟಿಸುವ ಶಿಸ್ತಿನ ಆಡಂಬರವೂ ಇಲ್ಲ.

ನನ್ನ ಊರಿನ ಹಾದಿಯ ಮಗ್ಗುಲ ಹಸುರು ಹುಲ್ಲಿನ ಜಮಖಾನೆಯ ಮೇಲೆ ಬಸಿರಿ ಮರದ ಸುವಿಶಾಲ ನೆರಳು ಹಾಸಿದೆ. ಹತ್ತಿರದಲ್ಲೇ ನಿರುದ್ವಿಗ್ನವಾದ ಹಸುವಿನ ಕಡಸೊಂದು ಸೂರೆಪಾನದಂಥ ತನ್ನ ಕಿವಿಗಳನ್ನಗಲಿಸಿ ಹುಲ್ಲು ಮೇಯುತ್ತ ಬಾಲ ಬೀಸುತ್ತಿದೆ. ಒತ್ತೊತ್ತಾಗಿ ಬೆಳೆದ ಬೇಲಿಯ ಹಸುರು ರೋಜದ ಮೇಲೆ ಕಪ್ಪು ಬಿಳುಪಿನ ಪುಟ್ಟ ಕಾರೆಯಶಿಳ್ಳ ಬಾಲ ಚಿಮ್ಮುತ್ತ ಸಿಳ್ಳೆಹಾಕುತ್ತಿದೆ. ಅಂಥ ಕಡೆ ತಣ್ಣಗೆ ಕೂತು ಬಾಯಲ್ಲಿ ಅಡಕೆ ಅಗಿಯುವುದಕ್ಕೆ ಸಂಕೋಚ ಅಥವಾ ನಾಚಿಕೆ ಅನಿಸುವುದಿಲ್ಲ. 'ಯಾರು ಕೂತವನಲ್ಲಿ? ಏಳು' ಎಂದು ಕಾಖಿ ಅಂಗಿಯವರು ಬಂದು ಕುಂತವನನ್ನು ಗದರಿಸುವುದಿಲ್ಲ.

ಈ ಗ್ರಾಮೀಣ ಬದುಕಿನಲ್ಲಿ ಎಲ್ಲವೂ ಸುಖ ಎಂದು ಹೇಳಲಾರೆ. ಮಧ್ಯಾಹ್ನದ ಬಿಸಿಲಿಗೆ ಬೆನ್ನಾಗಿ, ಬೆಳಗಿನಿಂದ ಬಗ್ಗಿ ಬೆವರುಗರೆದು ಹೊಟ್ಟೆಯಲ್ಲಿ ಹೊತ್ತಿಕೊಂಡ ಹಸಿವೆಯ ದಾವಾಗ್ನಿಯನ್ನೆ ಗದ್ದುಗೆ ಮಾಡಿ ಕೂತವನಿಗೆ ಒಂದು ತಣಿಗೆಯಲ್ಲಿಷ್ಟು ತಿಳಿನೀರು, ನಾಲ್ಕು ಹರಳು ಉಪ್ಪು, ಎರಡು ಹಸುರು ಮೆಣಸಿಕಾಯಿ, ಒಂದು ಬೋಟು ಹುಣಿಸೆಹಣ್ಣು, ಇದ್ದರೆ ಒಂದು ಎಸಳು ಕೊತ್ತಂಬರಿ ಸೊಪ್ಪು – ಸೇರಿಸಿ ಹಳ್ಳಿಯ ಹೆಣ್ಣುಮಗಳು ತನ್ನ ಬೆರಳುಗಳ ತುದಿಯಿಂದ ಕಿವುಚಿ ಮಗ್ಗುಲಿಗೊಂದು ಚೆಂಡುರಾಗಿ ಹಿಟ್ಟನ್ನು ಬಡಿಸಿ ತನ್ನ ಪುರುಷನ ಮುಖದಲ್ಲಿ ಕಣ್ಣು ತೊಡಗಿಸಿ ಕುಳಿತುಕೊಳ್ಳುವುದನ್ನು ನಾವು ಕಾಣಬಹುದು. ದುಡಿದು ಉಣ್ಣುವ ಆ ಹಿಟ್ಟಿನ ಮಿದಿಕೆ ಮಿದಿಕೆಯೂ ನಾಲಗೆಯ ತುದಿಯಿಂದ ಕರುಳಿನ ಆಳದವರೆಗೆ ಸುಖದ ಸುಗ್ಗಿಯಾಗಿ ಹಿಗ್ಗುತ್ತದೆ. ಉಂಡು ನಾಲಗೆಯ ಕಾರವನ್ನಾರಿಸಲು ತಂಗಾಳಿಗೆ ಬಾಯಿ ತೆಗೆದಾಗ ಅದೇ ಬದುಕಿನ ಹದ ಎಂಬಂತೆ ಹಿತವಾಗುತ್ತದೆ.

ಇಲ್ಲಿಯ ಬದುಕಿನ ಅಚ್ಚುಕಟ್ಟು ಓರಣಗಳು ಅಲ್ಲಿಲ್ಲ, ನಿಜ. ಆದರೆ ಅಲ್ಲಿ ತೆಂಗಿನ ಮರದ ಮಗ್ಗುಲಲ್ಲಿ ಒಂದು ಸುಂದರ ಅಣಬೆ ನಡೆದುಹೋದಂತೆ ಬದುಕು ಏರುಪೇರಾಗಿಲ್ಲ, ಅಲ್ಲಿ ಎದೆಯ ಅಭಿಮಾನ ಸ್ವಾಭಿಮಾನಗಳನ್ನು ಗರಿ ಮುರಿಯದ ಹಸುರು ನೋಟು ಎಣಿಸಿ ಕಾಯ್ದುಕೊಳ್ಳಬೇಕಾಗಿಲ್ಲ. ಅಲ್ಲಿ ದುಡಿಯುವವರನ್ನು ಕೂತು ನೋಡುವವರು, ಬರಿಗೈಯವರನ್ನು ಕಾಲ ಸಂಚಯಿಸಿಕೊಟ್ಟ ಸಂಪತ್ತಿನ ಒಡೆಯರು, – ಹಲ್ಲಿಯಿಂದ ಹಿಡಿದು ಹದ್ದಿನವರೆಗೆ ಚಿಕ್ಕವರನ್ನು ದೊಡ್ಡವರು – ಕಾನೂನುಬದ್ಧವಾಗಿಯೇ ಬಡಿದು ತಿನ್ನುವುದಿಲ್ಲ.

ಇಲ್ಲಿನ ನಾಗರಿಕತೆ ಸಂಸ್ಕೃತಿಗಳ ತಳದಲ್ಲಿ, ಮನುಷ್ಯ ಸ್ವಾರ್ಥಕ್ಕಾಗಿ ಎಲ್ಲವನ್ನೂ ಕಡಿದು ಸುಟ್ಟು ಹುಡಿ ಹುಡಿ ಮಾಡಿ ರೂಪಾಂತರಿಸಿ ಹಾಳುಗೆಡಹಿದ ರಸಗೊಬ್ಬರವಿದೆ. ಇಂಥ ರಸಗೊಬ್ಬರದ ಮೇಲೆ ಬೆಳೆದದ್ದು ಬೆಳೆಯೂ ಅಲ್ಲ; ಬೋದು ಬೆಳೆ; ಫಸಲು ಕಟ್ಟದ, ಪ್ರಮಾಣ ಮೀರಿ ಬೆಳೆದ ಕಾಂಡ ಮಾತ್ರ. ಇಂತಹ ವಿಕೃತಿಯ ಬಾಯಿಗೆ ಇನ್ನೂ ಸಿಕ್ಕದಿರುವ ಪ್ರಕೃತಿಯ ಚೊಚ್ಚಲ ಕೂಸು ನನ್ನ ಊರು.

## ಸಾದರ ಸ್ವೀಕಾರ

**ಸಮಾಜವಾದಿ ಹೋರಾಟಗಾರರ ಸಂದರ್ಶನ** (ಸಂಪುಟ ೧)
*ಬಿ. ಪೀರ್‌ಬಾಷ*
**ಪುಟ :** *೩೪೦* **ಬೆಲೆ : ರೂ. ೧೨೦**
ನಿರ್ದೇಶಕರು, **ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ - ೫೮೩ ೨೭೬

**ಧೀರ ಹುತಾತ್ಮ ಭಗತ್ ಸಿಂಗ್**
*ಸಂ. : ಡಾ॥ ಬಿ. ಆರ್. ಮಂಜುನಾಥ್*
**ಪುಟ :** *೧೧೦* **ಬೆಲೆ : ರೂ. ೨೦**
**ಡಾ॥ ಬಿ. ಆರ್. ಮಂಜುನಾಥ,** ನಂ. ೩೧, ೩ನೇ ಕ್ರಾಸ್, ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

**ಆರೆಮ್ಮೆಸ್ ನೆನಪುಗಳು** ಜಿ. ಎಸ್. ನಾಗೇಂದ್ರ
**ಪುಟ :** *೯೮* **ಬೆಲೆ : ರೂ. ೫೦**
**ಐಕ್ಯತಾ ಪ್ರಕಾಶನ,** ಆರ್.ಎಂ.ಎಸ್., ಕ್ಯೂ ವಿಭಾಗ, ಬೆಂಗಳೂರು - ೫೬೦ ೦೨೬

**ಪಂಪ ರಾಮಾಯಣ** (ಗದ್ಯ ಕಥಾನಕ)
ವಿದ್ವಾನ್ ರಾಮಚಂದ್ರ ಉಚ್ಚಿಲ್
*ಸಂ.: ಡಾ॥ ಶ್ರೀನಿವಾಸ ಹಾವನೂರ*
**ಪುಟ :** *೧೧೨* **ಬೆಲೆ : ರೂ. ೪೫**
**ಕಲಾಗಂಗೋತ್ರಿ ಯಕ್ಷಗಾನ ಅಧ್ಯಯನ ಕೇಂದ್ರ** (ರಿ), ಅಂಚೆ : ಸೋಮೇಶ್ವರ, ಉಚ್ಚಿಲ, ಮಂಗಳೂರು, ದ.ಕ.

**ಮದುವೆ ತಂದ ಮೋ(ಗೋ)ಜು** (ಹಾಸ್ಯ ಲೇಖನಗಳು)
ಕೃಷ್ಣಮೂರ್ತಿ ಕಲುಮಂಗಿ
**ಪುಟ :** *೧೦೨* **ಬೆಲೆ : ರೂ. ೯೦**
**ಅಭಿಜಿತ್ ಪ್ರಕಾಶನ,** ಎ/೪೦೪, ವಿನಾಯಕ ಆಶಿಷ್, ಪಿ ಆ್ಯಂಡ್ ಟಿ ಕಾಲೋನಿ ಹತ್ತಿರ, ಎಂ.ಎಂ.ಎಂ. ರಸ್ತೆ, ಮುಳುಂಡ್ (ಪ.), ಮುಂಬಯಿ - ೪೦೦ ೦೮೦

**ಸುವರ್ಣ ಕನ್ನಡ ಕವಿತೆ** (ವಿವಿಧ ಕವಿಗಳ ಕವನಗಳು)
*ಸಂ. : ಪ್ರೊ॥ ಡಿ. ಲಿಂಗಯ್ಯ*
**ಪುಟ :** *೯೬* **ಬೆಲೆ : ರೂ. ೫೦**
**ಕರ್ನಾಟಕ ಲೇಖಕರ ಸಂಘ,** ನಂ. ೭೫, ಡಾ॥ ಅ.ನ.ಕೃ. ರಸ್ತೆ, ವಿಶ್ವೇಶ್ವರಪುರ, ಬೆಂಗಳೂರು - ೫೬೦ ೦೦೪

**ಚಿಲುಮೆ** (ಚಿಂತನ ಬರಹಗಳು) ಸಿ.ಪಿ.ಕೆ.
**ಪುಟ :** *೧೨೦* **ಬೆಲೆ : ರೂ. ೬೦**
**ಸಂವಹನ,** ೧೨/೧ಎ – ಈವನಿಂಗ್ ಬಜಾರ್ ಹಿಂಭಾಗ, ಶಿವರಾಂ ಪೇಟೆ, ಮೈಸೂರು - ೫೭೦ ೦೦೧

**ಕವಿತೆ ನಿಲ್ಲುವುದಿಲ್ಲ** (ಸುನೀತಗಳು) ಸಿ.ಪಿ.ಕೆ.
**ಪುಟ :** *೬೮* **ಬೆಲೆ : ರೂ. ೪೦**
**ಚಿತ್ರಭಾನು ಪ್ರಕಾಶನ,** ೨೨೬೫/೧೯, 'ಭಾರತಿ', ೬ನೇ ಕ್ರಾಸ್, ೪ನೇ ಮೈನ್, ವಿನಾಯಕನಗರ, ಮೈಸೂರು- ೫೭೦ ೦೧೨



# ಬೆಳಗಿನ ಸುದ್ದಿಗಳು

**ಸೋ**ಹೋ ಬಾಹ್ಯಾಕಾಶ ದೂರದರ್ಶಕದ ಚಿತ್ರಗಳನ್ನು ಅನೇಕ ವಿದ್ಯಾರ್ಥಿಗಳು ಇಂಟರ್‌ನೆಟ್‌ನಲ್ಲಿ ವೀಕ್ಷಿಸಿರುವುದಾಗಿ ತಿಳಿಸಿದ್ದಾರೆ. ಬುಧ ಗ್ರಹವನ್ನು ಕಂಡಿರುವುದರಿಂದ ಆಸಕ್ತಿ ಹೆಚ್ಚಿದೆ. ಆಗ ಸೂರ್ಯನ ಪಕ್ಕದಲ್ಲಿ ಚಿತ್ರಾ ಕೂಡ ಕಂಡಿತು. ಸೂರ್ಯ ಮುನ್ನಡೆದಿದೆ. ಅದರರ್ಥ ಚಿತ್ರಾ ಬೆಳಗಿನ ಜಾವ ಕಾಣುತ್ತಿದೆ. ಇದನ್ನು ಗುರುತಿಸಲು ಒಳ್ಳೆಯ ಅವಕಾಶವಿದೆ. ಬುಧ ಗ್ರಹವನ್ನು ಬೆಳಗಿನ ಜಾವದಲ್ಲಿ ಈ ತಿಂಗಳು ಕಾಣಬಹುದು. ಮೊದಲ ವಾರದಲ್ಲಿ ಚಿತ್ರಾ ನಕ್ಷತ್ರದ ಪಕ್ಕದಲ್ಲೇ ದಿನದಿಂದ ದಿನಕ್ಕೆ ಅದರ ಸ್ಥಾನ ಕ್ರಮೇಣ ಬದಲಾಗುವುದನ್ನು ಗಮನಿಸುವುದು. ೮ರಂದು ಅದನ್ನು ನೋಡಲು ಉಂಟು ಸದವಕಾಶ; ಸಂಜೆಗೆಂಪಿನ ಎತ್ತರವನ್ನು ದಾಟಿ ಸ್ಪಷ್ಟವಾಗಿ ಕಾಣುತ್ತದೆ. ಅದರ ಜೊತೆಗೆ ಶುಕ್ರ, ಶನಿ ಗ್ರಹಗಳೂ ಪೂರ್ವದಲ್ಲೇ ಕಾಣುತ್ತವೆ. ೨೮ರಂದು ಶುಕ್ರದ ಪಕ್ಕ ಅದೇ ಚಿತ್ರಾ ನಕ್ಷತ್ರ ಕಾಣುತ್ತದೆ. ಪಶ್ಚಿಮ ದಂಚಿನಲ್ಲಿ ಮಂಗಳ ಸಹ ಬೆಳಗಿನ ಜಾವ ಕಾಣುವುದು. ಕ್ರಮೇಣ ಮಂಗಳದ ಪ್ರಕಾಶ ಹೆಚ್ಚಾಗುವುದನ್ನು ಗಮನಿಸಿ. ಮುಂದಿನ ತಿಂಗಳು ಸುದ್ದಿ ಮಾಡುವ ಸಿದ್ಧತೆ ಇದು.

ಮೊದಲವಾರ ಈ ಮೂರೂ ಗ್ರಹಗಳನ್ನು ವೀಕ್ಷಿಸಲು ಸೂಕ್ತವಾಗಿದೆ. ತಿಂಗಳ ಕೊನೆಗೆ ಬುಧ ಕಾಣದಾಗುತ್ತದೆ; ಮಂಗಳ ತೀರಾ ಅಂಚಿಗೆ ಸರಿದಿರುತ್ತದೆ.

ಉ
ಪೂ
ಪ
ದ
ಕುಂತಿ
ಪಾರ್ಥ
ದ್ರೌಪದಿ
ರಾಜಹಂಸ
ವೀಣಾ
ವೃಷಭ
ಮೇಷ
ನಕುಲ
ಮೀನ
ಗರುಡ
ವೈತರಣೀ
ಕುಂಭ
ಮಕರ
ದಕ್ಷಿಣಮೀನ
ಧನು
ಗುರು
ಬಕ

ಸಂಜೆಯ ಆಕಾಶದಲ್ಲಿ ನಮ್ಮ ಗೆಲಾಕ್ಸಿ ಆಕಾಶಗಂಗೆಯ ಸುಂದರ ನೋಟವಿದೆ. ಗುರುಗ್ರಹದ ಹೊರತಾಗಿ ಯಾವ ಪ್ರಕಾಶಮಾನ ಚುಕ್ಕೆಯೂ ಇಲ್ಲ. ಅದು ವೃಶ್ಚಿಕರಾಶಿಯಲ್ಲಿ ಕಾಣುವುದು. ೧೨ರಂದು ಚಂದ್ರ ಅದರ ಪಕ್ಕದಲ್ಲಿಯೇ ಕಾಣುವುದು. ಧನುರಾಶಿಯಲ್ಲಿನ ಆಕಾಶಗಂಗೆಯ ಕೇಂದ್ರದ ಭಾಗವನ್ನು ಚಂದ್ರನಿಲ್ಲದಾಗ ಕಾಣಬಹುದು. ಈಶಾನ್ಯದಲ್ಲಿ ರಾಜಹಂಸ (ಸಿಗ್ನಸ್), ಲೈರಾ (ವೀಣಾ) ಮತ್ತು ಅಕ್ವಿಲಾ (ಗರುಡ) ಇವು ಕಾಣುತ್ತವೆ. ಪೂರ್ವದಲ್ಲಿ ಮೇಷವನ್ನು ಗುರುತಿಸಬಹುದು. ಸ್ವಲ್ಪ ಎತ್ತರದಲ್ಲಿ ಮೀನ ಮತ್ತು ನಕುಲ (ಪೆಗಸಸ್) ಪುಂಜಗಳಿವೆ.

ರಾತ್ರಿ ಸುಮಾರು ಎಂಟು ಗಂಟೆಗೆ ಗುರುಗ್ರಹ ಪಶ್ಚಿಮದಲ್ಲಿ ಕಂತಿದ ಮೇಲೆ ಯಾವುದೇ ಗ್ರಹ ಕಾಣದೆ ಆಕಾಶ ಬರಿದಾದಹಾಗೆ ಕಾಣುತ್ತದೆ. ಈ ಕೊರತೆಯನ್ನು ತುಂಬುವುದಕ್ಕಾಗಿಯೋ ಎಂಬಂತೆ ಮಂಗಳ ಉದಯಿಸುತ್ತದೆ. ದಿನೇ ದಿನೇ ಪ್ರಕಾಶಮಾನವಾಗುತ್ತಿರುವ ಮಂಗಳ ಗ್ರಹ ಕಳೆದ ತಿಂಗಳು ಮಿಥುನರಾಶಿಯಲ್ಲಿತ್ತು. ಈಗ ಇದರ ಚಲನೆಯನ್ನು ಗುರುತಿಸುವುದು ಸ್ವಾರಸ್ಯಕರವಾಗಿರುವುದು. ಏಕೆಂದರೆ ೧೫ರಂದು ಅದು ಚಲಿಸದೆ ತಟಸ್ಥವಾಗಿರುವಂತೆ ಕಾಣುವುದು. ೧ರಂದು ಬುಧ ಗ್ರಹವೂ ತಟಸ್ಥವಾಗುವುದಾದರೂ ಅದನ್ನು ಗುರುತಿಸುವುದು ಕಷ್ಟ.

ಈ ತಿಂಗಳಲ್ಲಿ ಎರಡು ಬೇರೆ ಬೇರೆ ಧೂಮಕೇತುಗಳ ತುಣುಕುಗಳು ಉಲ್ಕೆಗಳಾಗಿ ಸುರಿಯುವುವು. ೫ರ ಬೆಳಗಿನ ಜಾವ ವೃಷಭದಿಂದ ಹೊರಟಂತೆ ಕಾಣುವ ಟೌರಿಡ್ಸ್ ಉಲ್ಕಾವೃಷ್ಟಿ ಇದೆ. ಕ್ಷೀಣವಾದ ಉಲ್ಕೆಗಳು ಗಂಟೆಗೆ ಹತ್ತಿಪ್ಪತ್ತು ಕಾಣಬಹುದು. ಇನ್ನೊಂದು ೧೭ರ ಬೆಳಗಿನ ಜಾವದ ಉಲ್ಕಾವೃಷ್ಟಿ ಗಂಟೆಗೆ ಇಪ್ಪತ್ತರಿಂದ ನಲವತ್ತು ಪ್ರಕಾಶಮಾನವಾದ ಉಲ್ಕೆಗಳು ಕಾಣುವುವು. ಸಿಂಹರಾಶಿಯಿಂದ ಈ ಉಲ್ಕೆಗಳು ಹೊರಟಂತೆ ಕಾಣುವುದರಿಂದ ಲಿಯೋನಿಡ್ಸ್ ಎಂಬ ಹೆಸರಿದೆ.

ಹುಣ್ಣಿಮೆಯ ಚಂದ್ರನನ್ನು ಮರೆಯದೆ ನೋಡಿ. ಅದರ ಪಕ್ಕದಲ್ಲೇ ಕಾಣುವ ಕೃತ್ತಿಕಾ ನಕ್ಷತ್ರ ಗುಚ್ಛವೇ ಈ ತಿಂಗಳ ಹೆಸರಿಗೆ (ಕಾರ್ತಿಕ) ಕಾರಣ.

## ಖಗೋಳ ದಿನಚರಿ

**ನವೆಂಬರ್**

೧ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೪ ಚಂದ್ರ - ಶನಿ ಸಮಾಗಮ (೨ ಡಿಗ್ರಿ)
೫ ಶುಕ್ರ - ಚಂದ್ರ ಸಮಾಗಮ (೩ ಡಿಗ್ರಿ)
ಟೌರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೮ ಬುಧ - ಚಂದ್ರ - ಚಿತ್ರಾ ಸಮಾಗಮ * (೮ ಡಿಗ್ರಿ);
ಬುಧ ಗ್ರಹದ ಗರಿಷ್ಠ ಕೋನೋನ್ನತಿ *
೯ ಚಂದ್ರ - ಭೂಮಿ ಗರಿಷ್ಠ ಅಂತರ
೧೦ ಅಮಾವಾಸ್ಯೆ (೦೪:೩೩ಕ್ಕೆ)
೧೧ ಗುರು - ಚಂದ್ರ ಸಮಾಗಮ * (೫ ಡಿಗ್ರಿ)
೧೫ ಮಂಗಳ ತಟಸ್ಥ (ಹಿನ್ನಡೆ ಆರಂಭ)
೧೭ ಚಾಂದ್ರಮಾಸದ ಪ್ರಥಮ ಪಾದ (ಚಂದ್ರಾಸ್ತ ನಡುರಾತ್ರಿಗೆ)
ಲಿಯೋನಿಡ್ಸ್ ಉಲ್ಕಾ ವೃಷ್ಟಿಯ ಗರಿಷ್ಠ ಚಟುವಟಿಕೆ
೨೪ ಚಂದ್ರ - ಭೂಮಿ ಅಂತರ ಕನಿಷ್ಠ
ಹುಣ್ಣಿಮೆ ೨೦:೦೦ಕ್ಕೆ
೨೭ ಚಂದ್ರ - ಮಂಗಳ ಸಮಾಗಮ * (೨ಡಿಗ್ರಿ)
-೨೮ ಶುಕ್ರ - ಚಿತ್ರಾ ಸಮಾಗಮ * (೫ಡಿಗ್ರಿ)
ಡಿಸೆಂಬರ್ ೧ ಚಂದ್ರ - ಶನಿ ಸಮಾಗಮ
೬ ಚಂದ್ರ - ಶುಕ್ರ ಸಮಾಗಮ

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಸಿಟಿಯೊಳಗೆ ಒಂದು ಮನೆಯ ಮಾಡಿ

‘ಬೆಟ್ಟದಾ ಮೇಲೊಂದು ಮನೆಯ ಮಾಡಿ ಮೃಗಗಳಿಗೆ ಅಂಜಿದೊಡೆ ಎಂತಯ್ಯ’ ಎಂದು ಮುಂತಾಗಿರುವ ವಚನಕ್ಕೆ ಅಕ್ಕನ ಕ್ಷಮೆಕೋರಿ ‘ಸಿಟಿಯೊಳಗೆ ಒಂದು ಮನೆಯ ಮಾಡಿ ಬಂಧು, ಮಿತ್ರರಿಗೆ ಅಂಜಿದೊಡೆ ಎಂತಯ್ಯ’ ಎಂದು ಸೇರಿಸಬೇಕೆಂದಿರುವೆ. ಅದಕ್ಕೆ ಕಾರಣಾನೂ ಹೇಳಿಬಿಡತೀನಿ. ನನಗೆ ಚಿಕ್ಕಂದಿನಿಂದಲೂ ದೊಡ್ಡ ಅಪೇಕ್ಷೆ ಒಂದಿತ್ತು. ಮನೆ, ಕಾರು, ಒಡವೆ, ವಸ್ತ್ರ ಇತ್ಯಾದಿ ಖರೀದಿಸುವ ಆಸೆ ಅಂತೂ ಖಂಡಿತ ಅಲ್ಲ. ಇಂತಹದರ ಆಸೆ ಇದ್ದಿದ್ರೆ ಆಸ್ತಿನರ ಆಗಿರೋದು. ‘ಸಿಟಿಯೊಳಗೆ ಮನಿ ಹೂಡಬೇಕು. ದೊಡ್ಡವನಾದ ಮೇಲೆ’ ಎಂಬ ಬಯಕೆ ನನ್ನದು. ಇದೇನು. ಮಹಾ ಆಸೆ ಅಂತ ತಮಗಳಿಗನಿಸಿದರೂ ಅದೇ ನನಗೆ ಬದುಕಿನ ಗುರಿಯಾಗಿತ್ತು. ಚಿಕ್ಕವನಿರೋ ಕಾಲಕ್ಕೆ ಪ್ಯಾಟಾಗಿನ ನೆಂಟರ ಮನಿಗೆ ಹೋಗುತ್ತಿದ್ದಾಗ ಅಲ್ಲಿನ ಸಿಸ್ಟಾಮೆಟಿಕ್ ಜಗತ್ತು, ಜೀವನಾನ ಎಲ್ಲಾ ನೋಡತಾ ಇದ್ರೆ, ಬಿಟ್ಟ ಬರಾಕ ಮನಸು ಆಗತಿರಲಿಲ್ಲ. ದೊಡ್ಡವನಾಗಿ ನೌಕ್ರಿ ಸಿಕ್ಕ ಮೇಲಾದ್ರೂ ನೆನಪಾಗುತ್ತಂತ ಅನಕೊಂಡಿದ್ದೆ. ಇದ್ದ ಊರಾಗ ನೌಕ್ರಿ ಪೋಸ್ಟಿಂಗ್ ಆದ ಮೇಲೆ ಅದು ಒಂದು ತರಹ ಖುಷಿ ಅನಿಸಿದರೂ ಕನಸು ಮಾತ್ರ ಹಾಗೆ ಉಳಿದಿತ್ತು. ಒಂದು ಸಾರಿ ಅದೃಷ್ಟಕ್ಕೆ ಲಾಟ್ರಿ ಡ್ರಾ ಹೊಡೆದಾಂಗ ರಾಯಚೂರಿಗೆ ನಿಯೋಜನೆ (ಡೆಪುಟೇಷನ್) ಕೊಟ್ಟ ಮೇಲಂತೂ ನನಗಾದ ಖುಷಿಗೆ ಪಾರವೇ ಇರಲಿಲ್ಲ. ಈ ನೆವದಾಗಾದ್ರೂ ಸಿಟಿಯಾಗ ಮನಿಮಾಡಿ ಸಂಭ್ರಮಿಸಬಹುದಲ್ಲ ಅಂತ ಅನಕೊಂಡೆ. ಒಂದು ವರ್ಷಕ್ಕೆ ಯಾಕ ಮನಿ ಕಿತ್ತೋದು ಅಂತ ಹೆಂಡ್ತಿ ಹಠ ಹಿಡಿದ್ರೂ ಮಾತ ಕೇಳದೆ ರಾಯಚೂರು ಸಿಟಿಗೆ ಶಿಫ್ಟ ಮಾಡಿದೆ.

ಮದುವೆಯ ಮೊದಮೊದಲ ದಿನಗಳ ಸಂಭ್ರಮ ಹಾಗೇ ಇರುತ್ತೇನ್ರಿ? ಸಂಸಾರದ ರುಚಿ ಮೊದಮೊದಲು ಖುಷಿ, ಆಮೇಲೆ ಕಸಿವಿಸಿ ತಾನೆ? ಈ ಮಾತು ನನ್ನ ಸಿಟಿ ಬದುಕಿಗೂ ಅನ್ವಯಿಸುವ ಕಾಲ ದೂರ ಉಳಿಲಿಲ್ಲ. ‘‘ನಮ್ಮ ದೇಸಾಯಿ ಹ್ಯಾಂಗೂ ಮನಿ ಮಾಡ್ಯಾನಲ್ಲ. ರಾಯಚೂರಿಗೆ ಹೋದ್ರ ವಸತಿಗ್ಯಾಕೆ ಚಿಂತಿ. ಮಜಾ ಮಾಡಿ ಬರುವಾ’’ ಅಂತ ನೆಪ ಮಾಡಿಕೊಂಡು ಬರೋ ಊರ ಬಳಗ ಜಾಸ್ತಿ ಆಯ್ತು. ಮೊದಮೊದಲು ಊರುಬಿಟ್ಟು ಬಂದ್ರೂ ಅಭಿಮಾನಕ್ಕೆ ಮನಿಗೆ ಬಂದು ಹೋಗ್ತಾರಲ್ಲ ಅಂತ ಹಿಗ್ಗಿ ಹೀರಿಕಾಯಿ ಆಗ್ತಿದ್ದೆ. ಅಕ್ಕಪಕ್ಕದವರ ಮುಂದೆ ಸೊಕ್ಕಿನಿಂದ ಕೊಚ್ಚಿಕೋತಿದ್ದೆ. ಆದರೆ ಅದನ ಕಂಟಿನ್ಯೂ ಆದಾಗ... ‘ಬಿಸಿತುಪ್ಪ ನುಂಗೋಹಾಗಿಲ್ಲ ಉಗುಳೋ ಹಾಗಿಲ್ಲ.’ ಏನಾದ್ರೂ ಬಾಯಿಬಿಟ್ರ ‘‘ಹುಟ್ಟಿ ಬೆಳೆದ, ನಮ್ಮಪ್ಪ ದೊಡ್ಡ ಹೆಸರು ಮಾಡಿದ ಊರು ಎಂತವರ ಮಗ, ದೇಸಾಯಿ, ಹಿಂಗ ಮಾಡಿದನಪ ರಾಯಚೂರಿಗೆ ಹೋದಾಗ’’ ಅಂತ ಸುದ್ದಿ ಆದರ ‘ಮರಳಿ ಪುಟ್ಟದ ಪುರಕೆ ಪೋಗಲು ಮನಸು ಬರುವುದೆ. ಪೋದರು ಗೌರವ ಪುಳಿಯುವುದೇ ?’

ಬಂದ ಸ್ನೇಹಿತರೂ, ಹಿರಿಯ ಬಂಧುಗಳೂ ಸೂಕ್ಷ್ಮವಾಗಿ ಇದ್ದು ಹೋಗಾರ ? ಕಟ್ಟೆ ಮೇಲೆ ಕುಳಿತು ಲೋಕಾಭಿರಾಮವಾಗಿ ಮಾತಾಡತಾ ಶಬ್ದಮಾಲಿನ್ಯದ ಜೊತೆಗೆ ಅಂಗಳದ ತುಂಬಾ ಕೆಂಪು ಚಿತ್ತಾರ ಹಾಕಿ ಹೇಸಿಗೆ ಹುಟ್ಟಿಸುತ್ತಿದ್ದರು. ಹಳ್ಳಾಗಿನ ಪ್ರೀತಿಬಾಂಧವ್ಯಕ್ಕ ಹತ್ತೆಂಟು ಜನ ಬಂದು ಹೋಗೋದನ್ನ ನೋಡಿ ಸಂಪ್ರದಾಯವಾದಿಗಳ ಓಣಿಯಲ್ಲಿದ್ದ ನಾನು ಅವರುಗಳ ಕೆಂಗಣ್ಣಿಗೆ ಗುರಿಯಾಗಿದ್ದೆ.

ಊರವರದು ಬಿಡಿ ಹೇಗಾದ್ರೂ ಮ್ಯಾನೇಜ್ ಮಾಡಬಹುದಾಗಿತ್ತು. ಅದೇ ನೆಂಟ್ರು, ಅವರ ಕತಿನ ಬೇರೆ. ಊರಲ್ಲಿದ್ದಾಗ ಮನಿಗೆ ಬರ್ರ್ಯೋऽऽ... ಅಂತ ಹೊಯ್ಕತಿದ್ರೂ ಬರದ ಬಂಧುಗಳು ಸಿಟಿಯಾಗ ಶಿಫ್ಟ ಆದ ಮೇಲೆ ಕರಿಲಿದ್ರೂ ಬರೋದು ಮರಿಲಿಲ್ಲ. ‘‘ಬಾಳ ಒತ್ತಾಯಸ್ತಿದ್ದ ದೇಸಾಯಿ, ಬರಕ ಆಗತಿರಲಿಲ್ಲ. ಈಗ ನೀನು ಆ ಬಗ್ಗೆ ಬೇಜಾರುಪಟ್ಟುಕೊಳ್ಳೋ ಅವಶ್ಯಕತೆನ ಇಲ್ಲ. ಅನುಕೂಲ ಮಾಡಿಕೊಂಡು ಮಕ್ಕಳು ಮರಿನ ಜೊತೆಗೆ ಕಟ್ಟಿಕೊಂಡು ಬಂದು ನಾಲ್ಕು ದಿನ ರಜೆ ಕಳೆದು ಹೋಗ್ತಿವಿ. ಸಿಟಿಯಾಗೆ ಹೇಗಿದ್ರೂ ಕೆಲಸ ಇರತಾವಲ್ಲ’’ ಅಂತ ಫೋನ್ ಮಾಡಿದ ನಾಲ್ಕ ದಿನಕ್ಕ ಕಾಲಿಟ್ಟಿರೋರು. ಅವರಿಗೆಲ್ಲ ಉಪಚರಿಸಿ ಕಳಿಸಿಕೊಟ್ಟು ಉಸ್ಸಪ ಅಂತ ಕುಳಿತಿರುವಾಗಲೇ ಇನ್ನೊಬ್ಬರು ಒಕ್ಕರಿಸಿರೋರು. ಹೀಗೇ ಮದಿವಿ ಬಟ್ಟೆ, ಬಂಗಾರ ಖರೀದಿ, ವಾಹನ ಖರೀದಿ, ಕನ್ಯಾ ನೋಡಕ, ಆಸ್ಪತ್ರೆಗೆ ಅಂತ ನಾನಾ ಕಾರಣಕ್ಕೆ ಬರೋ ನೆಂಟ್ರಿಂದ ಮನೆ ಯಾವತ್ತೂ ಹೌಸ್‌ಫುಲ್ ಆಗಿರುತ್ತಿತ್ತು. ಜಿಪುಣ ಮಾವನೊಬ್ಬ ‘‘ದೇಸಾಯಿ ಭಾಳ ಛಲೋ ಮಾಡಿದಪ ಸಿಟಿಯಾಗ ಮನಿಮಾಡಿ. ನಿನ್ನ ಈ ಡೆಪ್ಯುಟೇಶನ್ ಕಾಯಂ ಆಗಲಿ ಅಂತ ಬೇಡಿಕೊಳ್ಳತಿನಿ ಕಣಯ್ಯ’’ ಎಂದು ಹಾರೈಸ್ತಿದ್ದಾಗ ಬಾಳ ಸಂತೋಷ ಆಗತಿತ್ತು. ಮಾತು ಮುಂದುವರೆಸಿ ‘‘ಯಾಕೆಂದ್ರ ರಾಯಚೂರಿಗೆ ಯಾವಗರ ಬರ್ಲಿ ಲಾಡ್ಜ್‌ಗೆ ರೊಕ್ಕ ಬಡದು ಬಡದು ಸಾಕಾಗುತ್ತಿತ್ತು. ಆದರ ಈಗ ಆ ಚಿಂತಿ ದೂರಾಯ್ತು ಕಣಯ್ಯ’’ ಎಂದಾಗಲೇ ಚಿಂತಿ ಸುರುವಾಗಿದ್ದು. ಬರಲಿ, ಇರಲಿ, ಮಾಡಲಿ, ಅವನ್ನೆಲ್ಲ ಸಹಿಸಬಹುದಾಗ್ತಿತ್ತಾದ್ರೂ ಉಪಕಾರ ಮಾಡಿಯೂ ಕೆಲ ಅಪಸ್ವರಗಳು ನಮ್ಮ ಮೇಲೆ ಬಂದ ಮೇಲೆ ಚಿಂತಿ ಇನ್ನೂ ಹೆಚ್ಚಾಯ್ತು.

ಮದುವಿಗೆ ಬಟ್ಟೆ ಖರೀದಿಗೆ, ಒಡವೆ ಖರೀದಿಗೆ ಬರೋ ನೆಂಟ್ರೂ ನಿಮ್ಮ ಪರಿಚಯದ ಅಂಗಡಿಗೆ ಕರಕೊಂಡು ಹೋಗಿ ಅಂತ ದುಂಬಾಲು ಬಿದ್ದಾಗ ನನ್ನವಳು ಸ್ಟೇಟಸ್ ತೋರ್‍ಸಾಕ ಬರತ್ತಂತ ಪರಿಚಯದ ಸೇಟ್‌ಜಿ ಅಂಗಡಿಗೆ ಕರಕೊಂಡು ಹೋಗಿರೋಳು. ಖರೀದಿ ಮಾಡಿದ ಮೇಲೆ ದುಡ್ಡು ಕಮ್ಮಿ ಬಿದ್ದರೆ ನನ್ನವಳಿಗಿಂತ ಮೊದಲೇ ಅಂಗಡಿ ಸೇಟುಗಳು, ‘‘ಓ ನಮ್ಮ ದೇಸಾಯಿ ಸಾಬ್ ಕೀ ನೆಂಟ್ರು. ಲೇ ಜಾವೋಜಿ. ಪೈಸೆ ಬಾದ್ ಮೇ ಭೇಜೋ. ದೇಸಾಯಿ ಸಾಬ್ ಹೈ ನ ಹಮಕೊ’’ ಅಂತ ತುಂಬಿ ಕಳಸ್ತಿದ್ದ. ಬಾಕಿ ಸರಿಯಾದ ಸಮಯಕ್ಕೆ ಬಾರದಿದ್ದಾಗ ‘ದೇಸಾಯಿಜಿ’ ಅಂತ



ಗುಂಡುರಾವ್ ದೇಸಾಯಿ ಮಸ್ಕಿ

ಫೋನ್ ಮಾಡೋನು. ಒಯ್ದು ಬಂಧುಗಳಿಗೆ ಫೋನ್ ಮಾಡಿದ್ರೆ ''ನೀವೇ ನೋಡಿದ್ರಲ್ಲ ಎಷ್ಟು ಲಗ್ನಕ್ಕೆ ಖರ್ಚು ಆಯ್ತು ಅಂತ. ಹೇಗಾದ್ರೂ, ನೀವೇ ಮ್ಯಾನೇಜ್ ಮಾಡಿ, ಕೊಡೋಣ'' ಅಂದಾಗ ನೆಂಟರಿಷ್ಟರಿಗೆ ಆಗಲ್ಲ ಅಂದ್ರ ದೊಡ್ಡ ಪ್ರಮಾದವಾಗುತ್ತೆ ಅಂತ ಬಾಕಿ ಚುಕ್ತಾ ಮಾಡುತಿದ್ದೆ. ನನ್ನ ಸೊಕ್ಕ ಮುರಿಲಿಕ್ಕೊ ಅಥವಾ ಸಿಟಿ ಬಗ್ಗೆ ವೈರಾಗ್ಯ ಭಾವನೆ ತಾಳಲಿ ಅಂತಾನೋ ನಾನು ಸಿಟಿಗ ನಿಯೋಜನೆ ಆದ ವರ್ಷವೇ ಹತ್ತಾರು ಲಗ್ನಗಳ ಫಿಕ್ಸ್ ಆಗಬೇಕೆ ನೆಂಟರ ಮನೆಗಳಲ್ಲಿ! ಮದಿವಿಗೆ ಬಟ್ಟೆ ಕೊಡಿಸೋ ನನ್ನವಳ ಕಾರ್ಯ ಹೀಗೆ ನಡೀತಿರಬೇಕಾದ್ರೆ, ಬಂಧುಗಳೊಬ್ಬರು ಮದುವೆಗಾಗಿ ಸೀರೆ ಒಯ್ದಾಗ, ರೇಟ್ ಫರಕ್ ಆಗೋದರ ಜೊತೆಗೆ ಡ್ಯಾಮೇಜ್ ಆದ ಸೀರೆಗಳು ಒಯ್ದ ಬಟ್ಟೆ ಗಂಟುಗಳಲ್ಲಿ ಅಕಸ್ಮಾತ್ತಾಗಿ ಬಂದಾಗ ''ದೇಸಾಯಿ ದಂಪತಿಗಳು ಮದುವೆ ಬಟ್ಟೆ ಕೊಡಿಸೊ ನೆಪದಾಗ ಸುಡುಗಾಡ ಬಟ್ಟೆಗಳನ್ನ ಜಾಸ್ತಿ ರೇಟಿಗೆ ಕೊಡಿಸಿ ಕಮಿಷನ್ ಹೊಡಿತಾರೆ'' ಅಂತ ಸುದ್ದಿಯಾದಾಗ ಎಲ್ಲಿಗರ ಹೋಗಾಕ ಭಯ ಆಯ್ತು. ನೋಡಿ, ತಿಂದದ್ದಲ್ಲ ಬಿಟ್ಟದ್ದಲ್ಲ. ಅಪವಾದ ಮಾತ್ರ ತಪ್ಪಲಿಲ್ಲ.

## ಸಾವು

ಹಸಿವು ತಾಳದೆ
ಅಳುತ್ತಿರುವ
ಮಗುವಿನ
ಕಣ್ಣುಗಳಲ್ಲಿ
ದೇವರ ಹೆಣ
ತೇಲುತ್ತಿದೆ

**ರವಿಶಂಕರ ಒಡ್ಡಂಬೆಟ್ಟು**
ಅಭ್ಯುದಯ ಪ್ರೆಸ್ ಬಳಿ
ಕನ್ಯಾನ ಅಂಚೆ - ೫೭೪ ೨೭೯
ದಕ್ಷಿಣ ಕನ್ನಡ ಜಿಲ್ಲೆ

ಇನ್ನು ಸಿಟಿಯೊಳಗ ಮನಿಮಾಡಿದ ಮೇಲೆ ಬಾದರಾಯಣ ಸಂಬಂಧ ಹೇಳಿಕೊಂಡು ಬರುವ ಜನನೂ ಬಾಳಾದ್ರು. ಆ ಎಲ್ಲಾ ಬಾದರಾಯಣಿಗಳ ಉದ್ದೇಶ ಒಂದೇ ಇರುತ್ತಿತ್ತು. ರಾತ್ರಿ ತಂಗುವ ನೆಪಕ್ಕಾಗಿ ಹಿರಿಯರ, ನಮ್ಮ ತಂದೆಯವರ ಬಗ್ಗೆ ಹೇಳಿ ನಾವು ಸಾಕ್ಷಾತ್ ಅವರ ಅಪರಾವತಾರ ಅಂತ ಹೊಗಳಿ ಅಟ್ಟಕ್ಕೇರಿಸುತ್ತಿದ್ರು. ನಾನು ಅಷ್ಟಕ್ಕೆಲ್ಲ ಅವಕಾಶ ಕೊಡದೆ ''ಆಯ್ತು, ತುಂಬಾ ಸಂತೋಷ ಬಂದಿದ್ದು. ಬೆಳಿಗ್ಗೆ ಹೋಗುವಿರಂತೆ'' ಎಂದು ಮುಂದಿನ ವ್ಯವಸ್ಥೆಗೆ ಸಿದ್ಧಮಾಡುತ್ತಿದ್ದೆ.

ಸಿಟಿಯೊಳಗ ಮನಿ ಮಾಡಿದ್ರ ಹ್ಯಾಂಗಿರಬಹುದು ಅಂತ ಚಿಕ್ಕ ವಯಸ್ಸಿನಿಂದ ಕಂಡ ಕನಸು ಸುಳ್ಳು ಅನಸಕತ್ತಿತು. ಸಿಟಿಯಲ್ಲಿದ್ರ ತೂಕ ಹೆಚ್ಚಾಗುತ್ತೆ ಅನಕೊಂಡಿದ್ದೆ. ಸಿಟ್ಯಾಗಿನ ಜೀವನದ ಒತ್ತಡಕ್ಕ ದೇಹದ ತೂಕ ಇಳಿತಾದ್ರೂ ಖರ್ಚಿನ ತೂಕ ಮಿತಿಮೀರಕತಿತ್ತು.

ಒಮ್ಮೆ ಪಕ್ಕದ ಮನಿ ಸ್ನೇಹಿತನೊಡನೆ ಈ ಸಂಬಂಧವಾಗಿ ಮಾತಾಡತಾ ಕುಳಿತಿರಬೇಕಾದ್ರೆ ಅವರು ಹೇಳಿದ್ರು ''ದೇಸಾಯಿ ನೀವೇ ಏನೇ ತಿಳಿದುಕೊಳ್ಳಿ. ಸಿಟಿಯಾಗ ಲೈಫ್ ಸರ್ವ ಮಾಡಕ ಅನ್‌ಫಿಟ್ ಇದ್ದಿರಿ'' ಎಂದಾಗ ನನಗ ಶಾಕ್ ಹೊಡೆದಂಗಾತು. ಬಯಸಿ ಸಿಟಿಗೆ ಬಂದಿದ್ದೆ. ಪ್ರೆಸ್ಟಿಜ್‌ಗೆ ಧಕ್ಕೆ ತರುವಂತಹ ಮಾತನ್ನು ಕೇಳಿ ದಿಗ್ಭ್ರಮೆಯಾಯಿತು. ''ದೀಕ್ಷಿತ್, ನಿಮ್ಮಿಂದ ಇಂತ ಮಾತನ್ನ ನಿರೀಕ್ಷಿಸಿರಲಿಲ್ಲ. ಜೋಕ್ ಮಾಡ್ತಿದ್ದೀರಾ ತಾನೆ ? '' ಎಂದೆ.

''ಇಲ್ಲ ದೇಸಾಯಿ, ಗಂಭೀರವಾಗೆ ಹೇಳ್ತಿದ್ದೀನಿ. ನೀವು ತಪ್ಪು ತಿಳಕೊಂಡ್ರು ಪರ್ವಾಗಿಲ್ಲ. ಸಿಟಿಯೊಳಗ ಇರಬೇಕಾದ್ರ ಕೆಲವೊಂದು ರೂಲ್ಸ ಫಾಲೋ ಅಪ್ ಮಾಡಬೇಕಾಗುತ್ತೆ. ಹಾಗೆ ಮಾಡಿದ್ರೆ ಮಾತ್ರ ಸಿಟಿಲಿ ಬದುಕೋಕೆ ಸಾಧ್ಯ.''

''ರೂಲ್ಸಾ?... ಫಾಲೋ ಅಪ್ಪಾ?... ನೀವೇನು ಹೇಳ್ತಿದ್ದೀರೋ ಒಂದೂ ಅರ್ಥವಾಗ್ತಾ ಇಲ್ಲ'' ಎಂದೆ.

''ನೀವು ಹಿಂಗೆ ಬರುವ ಸ್ನೇಹಿತರಿಗೆ, ಬಂಧುಗಳಿಗೆ ಸತ್ಕರಿಸಿದ್ರೆ ಪಾಪರ್ ಆಗಬೇಕಾಗುತ್ತೆ. ಸಿಟಿ ಕಣ್ರಿ ದೇಸಾಯಿ, ನಿಮ್ಮ ಹಳ್ಳಿ ಅಲ್ಲ. ಪ್ರತಿಯೊಂದಕ್ಕೂ ಲೆಕ್ಕ ಹಾಕಿ ತೂಕದ ಜೀವನ ನಡೆಸಬೇಕು. ಮುಲಾಜಿಗೆ ಬಿದ್ರೆ ನೀವು ಬಿದ್ದಾಗ ಯಾರೂ ಎತ್ತಾಕ ಬರಲ್ಲ ನೋಡಿ'' ಎಂದು ಎಚ್ಚರಿಸಿದರು.

''ಏನ್ರೀ ದೀಕ್ಷಿತ್, ಏನು ಹೇಳತಾ ಇದ್ದೀರಿ ?''

''ನಾನು ಹೇಳೋದೆಲ್ಲ ಸರಿದೇರಿ ಕೇಳಿರಪ್ಪ. ತೀರ ಆಪ್ತರಿಷ್ಟರನ್ನು ಹೊರತುಪಡಿಸಿ ಉಳಿದ ನೆಂಟರಾಗಲಿ, ಸ್ನೇಹಿತರಾಗಲಿ ಬಂದ್ರ ಅವರ ಯೋಗ್ಯತಾನುಸಾರ ಮರ್ಯಾದೆ ಮಾಡಿ ಆಗಿಂದಾಗ್ಗೆ ಜಾಗ ಖಾಲಿ ಮಾಡ್ಲಕ ಪ್ರಯತ್ನಿಸಬೇಕು. ಹೊರಟು ನಿಂತಾಗ ಒಳ್ಳೆಯ ಮಾತುಗಳನ್ನಾಡಿ ಅವರ ದೃಷ್ಟಿಯಲ್ಲಿ ಕೆಟ್ಟವರು ಆಗದಾಂಗ ನಟನೆ ಮಾಡಬೇಕು. ಇನ್ನು ನಿಮಗಾಗದವರು ಬಂದ್ರೂ ಉಪಚರಿಸಿ. ಆದರೆ ಹೆಚ್ಚು ಮಾತಾಡಿಸದಿರಿ. ಅಲಕ್ಷಿಸಿ. ಇನ್ನು ಸಿಟಿಯಲ್ಲಿ ಪರಿಚಯವಾದ ಸ್ನೇಹಿತರಲ್ಲಿ ಕೆಲವರು ಕಪ್ ಚಹಾಕ್ಕಾದರೂ ಮನೆಗೆ ಭೇಟಿ ಕೊಡತಿರತಾರೆ. ಬಂದಾಗ ಚಹಾ ಸಿಗುತ್ತೆ ಜೊತೆಗೆ ನಾಸ್ಟಾನೂ ಅಂತ ಗೊತ್ತಾದ್ರೆ ನೆವ ಹೂಡಿಕೊಂಡ, ಹೊಗಳಿಕೊಂತ ಬಂದು ಟೋಪಿಹಾಕೋದನ್ನ ಕಂಟಿನ್ಯೂ ಮಾಡ್ತಾರೆ. ಅಂಥವರು ಬಂದಾಗ ಅತಿ ಭಂಡರು ಮಂಡರು ನಾವಾಗಬೇಕು. ಮಾತಾಡಿ ಮಾತಾಡಿ ಸುಸ್ತು ಹೊಡಿಸಿ ಚಹಾ ಸಹಿತ ಇನ್ನೇನು ಸಿಗದು ಎಂದು ಜಾಗ ಖಾಲಿ ಮಾಡುವಂತಹ ಸಂದರ್ಭದಲ್ಲಿ ಉಪಚರಿಸುವರಂಗ ಆ್ಯಕ್ಟ್ ಮಾಡಬೇಕು. ಇನ್ನು ಬಜಾರ್‌ದಲ್ಲಿ ಊರ ಸ್ನೇಹಿತರು, ನೆಂಟ್ರ ಕಂಡ್ರ ಅವರಿಗೆ ಕಾಣದಾಂಗ ತಪ್ಪಿಸಿಕೊಳ್ಳಿ. ಅಪ್ಪಿತಪ್ಪಿ ಸಿಕ್ರು ಭಾರಿ ಅವಸರದಲ್ಲಿ ಎಲ್ಲಿಗೋ ಹೊರಟಿರುವಾಂಗ ವರ್ತಿಸಿ ಸುಳ್ಳು ಫೋನ್ ನಂಬರ್ ಕೊಟ್ಟು ತಪ್ಪಿಸಿಕೊಳ್ಳಬೇಕು...'' ಎಂದು ಮಾತು ಮುಂದುವರಿಸ್ತಿರುವಾಗ,

''ದೀಕ್ಷಿತ್ರ ಸಾಕು ನಿಮ್ಮ ಸಲಹೆ. ಇನ್ನು ಕೇಳಕಾಗಲ್ಲ. ನೀವು ಹೇಳಿದಂತ ವಿಚಾರಗಳಲ್ಲಿ ನನ್ನ ಅನುಭವಕ್ಕ ಸಿಟಿಗೆ ಹೋಗುತ್ತಿದ್ದಾಗ ಬಂದವ, ನಮ್ಮ ನೆಂಟರೊಬ್ಬರು ಹೇಳತಿದ್ರು 'ಮನಿಗೆ ಬಂದವರು ಹ್ಯಾಂಗಿರಬೇಕಂದ್ರ ಹಿಂಗ ಬಂದು ಹಿಂಗ ಹೋದಂಗಿರಬೇಕು. ಪೀಡೆ ಅನಸಬಾರದು' ಅಂತ'' ಎಂದಾಗ,

''ಏನು ದೇಸಾಯಿ ಇಷ್ಟೆಲ್ಲ ಮಾಹಿತಿ, ಅನುಭವ ಇದ್ರು ಇನ್ನೂ ಬದಲಾಗಿಲ್ಲವಲ್ಲ ?'' ಅಂದರು.

''ನನಗ ಇಷ್ಟು ಕಠೋರವಾಗಿ ವರ್ತಸಾಕ ಆಗಲ್ಲರಿ. ಪ್ರಾಣಬೇಕಾದ್ರೂ ಬಿಡ್ತೀನಿ. ಬಂದವರಿಗೆ ಹಾಗೆ ಕಳಿಸಿಕೊಡಲಾರೆ'' ಎಂದೆ.

ಅಷ್ಟರಲ್ಲಿ ಮಗಳು ಪ್ರೊಗ್ರೆಸ್ ಕಾರ್ಡ್ ಹಿಡಕೊಂಡು ಜೋತುಮೊಗ ಹಾಕಿಕೊಂಡು ಬಂದ್ಲು. ಸದಾ 'ಎ' ಗ್ರೇಡ್‌ನಲ್ಲಿ ಇರುತ್ತಿದ್ದವಳು 'ಸಿ' ಗ್ರೇಡ್‌ಗೆ ಇಳಿದಿದ್ದಳು.

''ಏನಮ್ಮ ಮಗಳೇ, ಇದೆಲ್ಲ. ಎಷ್ಟು ಡಲ್ಲಾಗಿ ಬಿಟ್ಟೆ'' ಎಂದೆ ಸಿಟ್ಟಿನಿಂದ.

''ಏನ್ ಮಾಡ್ಲಿ ಅಪ್ಪ. ನಮ್ಮೂರೇ ಚೆನ್ನಾಗಿತ್ತು. ನೀವು ಅಮ್ಮ ಇಬ್ಬರೂ ಚೆನ್ನಾಗಿದ್ರಿ. ತಿಳಿಯದಿದ್ದನ್ನು ಹೇಳಿಕೊಡತಿದ್ರಿ. ಆದರೆ ಈಗ ಬಂದವರೊಡನೆ ಹರಟೆ ಹೊಡೀತಾ ನನ್ನ ಕೇರ ಮಾಡೋದನ್ನೇ ಬಿಟ್ಟಿದ್ದೀರಿ'' ಎಂದಾಗ ಸತ್ಯದ ವಿಷಯಕ್ಕೆ ಬಯ್ಯಲು ಮನಸು ಬರಲಿಲ್ಲ. ಮನೆಗೆ ಬಂದು ಮಕ್ಕಳು ಮನೆಯನ್ನು ಊರಿಗೆ ಶಿಫ್ಟ್ ಮಾಡುವ ಅಭಿಪ್ರಾಯ ವ್ಯಕ್ತಪಡಿಸಿದೆ. ಆಗಲೇ ನಿಯೋಜನೆಯ ಅವಧಿ ಮುಗೀತಾ ಬಂದಿತ್ತು. ''ಅಲ್ರೀ ನಿಮ್ಮ ಬಾಸ್ ಪರಮನೆಂಟಾಗಿ ಇಲ್ಲಿಗೆ ವರ್ಗ ಮಾಡಿಸಿಕೋತಿನಿ ಎಂದಿದ್ದಾರಲ್ಲ. ಅಲ್ಲದೆ ಈಗ ನಾನು ಸಿಟಿಲೈಫ್‌ಗೆ ಪೂರ್ತಿ ಸೆಟ್ಟಾಗಿದ್ದೀನಿ. ನೀವು ಬೇಕಾದ್ರೆ ಹೋಗಿಬಂದು ಮಾಡತಿರಿ. ನಾನು ಮಾತ್ರ ಸಿಟಿ ಬಿಟ್ಟು ಕದಲ ಚಾನ್ಸೇ ಇಲ್ಲ'' ಎಂದು ನನ್ನವಳು ಹೇಳಿದಾಗ ಎದೆ ಒಡೆಯೋದಷ್ಟೇ ಬಾಕಿ ಉಳಿದಿತ್ತು. ಸಾಮ, ಭೇದೋಪಾಯಗಳಿಗಿಂತ ಹೆಂಗಸರನ್ನು ಆಶೋಪಾಯಗಳಿಂದ ಬಗ್ಗಿಸಬಹುದಲ್ವೆ ? ಸಿಟಿಯಲ್ಲಿದ್ದು ಎಲ್ಲ ರೀತಿಯಿಂದ ಹಾಳಾಗೋಕ್ಕಿಂತ ಹೆಂಡ್ತಿ ಆಸೆನ ಈಡೇರಿಸಿದ್ರೆ ವೇಸ್ಟಲ್ಲ ಅಂತ ಅನಕೊಂಡು ನನ್ನವಳಿಗೆ ನೆಕ್ಲೆಸ್ ಆಸೆ ತೋರಿಸಿದೆ. ಮನಸಿರದಿದ್ದರೂ ನೆಕ್ಲೆಸ್ ಆಸೆಗೆ ಸಿಟಿಯಿಂದ ಮರಳಿ ಗೂಡಿಗೆ ಬರಲು ಸಮ್ಮತಿಸಿದಳು.

ಸಿಟಿಯೊಳಗಿದ್ದಾಗ ಬಂದ ಸ್ನೇಹಿತರನ್ನು, ಬಂಧುಗಳನ್ನು ಸತ್ಕರಿಸಿದ್ದರ ಫಲ ಈಗ ಎಲ್ಲಿಲ್ಲದ ಗೌರವ ನನಗೆ ಅದೆ. ಬಂಧುಗಳಂತೂ ಅಭಿಮಾನದಿಂದ ನೆನಸ್ತಾರ. ಇನ್ನು ನನ್ನೂರಾಗಂತೂ ಎಲ್ಲಿಲ್ಲದ ಮರ್ಯಾದೆ. ಅಕಸ್ಮಾತ್ ಎಲೆಕ್ಷನ್ನ ನಿಂತ್ರೂ ಕಣಮುಚ್ಚಿಗೊಂಡು ಗೆದ್ದುಬರ್ತಿನಿ ಅನ್ನುವಷ್ಟು ವಿಶ್ವಾಸ ನನ್ನ ಮೇಲೆ ಇಟ್ಟಿದ್ದಾರೆ. ಸ್ನೇಹಿತರು, ಊರವರು ''ದೇಸಾಯಿ, ನೀವು ರಾಯಚೂರಾಗ ಇರತನಕ ನಮಗ ಚಿಂತಿರಲಿಲ್ಲ. ನಿಮ್ಮ ಮನಿ ಎಷ್ಟು ಅನುಕೂಲಕ್ಕಿತ್ತು. ನೀವು ಎಷ್ಟು ಹಚ್ಚಿಗೊಂಡು ಕೆಲಸ ಮಾಡತಿದ್ರಿ'' ಎಂದಾಗ ಸಂತಸ ನಿಜಕ್ಕೂ ಆಗುತ್ತದೆ. ''ನಿಮ್ಮಂತ ಒಳ್ಳೆ ವ್ಯಕ್ತಿಗೆ ಪರಮನೆಂಟಾಗಿ ಸಿಟಿಗೆ ವರ್ಗವಾಗಲಿ'' ಎಂದು ಮಾವನ ಧಾಟಿಯಲ್ಲಿ ಆಶೀರ್ವದಿಸುತ್ತಿರುವಾಗ ಒಂದು ಕ್ಷಣ ಎದೆ ಝಲ್ ಅಂತಿರುತ್ತೆ. ನಾನು ''ಸಿಟಿಗಿಂತ ಹಳ್ಳಿನ ವಾಸಿ ಕಣ್ರೀ. ನಮ್ಮ ಹಳ್ಳಿಯಂಥಾ ಸಂಸ್ಕೃತಿ, ಪ್ರೀತಿ, ಬಾಂಧವ್ಯ, ಕಳಕಳಿ ಆ ಜನಕ್ಕೆಲ್ಲಿ ಬರಬೇಕು. ನಮ್ಮದು ನಮಗೆ ಮೇಲಲ್ಲವೇ !'' ಎಂದೆ. ಅವರಿಂದ 'ವಾಹ್ ! ಎಂಥ್ ಮಾತಾಡಿದ್ರಿ' ಎಂದು ಶಭಾಸ್‌ಗಿರಿ ಗಿಟ್ಟಿಸಿಕೊಳ್ಳುತ್ತಿರುವಾಗ ನನ್ನವಳು ಕಣ್ಣು ತಿರುವಿ ಕೈಯಲ್ಲಿದ್ದ ಪಾತ್ರೆಯನ್ನು ಗಟ್ಟಿಸ್ತಾ ನನ್ನತ್ತ ದಿಟ್ಟಿಸ್ತಾ ಕೋಪ ತೀರಿಸಿಕೊಳ್ಳುತ್ತಿರುತ್ತಾಳೆ. ಸಿಟಿ ಬಾಂಧವ್ಯವನ್ನು ಕತ್ತರಿಸಿದ ಜೊತೆಗೆ ಊರಿಗೆ ಬರಲು ನೀಡಿದ ನೆಕ್ಲೆಸ್ ಆಶ್ವಾಸನೆಯನ್ನು ಇನ್ನೂ ಪೂರೈಸದಿರುವ ಸಿಟ್ಟಿಗೆ.

**ಗುಂಡುರಾವ್ ದೇಸಾಯಿ ಮಸ್ಕಿ**
ತೇರಿನ ಹತ್ತಿರ, ಮಸ್ಕಿ - ೫೮೪ ೧೨೪, ಲಿಂಗಸುಗೂರು ತಾಲ್ಲೂಕು, ರಾಯಚೂರು ಜಿಲ್ಲೆ

ಜಯಂತ ಕಾಯ್ಕಿಣಿಯವರ ಕಥೆಗಳ ಅಭ್ಯಾಸ ಮಾಡಿದಾಗ ಮುಖ್ಯಪ್ರಶ್ನೆಯೊಂದು ಎದುರಾಗುತ್ತದೆ. ಅದೆಂದರೆ ಅವರು ಬಳಸುವ ಪರಿಸರ ಮತ್ತು ಮಾನವೀಯ ದೃಷ್ಟಿಯನ್ನು ಕುರಿತು ವಿವರಿಸುವಲ್ಲಿನ ವಿಭಿನ್ನತೆ. ಕಥೆಗಾರ ತನ್ನ ಪರಿಸರವನ್ನು ನೋಡಿದ ರೀತಿ, ಅಲ್ಲಿನ ಜನ, ಅವರ ಬದುಕಿನ ಸ್ಥಿತಿ-ಗತಿ ಮುಂತಾಗಿ ಎಲ್ಲವೂ ಕಥೆಯಾಗುವಾಗ ಭಿನ್ನವಾಗಿಯೇ ರೂಪ ತಾಳುವುದನ್ನು ನೋಡಬಹುದು. ಜಯಂತರ ಬಹುತೇಕ ಕಥೆಗಳು ಮುಂಬಯಿಯಲ್ಲಿ ತೆರೆದುಕೊಂಡಿರುವುದರಿಂದ 'ಒಂದು ವಿಶೇಷ' ಸಂಸ್ಕೃತಿಯೊಂದನ್ನು ಸ್ಪರ್ಶಿಸಿದ ಅನುಭವವೂ ನಮ್ಮದಾಗುತ್ತದೆ. ಇವರ ಕಥೆಗಳಲ್ಲಿ ಉತ್ತರ ಕನ್ನಡ (ಗೋಕರ್ಣ) ಹಾಗೂ ಮುಂಬಯಿ ಪ್ರಧಾನ ಭೂಮಿಕೆಗಳು. ಈ ಸೀಮಿತತೆಯನ್ನು ದಾಟುವ ಪ್ರಯತ್ನಗಳು ಕೂಡ ಎಲ್ಲಾ ಕಥೆಗಳಲ್ಲಿವೆ.



'ತೆರೆದಷ್ಟೆ ಬಾಗಿಲು', 'ದಗಡೂ ಪರಬನ ಅಶ್ವಮೇಧ', 'ಅಮೃತಬಳ್ಳಿ ಕಷಾಯ', 'ಬಣ್ಣದ ಕಾಲು', 'ತೂಫಾನ್ ಮೇಲ್' ಕಥಾ ಸಂಗ್ರಹಗಳು; 'ಬೊಗಸೆಯಲ್ಲಿ ಮಳೆ', 'ಶಬ್ದತೀರ' ಅಂಕಣ ಬರಹಗಳು; 'ನೀಲಿ ಮಳೆ', 'ಶ್ರಾವಣ ಮಧ್ಯಾಹ್ನ' ಇತ್ಯಾದಿ ಕವನ ಸಂಗ್ರಹಗಳು ಮತ್ತು 'ಇತಿ ನಿನ್ನ ಅಮೃತಾ', 'ಸೇವಂತಿ ಪ್ರಸಂಗ', 'ಜತೆಗಿರುವನು ಚಂದಿರ' ನಾಟಕಗಳನ್ನು ರಚಿಸಿದ ಜಯಂತ್ ಮುಖ್ಯವಾಗಿ ಕಥೆಗಾರರು. ಬದುಕಿನ ಅನುಕಂಪದ ಮುಖ ಸಾಹಿತ್ಯದ ವಿವಿಧ ಪ್ರಕಾರಗಳ ಮೇಲೆ ಪ್ರಭಾವ ಬೀರಿರುವುದನ್ನು ನೋಡಬಹುದು. ಅವರ ಅಂಕಣ ಬರಹಗಳ ಬಹುತೇಕ ವಿಚಾರಗಳು ಕಥೆಯಾಗಿಯೂ ನಮ್ಮಲ್ಲಿ ಒಂದಾಗುತ್ತವೆ. ಉದಾಹರಣೆಗೆ, 'ಶಬ್ದತೀರ'ದ 'ಅಥನಾಶಿಯ ತಡಿಯಲ್ಲಿ', 'ಚಪ್ಪಟೆ ಜೀವಿಗಳು', 'ಚಪ್ಪಾಳೆ ಚಪ್ಪಾಳೆ ಚಪ್ಪಾಳೆ', 'ಮತ್ತೆಲ್ಲ ಆರಾಮು ತಾನೆ' ಇತ್ಯಾದಿ ಬರಹಗಳು. ಜಯಂತರು 'ಕಥೆಯ ಜೀವಸ್ವರ' ಎಂಬ ಬರಹದಲ್ಲಿ ''ಬದುಕಿನಲ್ಲಿ

# ಜಯಂತ ಕಾಯ್ಕಿಣಿ ಅವರ ಕಥೆಗಳಲ್ಲಿ ಮಾನವೀಯತೆಯ ನೆಲೆಗಳು

ನಮ್ಮ ರುಚಿ, ಬೆರಗು, ಮನೋಮೌನ ಹೆಚ್ಚಿದಾಗಲೇ ನಮ್ಮ ಗುಣಮಟ್ಟ ಹೆಚ್ಚುವುದು ಸಾಧ್ಯ'' ಎಂದಿದ್ದಾರೆ. 'ಬದುಕಿನ ರುಚಿ'ಯನ್ನು ಹಿಡಿಯಹೊರಡುವ ಇವರ ಕಥೆಗಳು ಗುಣಮಟ್ಟದ ದೃಷ್ಟಿಯಿಂದಲೂ ಹೊಸತಾಗಿವೆ. ಕಾವ್ಯಮಯತೆಯಿಂದ, ದ್ವಂದ್ವಮುಖತೆಯಿಂದ, ಛಿದ್ರತೆಯಿಂದ, ಉದ್ವಸ್ಥತೆಯಿಂದ, ನವಿರತೆಯಿಂದ ಆರಂಭವಾಗುವ ಇವರ ಕಥೆಗಳು ತಮ್ಮಷ್ಟಕ್ಕೆ 'ಮೌನ'ವೊಂದನ್ನು ಸಾಧಿಸಿ, ಸತತವಾಗಿ ಕಾಡುತ್ತವೆ. 'ಮತ್ತೆಲ್ಲ ಆರಾಮು' ಎಂದುಕೊಳ್ಳುವಾಗಲೇ ಗಾಢ ವಿಷಾದವೊಂದು ಹಣಕುತ್ತಿರುತ್ತದೆ.

ಜಯಂತರ ಆರಂಭದ ಕಥೆಗಳು ತನ್ನ ಪರಿಸರದ ಸಂಗ್ರಹ ಗುಣದ ಜತೆಗೆ 'ಮಾನವೀಯ' ವಿಚಾರವೊಂದನ್ನು ಆಳದಲ್ಲಿ ಇಟ್ಟುಕೊಂಡಿವೆ. ತನ್ನ ಸುತ್ತಲಿನ ಅಮಾನವೀಯ ಮುಖವನ್ನು ಹೇಳುತ್ತಲೇ ಮಾನವೀಯಗೊಳಿಸುವ ಅವರು ಇಲ್ಲಿನ ಎಲ್ಲರ ಆಳದಲ್ಲಿ ಪರಿವರ್ತನಶೀಲವಾದ ಮನಸ್ಸಿದೆ ಎಂಬುದನ್ನು ಹೇಳುತ್ತಾರೆ. 'ಇದ್ದಾಗ ಇದ್ದಾಂಗ' ಕಥೆಯ ಪ್ರಭಾಕರ (ಪಬ್ಬು)ನ ಪಾತ್ರದ ಬೆಳವಣಿಗೆ ಈ ರೀತಿಯದು. ಕಥೆಗಾರನೂ ಒಂದು ಪಾತ್ರವಾಗಿ ಚಿತ್ರಕ ಶೈಲಿಯಲ್ಲಿ ವಿವರಿಸುವ ರೀತಿ ಇದೆ. 'ಮಾಂಶಿ' ಪಾತ್ರ ಕಾಣುವ ಪರಿವರ್ತನೆ, ಪಬ್ಬುವಿನ ತಂಗಿಯ ಜೀವನಶೈಲಿಯನ್ನು ಹೇಳಿದ ಕಥೆಗಾರನಿಗೆ ಪಬ್ಬುವಿನ ಕುರಿತೇ ವಿಶೇಷ ಪ್ರೀತಿ ಮುಂಬಯಿಗೆ ಹೋದಾಗಲೂ ಕಾಡುತ್ತದೆ. ಪಬ್ಬು ಅನೈತಿಕ ಕಾರ್ಯದಲ್ಲಿ ತೊಡಗಿದ್ದಾಗಲೂ ''ಆ ದಿನ ಪಬ್ಬೂಗೆ ರೂಪಾಯಿಕೊಟ್ಟು ಎಷ್ಟು ಚಲೋ ಕೆಲಸ ಮಾಡಿದೆ'' ಎಂಬ ವಿವರಣೆಯೊಂದಿಗೆ ಮುಗಿಯುತ್ತದೆ. 'ತೆರೆದಷ್ಟೆ ಬಾಗಿಲು' ಕಥೆಯ 'ದಿನೂಮಾ' (ದಿನಕರ) ಕುರಿತಾದ ವಿವರಣೆ ಹೇಳುವ ಮಗ, ತಾಯಿಯ ಸಾವಿನ ನಂತರ ಆ ಮನೆಯಲ್ಲಿ ಉಂಟಾಗುವ ಬದಲಾವಣೆ ಮತ್ತು ಅಪ್ಪ/ಮಗನ ನಡುವಿನ ವಿರುದ್ಧಾರ್ಥಕ ದೃಷ್ಟಿಕೋನ ಎಲ್ಲವನ್ನೂ ಏಕತ್ರವಾಗಿ ವಿವರಿಸುತ್ತದೆ. ದಿನೂಮಾನ ಎರಡನೇ ಮದುವೆ ಆಲೋಚನೆ, ಬೆಳೆದ ಮಗನ ಎದುರು ಹೇಗೆ ಪ್ರಸ್ತಾಪಿಸುವುದು ಎಂಬುದು ಕಥೆಗೆ ಗಂಭೀರತೆಯನ್ನು ತರುತ್ತದೆ. ಈ ನಡುವೆ ದಿನೂಮಾನ ವ್ಯಕ್ತಿತ್ವದಲ್ಲಿ ಉಂಟಾಗುವ ಬದಲಾವಣೆಯೂ ಅಚ್ಚರಿ ಹುಟ್ಟಿಸುತ್ತದೆ. ಮಗನಿಗೆ ಮದುವೆ ವಿಚಾರ ಹೇಳುವ ಗೊಂದಲದಲ್ಲಿರುವಾಗಲೇ – ''ನನ್ನ ಸಹೋದ್ಯೋಗಿಯೊಬ್ಬಳ ಜತೆಯಲ್ಲಿ ನನ್ನ ವ್ಯವಹಾರ ಕೈಮೀರಿದೆ. ಒಂದೇ ಅವಳನ್ನು ಮದುವೆಯಾಗಬೇಕು ಅಥವಾ ಕಣ್ತಪ್ಪಿಸಿಕೊಳ್ಳಬೇಕು'' ಎಂದು ಪತ್ರ ಬರೆದು ಮಗನೇ ಮನೆಯಿಂದ ಹೊರಹೋಗುತ್ತಾನೆ. ಇಲ್ಲಿವರೆಗೆ ತಂದೆ ಕುರಿತಾದ ಭಿನ್ನತೆ – ಅನಂತರ ಮಗನ ಕಡೆ ತಿರುಗಿ 'ಮಾನವೀಯತೆ'ಯನ್ನು ಹೇಗೆ ಅರ್ಥೈಸಬೇಕೆಂದು ಪ್ರಶ್ನಿಸುತ್ತದೆ. ಅದೇ ರೀತಿ 'ಭೋಟು' ಕಥೆಯಲ್ಲಿ ಯಾವ ಗಂಭೀರ ಸಂಗತಿ ಇಲ್ಲದಿದ್ದಾಗ್ಯೂ ಮಗುವಿನ ಮೂಲಕ ಹುಟ್ಟಿಕೊಳ್ಳುವ ಕಥೆ ಹೆಂಗಸರ ವಿವಿಧ ದೃಷ್ಟಿಯನ್ನು ಅನಾವರಣಗೊಳಿಸುತ್ತದೆ.

'ದ್ವೀಪಗಳು' ಕಥೆ ಅವರ ಅತ್ಯಂತ ಪರಿಣಾಮಕಾರಿ ಕಥೆಗಳಲ್ಲಿ ಒಂದು. ಮುಖ್ಯವಾಗಿ ಈ ಕಥೆ ಅನಂದರ 'ನಾ ಕೊಂದ ಹುಡುಗಿ'ಯನ್ನು ನೆನಪಿಸುತ್ತದೆ. ಕಥೆಗಾರ – ಸೂರಪ್ಪನನ್ನು ಹುಡುಕುತ್ತಾ ಅವನ ಮನೆ

ಶಿವರಾಮ ಕಾರಗಡಿ

ಜಯಂತ ಕಾಯ್ಕಿಣಿಯವರ ಕಥೆಗಳ ಅಭ್ಯಾಸ ಮಾಡಿದಾಗ ಮುಖ್ಯಪ್ರಶ್ನೆ ಒಂದು ಎದುರಾಗುತ್ತದೆ. ಅದೆಂದರೆ ಅವರು ಬಳಸುವ ಪರಿಸರ ಮತ್ತು ಮಾನವೀಯ ದೃಷ್ಟಿಯನ್ನು ಕುರಿತು ವಿವರಿಸುವಲ್ಲಿನ ವಿಭಿನ್ನತೆ. ಕಥೆಗಾರ ತನ್ನ ಪರಿಸರವನ್ನು ನೋಡಿದ ರೀತಿ, ಅಲ್ಲಿನ ಜನ, ಅವರ ಬದುಕಿನ ಸ್ಥಿತಿ–ಗತಿ ಮುಂತಾಗಿ ಎಲ್ಲವೂ ಕಥೆಯಾಗುವಾಗ ಭಿನ್ನವಾಗಿಯೇ ರೂಪ ತಾಳುವುದನ್ನು ನೋಡಬಹುದು. ಜಯಂತರ ಬಹುತೇಕ ಕಥೆಗಳು ಮುಂಬಯಿಯಲ್ಲಿ ತೆರೆದು ಕೊಂಡಿರುವುದರಿಂದ 'ಒಂದು ವಿಶೇಷ' ಸಂಸ್ಕೃತಿಯೊಂದನ್ನು ಸ್ಪರ್ಶಿಸಿದ ಅನುಭವವೂ ನಮ್ಮದಾಗುತ್ತದೆ. ಇವರ ಕಥೆಗಳಲ್ಲಿ ಉತ್ತರ ಕನ್ನಡ (ಗೋಕರ್ಣ) ಹಾಗೂ ಮುಂಬಯಿ ಪ್ರಧಾನ ಭೂಮಿಕೆಗಳು. ಈ ಸೀಮಿತತೆಯನ್ನು ದಾಟುವ ಪ್ರಯತ್ನಗಳು ಕೂಡ ಎಲ್ಲಾ ಕಥೆಗಳಲ್ಲಿವೆ.

ತಲುಪಿ, ಪರಿಸರದ ವಿವರಣೆಯನ್ನು ಹೇಳುತ್ತಲೇ ಸೂರಪ್ಪನ ಅನೈತಿಕ ಸಂಬಂಧ, ಪರಿಮಳ-ವಿಶೂಮಳ್ಳನ ಸಂಬಂಧವನ್ನು ವಿವರಿಸುವುದು. ಕಥೆಗಾರನಿಗೆ ಈ ಎಲ್ಲಕ್ಕಿಂತ ಸೂರಪ್ಪನ ವ್ಯಕ್ತಿತ್ವವನ್ನು ವಿವರಿಸುವಲ್ಲಿಯೇ ಹೆಚ್ಚು ಆಸಕ್ತಿ. 'ಉನ್ನಿಕೃಷ್ಣನ್ ಬಂದು ಹೋದ' ಕಥೆ ಬದುಕಿನ ಸಾರ್ಥಕತೆ ಏನು ಎಂದು ಪ್ರಶ್ನಿಸುತ್ತದೆ. ಗೋಕರ್ಣದ ಸುತ್ತಲಿನಲ್ಲಿ ನಡೆವ ಕಥೆ, 'ಉನ್ನಿಕೃಷ್ಣನ್ ಬಂದ ನಂತರ' ವಿಶೇಷ ಘಟನೆಗಳಿಗೆ ಕಾರಣವಾಗುತ್ತದೆ. ತನ್ನ ಸಂಸಾರದಿಂದ ದೂರವಾಗಿ ಸಂನ್ಯಾಸಿಯಂತೆ ಬದುಕಲಾರಂಭಿಸುತ್ತಾನೆ. ತನ್ನ ಕಣ್ಣೆದುರೇ ತಾಯಿಯೊಬ್ಬಳ ಸಾವನ್ನು ಕಂಡು ಪರಿವರ್ತಿತನಾಗುತ್ತಾನೆ. ಅವಳ ಮಗಳ ಕುರಿತು ಉಂಟಾಗುವ ಅನುಕಂಪ ತನ್ನ ಸಂಸಾರದ ಕುರಿತು ಚಿಂತಿಸುವಂತೆ ಮಾಡುತ್ತದೆ. ''ನನ್ನ ಊರಿಗೆ ಹೋಗುತ್ತಿದ್ದೇನೆ... ಒಳಗಿದ್ದ ಹೊರತು ನನ್ನ ಯಾವ ಯತ್ನಗಳಿಗೂ ಅರ್ಥವಿಲ್ಲ'' ಎಂಬ ತೀರ್ಮಾನಕ್ಕೆ ಬಂದ ಆತ ಊರಿಗೆ ಮರಳುತ್ತಾನೆ. ಜೀವನದ ಸಾರ್ಥಕತೆ ಇರುವುದು ಬದುಕುವುದರಲ್ಲೆ ಹೊರತು ಪಲಾಯನದಿಂದಲ್ಲ ಎಂಬ ವಿಚಾರವನ್ನು ಕಥೆ ಹೇಳುತ್ತದೆ. 'ಕಣ್ಣಿಗೊಂದು ಕ್ಷಿತಿಜ' – ಮುಂಬಯಿಯಲ್ಲಿ ನಡೆವ ಘಟನೆ. ಸುನೀಲನ ಸಾವಿನ ನಂತರ ಉಂಟಾಗುವ ಯಾವೆಲ್ಲ ಬದಲಾವಣೆಯ ಜತೆಗೆ ಅವನು ಇದ್ದಾಗಿನ ಕೋಪ, ಅಲ್ಪತೃಪ್ತಿ, ಬೇಸರಿಕೆ – ಅನಂತರ ಕಾಣುವ ಆತ್ಮೀಯತೆ ಎಲ್ಲವೂ ಏಕಕಾಲಕ್ಕೆ ಉಂಟಾಗುತ್ತದೆ. ಅವನಿಗಾಗಿ ಹಂಬಲಿಸಿ ಬರುವ 'ಶಂಕರಬಾಪ್ಪಾ' – ಈ ವೃದ್ಧರ ಕುರಿತಾದ ಕಥೆಗಾರನ ಮನೋಭಾವ, ಈ ಮುಂಬಯಿ ಜೀವಜಗತ್ತಿನ ಜೊತೆ ಬದುಕಲು ಹೆಣಗುತ್ತಿರುವಾಗ ಹೀಗೆ ಮನೆಗೆ ಬಂದು ನೆಲೆಯೂರಿದ ವೃದ್ಧರ ಕುರಿತ ಕೋಪಿಷ್ಠ ದೃಷ್ಟಿಕೋನ. ಅಚ್ಚರಿ ಎಂದರೆ ಕೊನೆಯಲ್ಲಿ 'ನಾಲ್ಕು ಕಾಸು ಸಿಕ್ಕರೂ ಅದು ಈ ವೃದ್ಧನ ದೈನಿಕಕ್ಕೊಂದು ಅವನದೇ ಬಗೆಯ ಸಾರ್ಥಕತೆ ತರುವುದಾದರೆ ಅದರಲ್ಲಿ ಅವರದೇನು ತಪ್ಪು' ಎಂಬ ಭಾವನೆಯೊಂದಿಗೆ ಮುಕ್ತಾಯವಾಗುವುದು. ಆರಂಭದ ಸಿಟ್ಟು ತನ್ನಷ್ಟಕ್ಕೆ ಪರಿವರ್ತಿತಗೊಳ್ಳುತ್ತಾ ಹೋಗುವ ಮನೋದೃಷ್ಟಿ ಈ ಕಥೆಯಲ್ಲಿ ಗುರುತಿಸಬಹುದು.

ಜಯಂತರ ಮಾನವೀಯ ದೃಷ್ಟಿಗೆ ಸಮರ್ಥ ಉದಾಹರಣೆಯಾಗಿ 'ಆರೋಹ' ಕಥೆ ಇದೆ. 'ತುಳಸಿ' ಮನೆಗೆಲಸದ ಹುಡುಗಿ ಕಣ್ಮರೆಯಿಂದ ಆರಂಭವಾಗುವ ಕಥೆ. ಕಥಾನಾಯಕನಿಗೆ, ಅಂಜಲಿಗೆ ಉಂಟುಮಾಡುವ ತಳಮಳ ಹಾಗೂ ಮಗಳು 'ಪೂರ್ವಿ'ಯನ್ನು ಅವಳು ನೋಡಿಕೊಂಡ ಬಗೆ ಎಲ್ಲವೂ ಇಲ್ಲಿದೆ. ಆದರೆ ಭಾಸ್ಕರ ಶೆಟ್ಟಿಯ ಪ್ರವೇಶದಿಂದ ಕಥೆ ವಿಚಿತ್ರ ತಿರುವನ್ನು ಪಡೆಯುತ್ತಾ ಹೋಗುತ್ತದೆ. ನಾನೇ ಅವಳ ತಂದೆ, ಹಾಗಾಗಿ ಅವಳನ್ನು ಕರೆದುಕೊಂಡು ಬಂದೆ ಎಂದು ವಾದಿಸುವ ಶೆಟ್ಟಿಯ ವಾದವೇ ಗೆದ್ದಂತೆ ಕಂಡರೂ... ಕಥೆಗಾರ ಹೇಳುವ ''ಯಾರೇ ಬಂದು ಹೀಗೆ ಈಕೆ ನನ್ನ ಮಗಳು ಎಂದರೆ'' ಎಂಬ ಅಭಿಪ್ರಾಯವು ತರ್ಕವನ್ನು ಮೀರಿ ಬೆಳೆಯುತ್ತದೆ. ಇದೇ ರೀತಿ 'ಸೇವಂತಿ ಹೂವಿನ ಟ್ರಕ್ಕು' ಕಥೆಯ ದುರ್ಗಿಯ ಪಾತ್ರ ಚಿತ್ರಣ. ಈಕೆಯೂ ಮನೆಗೆಲಸದಾಕೆ. ಕಾಯಿಲೆಯಿಂದ ನರಳುತ್ತಾ ಮಲಗಿದ ಅವಳ ಕುರಿತು ಮನೆಯಲ್ಲಿ ಆಗುವ ಮಾತುಕತೆಯೇ ದುರ್ಗಿಯ ಸಂಪೂರ್ಣ ಪರಿಚಯ ಮಾಡಿಸುತ್ತದೆ. ''ಎಷ್ಟೆಂದರೂ ನಮ್ಮ ಮಕ್ಕಳನ್ನು ತಾತ್ಸಾರವಿಲ್ಲದೆ ನೋಡಿಕೊಂಡವಳು. ನಿಮ್ಮ ಮುಷ್ಕರದ ವೇಳೆಯಲ್ಲಂತೂ ತಿಂಗಳುಗಟ್ಟಲೆ ಹೊಟ್ಟೆ ಸರಿ ಇಲ್ಲ ಅಂತಾ ಸುಳ್ಳು ಹೇಳಿ ಒಪ್ಪೊತ್ತು ಅರೆಹೊಟ್ಟೆ ಉಂಡವಳು.'' ಈ ಮಾತು ಏಕಕಾಲಕ್ಕೆ ದುರ್ಗಿ ಮತ್ತು ಮನೆಯವರ ಕುರಿತು ಅನುಕಂಪವನ್ನು ಉಂಟುಮಾಡುತ್ತದೆ. 'ಅಪರೂಪ' ಕಥೆಯ ವರ್ಷಾ ಅಂಗವಿಕಲ ಹುಡುಗಿ, ಈ ಅಂಗವಿಕಲತೆಯನ್ನು ಉಪಯೋಗಿಸಿಕೊಂಡು ಆಕೆಯ ತಮ್ಮ ಫೋನ್ ಬೂತ್ ತೆರೆವ ಯೋಚನೆ ಮಾಡುವುದು ಅನುಕಂಪದ ಉಪಯೋಗಿ ಮನೋಭಾವವನ್ನು ಹೇಳುತ್ತದೆ. 'ಅಮೃತಬಳ್ಳಿ ಕಷಾಯ' ಜಯಂತರ ಪ್ರಮುಖ ಕಥೆಗಳಲ್ಲಿ ಒಂದು. ಇಲ್ಲಿನ ವಿವರಣೆ ನಮ್ಮ ಸುತ್ತಲಿನ ದಟ್ಟ ಪರಿಸರವನ್ನು ಹಿಡಿಯಲು ಹವಣಿಸುತ್ತದೆ. ಹಾಗೆಯೇ 'ಮಾಯಿ'ಯ ಪಾತ್ರ ಚಿತ್ರಣ – ಆಕೆಯ ಅಮೃತಬಳ್ಳಿ ಕಷಾಯ, ಆಸ್ಪತ್ರೆಯಲ್ಲಿ ಆಕೆಯ ಸೇವೆ – ಎಲ್ಲವೂ ಮಾನವೀಯ ಮುಖಗಳನ್ನು ತೆರೆದಿಡುತ್ತದೆ.

ಜಯಂತರ ಹೆಚ್ಚು ಕತೆಗಳಲ್ಲಿ 'ಹೆಣ್ಣು' ಪ್ರಮುಖ ಪಾತ್ರ. ಅವರ ಪಾತ್ರ ಸೃಷ್ಟಿಯಲ್ಲಿ ಕಥೆಗಾರ ಬಹಳ ಮೃದು. 'ನೋ ಪ್ರೆಸೆಂಟ್ಸ್ ಪ್ಲೀಸ್' ಕಥೆಯ 'ಅಸಾವರಿ ಲೋಖಂಡೆ', 'ಟಿಕ್ ಟಿಕ್ ಗೆಳೆಯ' ಕಥೆಯ 'ಮಧುಬನಿ' ಇತ್ಯಾದಿ. ಅವರ ಕಥೆಗಳಲ್ಲಿ ಗೊಂದಲ, ಉದ್ವಿಗ್ನತೆ, ಅಸಮರ್ಪಕ ಜೀವನಶೈಲಿ ಇದ್ದಾಗ್ಯೂ ಎಲ್ಲವೂ 'ಸರಿಸಮ' ಸ್ಥಿತಿಗೆ ಬರುವ ಸಿದ್ಧತೆ ಇದೆ. ಕಥೆಗಾರನ ಬಹು ಆಯ್ಕೆಯ ವಿಷಯವೂ ಇಂತಹ ನವಿರುಶೈಲಿಗೆ ಹೊಂದಿಕೆ ಆಗುವ ಮನೋಧರ್ಮದವು. 'ಕಥಾ' ಪ್ರಸ್ತಾಪದಲ್ಲಿಯೇ ಅದನ್ನು ನೋಡಬಹುದು.

'ಬಣ್ಣದ ಕಾಲು' ಕಥೆಯ ಬಿಡಾಡಿ ಹುಡುಗ ಚಂದು ನಮ್ಮ ಅನುಕಂಪವನ್ನು ಹೇಗೆ ಗಳಿಸುತ್ತಾನೆಂದರೆ ಅವನ ಎಲ್ಲಾ ಪುಂಡತನವೂ 'ಕುಂಟ ಮಂಗೇಶನ' ಬಣ್ಣದ ಕಾಲಿನ ಪ್ರಸ್ತಾಪದೊಂದಿಗೆ ಬದಲಾಗುತ್ತದೆ. ಚಂದುವಿನ ಕೀಟಲೆಯನ್ನು ಸಹಿಸದೆ ಮುಂಬಯಿನ ರಿಮಾಂಡ್ ರೂಂಗೆ ಬಿಡಲು ಕರೆತರುವ ಅಪ್ಪನ ಮನಸ್ಸು ಅಲ್ಲಿನ ಸ್ಥಿತಿಗತಿ ನೋಡಿದ ನಂತರ ಬದಲಾಗುವುದು 'ಕಥೆಗಾರ'ನ ಶುದ್ಧ ದೃಷ್ಟಿಕೋನವನ್ನು ತೋರಿಸುತ್ತದೆ. 'ಚಾರ್ ಮಿನಾರ್' ಕಥೆ ಆಧುನಿಕ ಪ್ರಜ್ಞೆಯೊಂದಿಗೆ ರಚಿತವಾಗಿದ್ದರೂ, ಕಥಾನಾಯಕ ಉನ್ನತ ಹುದ್ದೆಯಿಂದ ಹೊರಬಂದು 'ಮನೆ ತೊರೆದ ಮಕ್ಕಳಿಗೆ ಪುನರ್ವಸತಿ' ಕಲ್ಪಿಸುವ ಕಾಯಕದಲ್ಲಿ ತೊಡಗುವುದು ಕಥೆಗಾರನ ವಿಭಿನ್ನ ಮನೋಭಾವವನ್ನು ಹೇಳುತ್ತದೆ. ಹಾಗೇ 'ತೂಫಾನ್ ಮೇಲ್' ಕಥೆಯ ತೂಫಾನ್, ಮಧುವಂತಿಯ ಪಾತ್ರಗಳು – ಜೀವನೋಪಾಯದ ವಿವಿಧ ಮುಖಗಳು, ಮುಂಬಯಿಯ ಯಾಂತ್ರಿಕ ಬದುಕನ್ನು ತೆರೆದಿಡುತ್ತವೆ.

ಮುಂಬಯಿಯಲ್ಲಿ ಅನೇಕ ವರ್ಷಗಳ ಕಾಲ ಕಥೆಗಾರ ವಾಸವಿದ್ದರೂ ಅಲ್ಲಿನ ರಾಜಕೀಯ, ಧರ್ಮದ ಕುರಿತಾದ ಕಚ್ಚಾಟ, ಮುಂಬಯಿ ಬಾಂಬ್ ಸ್ಫೋಟ, ಅನಂತರದ ಬೆಳವಣಿಗೆ ಬಗೆಗೆ ಅವರಿಗೆ ಅಷ್ಟು ಆಸಕ್ತಿಯಿಲ್ಲ! ಕುಟುಂಬ ವ್ಯವಸ್ಥೆಯನ್ನು ಸಮ್ಮಾನಿಸಿ, ಉಧ್ವಸ್ಥ ಮನಸ್ಸಿಗೆ ತಂಪು ನೀಡುವುದೇ ಅವರ ಕಥೆಗಳ ಮುಖ್ಯ ತಿರುಳು. 'ಸಂತೆಯ ದಿನ' ಎಂಬ ಕಥೆಯಲ್ಲಿ ಮಾತ್ರ ''ಶಿವಸೇನೆಯವರು ಯಾವ ಪೂರ್ವಸೂಚನೆ ಕೊಡದೆ ಕರೆಕೊಟ್ಟ ಮುಂಬಯಿ ಬಂದ್ ದಿನ'' ಈ ಪ್ರಸ್ತಾಪದಲ್ಲಿ ಒಂದು ರಾಜಕೀಯ ಪಕ್ಷದ ಹೆಸರನ್ನು ಹೇಳುತ್ತಾರೆ. ಬಂದ್ ದಿನದ ತಳಮಳದ ಚಿತ್ರಣ, ಪ್ಯಾರೇಲಾಲನ ಮಾನವೀಯ ದೃಷ್ಟಿ ಇಲ್ಲೂ ಕಾಣಬಹುದು. ಹೀಗಾಗಿ ತಮ್ಮೆಲ್ಲ ಕಥೆಗಳಲ್ಲಿ ಸಂಬಂಧಗಳ ಬೆಸೆಯುವಿಕೆಗೆ ಹೆಚ್ಚು ಒತ್ತು ನೀಡುತ್ತಾರೆ. ಅವರ ಮನೋಧರ್ಮದ 'ದಗಡೂ ಪರಬನ ಅಶ್ವಮೇಧ' ರೋಚಕ ಶೈಲಿಯಲ್ಲಿ ರಚಿತವಾದ ಕಥೆ. ಅಣ್ಣನ ದರ್ಪ, ಅವನಿಂದ ದೂರಾಗಿ ಹೊಸ ಬದುಕಿನಲ್ಲಿ ಸಂತೋಷವಾಗಿರುವ ತಮ್ಮ! ಹೀಗೆ ಒಂದು ಸರಳೀಕೃತ ತೀರ್ಮಾನಗಳಿಗೆ ನಮ್ಮನ್ನು ಅವರ ಕಥೆಗಳು ದೂಡುತ್ತವೆ.

ಹೀಗೆ ಜಯಂತರ ಕಥೆಗಳು ನಮ್ಮಲ್ಲಿ ಬದುಕಿನ ವಿವಿಧ ಮಗ್ಗಲುಗಳನ್ನು ಪರಿಚಯಿಸುತ್ತಲೇ 'ಮಾನವೀಯ'ವಾದ ನೋಟವೊಂದನ್ನು ನೀಡುತ್ತವೆ. ಅವರ ಅಂಕಣ ಬರಹಗಳು ಇದೇ ಧಾಟಿಯಲ್ಲಿ ರಚಿತವಾಗಿವೆ. ಹೀಗಾಗಿ ಕಥೆಗಾರನ ದೃಷ್ಟಿ-ಧೋರಣೆ ಕೆಲವೊಮ್ಮೆ ಅತಿರೇಕ ಅನ್ನಿಸಿದರೂ 'ಬದುಕು' ಎಂದರೆ ಇದೇ ಎಂಬ ವಿವರದೊಂದಿಗೆ ಮುಗಿಯುತ್ತದೆ. ಕಥೆಗಳು ಆರಂಭವಾಗುವ ಸಂದರ್ಭ ಕೂಡ ಅವರಿಗೇ ವಿಶಿಷ್ಟವಾದದ್ದು. ಉದಾಹರಣೆಗೆ, 'ನೋ ಪ್ರೆಸೆಂಟ್ಸ್ ಪ್ಲೀಸ್' ಕಥೆಯ ''ಕಾಮಗಾರಿ ಅರ್ಧಕ್ಕೆ ನಿಂತಿದ್ದ ಘಾಟ್‌ಕೋಪರ್ ಫ್ಲೈ ಓವರ್ ಬಾಂಬ್ ದಾಳಿಗೆ ತುತ್ತಾಗಿ ಭಗ್ನ ಸೇತುವೆಯಂತೆ ಕಾಣುತ್ತಿತ್ತು. ಎರಡೂ ಬದಿಯಿಂದಲೂ ಸ್ವಲ್ಪ ಸ್ವಲ್ಪ ಆಗಿರುವ ಸೇತುವೆಯ ನಡುವಿನ ವಿಶಾಲ ಪೊಳ್ಳು ಆಕಾಶವನ್ನು ಸರಳುಗಳಿಂದ ತಿವಿಯುವಂತೆ ಕಂಬಗಳು-ನೆಲದಿಂದೆದ್ದು ಬರುತ್ತಿದ್ದವು.'' ಈ ಕಥೆಯ ಮುಕ್ತಾಯ ಗಮನಿಸಿ ''ಭಗ್ನ ಫ್ಲೈ ಓವರ್, ಕಂಬ ಓಡಾಡುವ ಟ್ರಕ್ಕು, ಜಲ್ಲಿಕಲ್ಲು ಸಮೀಪಿಸುತ್ತಿರುವ ರೈಲು ಎಲ್ಲವೂ ಮಕ್ಕಳ ಆಟಿಗೆಯ ಸಾಮಾನುಗಳಂತೆ ಕಂಡವು.'' ಹೀಗೆ ವಿಶಿಷ್ಟ ಪರಿಸರವನ್ನು ಕಟ್ಟಿಕೊಡುವ ಅವರು ಹೆಚ್ಚು ಅಪ್ಪಟತೆ ತರುತ್ತಾರೆ. ಈ ಎಲ್ಲಾ ವಿವರಣೆ ಜೊತೆಗೆ 'ಕೌಟುಂಬಿಕ ಸ್ವಾಸ್ಥ್ಯ'ವನ್ನು ಕಥೆಗಳು ಹೇಳುತ್ತವೆ. ಕಥೆಗಳ ಒಟ್ಟು ಓದಿನಿಂದ 'ಕಾದಂಬರಿ' ಕೊಡುವ ದಟ್ಟ ಅನುಭವ ಪಡೆಯುತ್ತಲೇ ಮಾನವೀಯತೆಯ ಬಹುಮುಖಿ ಸ್ಪರ್ಶವೊಂದನ್ನು ಅನುಭವಿಸಬಹುದು.

ಶಿವರಾಮು ಕಾರಗಡಿ
C/o ನಂ. ಸಿ೬, ಪೊಲೀಸ್ ವಸತಿ ಗೃಹಗಳು, ಮಿಲ್ಲರ್ಸ್ ರಸ್ತೆ, ವಸಂತನಗರ
ಬೆಂಗಳೂರು

# ಜನಾರೋಗ್ಯ ಪರವಾದ ಪೇಟೆಂಟ್ ತೀರ್ಪು

**ಡಾ|| ಪ್ರಕಾಶ್ ಸಿ. ರಾವ್**

ಸ್ವಿಟ್ಜರ್‌ಲ್ಯಾಂಡಿನ ನೋವಾರ್ಟಿಸ್ ಎಂಬ ದೊಡ್ಡ ಅಂತರರಾಷ್ಟ್ರೀಯ ಔಷಧಿ ಕಂಪನಿಯು ಭಾರತದ ಪೇಟೆಂಟ್ ವ್ಯವಸ್ಥೆಯನ್ನು ವಿರೋಧಿಸಿ, ಗ್ಲಿವ್ಯಾಕ್ ಎಂಬ ಔಷಧಿಗೆ ಪೇಟೆಂಟ್ ಪಡೆಯಲು ಚೆನ್ನೈ ಹೈಕೋರ್ಟಿನಲ್ಲಿ ಹಾಕಿದ ಅರ್ಜಿಯನ್ನು ಆಗಸ್ಟ್ ೬, ೨೦೦೭ರಂದು ತಿರಸ್ಕರಿಸಲಾಗಿದೆ. ಇದನ್ನು ಜನಾರೋಗ್ಯಕ್ಕೆ ಸಂದ ಜಯ ಎನ್ನಬಹುದು.

ಭಾರತದಲ್ಲಿ ರಕ್ತದ ಕ್ಯಾನ್ಸರ್ (Chronic Myeloid Leukaemia)ನಿಂದ ಬಳಲುವವರ ಸಂಖ್ಯೆ ೨೦,೦೦೦. ಬೇರೆ ದೇಶಗಳಲ್ಲಿಯೂ ಈ ರೋಗದಿಂದ ಬಳಲುವ ರೋಗಿಗಳಿದ್ದಾರೆ. ಭಾರತದಲ್ಲಿ ಸಿಪ್ಲಾ, ಹೆಟರೊ, ನ್ಯಾಟ್ಕೊ, ರ್ಯಾನ್‌ಬಾಕ್ಸಿ ಎಂಬ ಕಂಪನಿಗಳು ಈ ರೋಗಕ್ಕೆ ಜಾತಿಸೂಚಕ (Generic) ಔಷಧಿ ತಯಾರಿಸುತ್ತಿದ್ದಾರೆ. ಈ ಔಷಧಿಯಿಂದಾಗಿ ಇಂತಹ ರೋಗಿಗಳನ್ನು ಜೀವಂತವಾಗಿಡಲು ಸಾಧ್ಯವಾಗಿದೆ. ಈ ಔಷಧಿ ದುಬಾರಿ. ಅದನ್ನು ಒಂದು ತಿಂಗಳು ಬಳಸಿದರೆ ರೂ. ೮,೦೦೦ ಖರ್ಚಾಗುತ್ತದೆ. ೧೯೯೩ರಲ್ಲಿ ನೋವಾರ್ಟಿಸ್ ಕಂಪನಿ ಇದೇ ರೋಗಕ್ಕೆ ಗ್ಲಿವ್ಯಾಕ್ (Imatinib) ಎಂಬ ಗುರುತುಸೂಚಕ (Branded Medicine) ಔಷಧಿಯನ್ನು ತಯಾರಿಸಿ ಪೇಟೆಂಟ್ ಪಡೆದಿತ್ತು. ಒಂದು ತಿಂಗಳು ಇದನ್ನು ಒಬ್ಬ ವ್ಯಕ್ತಿ ಬಳಸಿದರೆ ಒಂದು ಲಕ್ಷ, ಇಪ್ಪತ್ತು ಸಾವಿರ ರೂಪಾಯಿಗಳು ಖರ್ಚಾಗುತ್ತದೆ. ೮,೦೦೦ ರೂಪಾಯಿಗಳಿಗೆ ಲಭ್ಯವಿರುವ ಔಷಧಿಗಳನ್ನು ಬಿಟ್ಟು ಯಾರು ತಾನೆ ಒಂದು ಲಕ್ಷ ಇಪ್ಪತ್ತು ಸಾವಿರ ರೂಪಾಯಿಯ ಔಷಧಿ ಖರೀದಿಸುತ್ತಾರೆ ? ಆದರೆ ಈಗ ನೋವಾರ್ಟಿಸ್ ಕಂಪನಿ ಗ್ಲಿವ್ಯಾಕ್ ಔಷಧಿಗೆ ಪೇಟೆಂಟ್ ಪಡೆಯಲು ಮುಂದಾಗಿದೆ. ಒಮ್ಮೆ ಪೇಟೆಂಟ್ ಸಿಕ್ಕರೆ ೮,೦೦೦ ರೂಪಾಯಿಗಳ ಔಷಧಿ ತಯಾರಿಸುವಂತಿಲ್ಲ. ಒಂದು ಬಾರಿ ಪೇಟೆಂಟ್ ಪಡೆದ ನೋವಾರ್ಟಿಸ್ ಅದೇ ಔಷಧಿಗೆ ಈಗ ಮತ್ತೊಮ್ಮೆ ಪೇಟೆಂಟ್ ಪಡೆಯಲು ಹೇಗೆ ಸಾಧ್ಯ?

ಯಾವುದೇ ಔಷಧಿ ಅಥವಾ ವಸ್ತುವನ್ನು ಸಂಶೋಧನೆ ಮಾಡಿದ ವ್ಯಕ್ತಿಗೆ ಕೆಲವು ಕಾಲ ಸರಕಾರ ಕೊಡುವ ಮನ್ನಣೆಯನ್ನು ಪೇಟೆಂಟ್ ಎಂದು ಕರೆಯಲಾಗುತ್ತದೆ. ಪೇಟೆಂಟ್, ಅದೇ ಔಷಧಿಯಿಂದ ಬೇರೆಯವರು ಲಾಭ ಮಾಡದಂತೆ ನೀಡುವ ರಕ್ಷಣೆಯೂ ಕೂಡ. ಗ್ಲಿವ್ಯಾಕ್ ಔಷಧಿಗೆ ೧೯೯೩ರಲ್ಲಿ ನೋವಾರ್ಟಿಸ್ ಪೇಟೆಂಟ್ ಪಡೆದಿತ್ತು. ಆದರೆ ಈಗ ನೋವಾರ್ಟಿಸ್ ಕಂಪನಿ ಆ ಔಷಧಿಯ ಸ್ವರೂಪವನ್ನು ಸ್ವಲ್ಪ ಬದಲಾಯಿಸಿ (ಬೀಟಾ ಕ್ರಿಸ್ಟಲ್) ಭಾರತದಲ್ಲಿ ಅದಕ್ಕೆ ಹೊಸದಾಗಿ ಪೇಟೆಂಟ್ ಪಡೆಯಲು ಮುಂದಾಗಿದೆ.

ಈ ವಿಷಯ ಭಾರತೀಯ ಪೇಟೆಂಟ್ ಆಫೀಸಿನ ಗಮನಕ್ಕೆ ಬಂದಾಗ ಅದು ಕಂಡುಕೊಂಡ ವಿಷಯವೇನೆಂದರೆ, ಈಗ ಪೇಟೆಂಟ್ ಪಡೆಯಬೇಕಾಗಿರುವ ಗ್ಲಿವ್ಯಾಕ್ ಹೊಸ ಔಷಧಿಯೇ ಅಲ್ಲ. ಆದ್ದರಿಂದ, ಪೇಟೆಂಟ್ ಆಫೀಸು ಅದಕ್ಕೆ ಪೇಟೆಂಟ್ ಕೊಡಲು ನಿರಾಕರಿಸಿದೆ. ಪೇಟೆಂಟ್ ಆಫೀಸಿಗೆ ಇರುವ ಆಧಾರ ನಮ್ಮ ಕಾನೂನಿನ ಸೆಕ್ಷನ್ 3(d). ನೋವಾರ್ಟಿಸ್ ಕಂಪನಿಯು ಪೇಟೆಂಟ್ ಆಫೀಸ್ ಹಾಗೂ ಕಾನೂನಿನ ಸೆಕ್ಷನ್ 3(d) ವಿರುದ್ಧ ಕೋರ್ಟಿನಲ್ಲಿ ಸಮರ ಹೂಡಿದೆ. ಭಾರತವು ಪೇಟೆಂಟ್ ಕಾನೂನಿಗೆ ತಿದ್ದುಪಡಿ ತಂದಮೇಲೆ ವಿಶ್ವವ್ಯಾಪಾರ ಸಂಸ್ಥೆಗೆ ಒಳಪಟ್ಟಿದೆ. ಈಗಲೂ ಭಾರತ ಕಾನೂನಿನ 3(d) ಸೆಕ್ಷನ್ ಬಳಸುತ್ತಿದೆ. ಅದನ್ನು ಬದಿಗಿಟ್ಟು ಹೈಕೋರ್ಟ್ ತೀರ್ಮಾನ ಕೊಡಬೇಕೆಂದು ನೋವಾರ್ಟಿಸ್ ಕೋರ್ಟಿನಲ್ಲಿ ವಾದಿಸಿದೆ. ಈ ಸಂಬಂಧದಲ್ಲಿ ಹೈಕೋರ್ಟ್ ಈ ರೀತಿ ತೀರ್ಪು ನೀಡಿದೆ : ಗ್ಲಿವ್ಯಾಕ್ ಹಳೆಯ ಔಷಧಿಯ ಹೊಸ ರೂಪವಷ್ಟೆ. ಔಷಧಿ ಪೇಟೆಂಟ್ ಬೇಕಾಗಿರುವುದು ಅದರ ಸಂಶೋಧನೆಯ ಗುಣಕ್ಕೇ ಹೊರತು ಔಷಧಿ ಇರುವುದು ಆ ಕಂಪನಿಗೆ ಲಾಭ ಮಾಡಿಕೊಳ್ಳುವುದಕ್ಕಲ್ಲ. ಭಾರತದ ಕಾನೂನಿನ 3(d) ಸೆಕ್ಷನ್ ಅಡಿಯಲ್ಲಿ ಯಾವ ಔಷಧಿಗೆ ಪೇಟೆಂಟ್ ಕೊಡಬಹುದೆಂದು ತೀರ್ಮಾನಿಸಲಾಗುತ್ತದೆ. ಈ ಕಾನೂನು ಸಂಸತ್ತಿನಲ್ಲಿ ರೂಪುಗೊಂಡಿದೆ. ನೋವಾರ್ಟಿಸ್ ಹೇಳಿದಂತೆ ಇದನ್ನು ಬದಿಗಿಡಲು ಭಾರತದಲ್ಲಿ ಯಾವ ಕೋರ್ಟಿಗೂ ಅಧಿಕಾರವಿಲ್ಲ ಹಾಗೂ ಅದರ ಬಗ್ಗೆ ಯಾವುದೇ ತಕರಾರಿದ್ದಲ್ಲಿ ಆ ಕುರಿತು ವಿಶ್ವವ್ಯಾಪಾರ ಸಂಘಟನೆಯ ತಕರಾರು ಪರಿಹಾರ ಮಂಡಳಿಗೆ ಅರ್ಜಿ ಸಲ್ಲಿಸಬೇಕೆಂದು ನೋವಾರ್ಟಿಸ್‌ಗೆ ಸೂಚಿಸಲಾಗಿದೆ. ಅಂತೆಯೇ ನೋವಾರ್ಟಿಸ್ ಕಂಪನಿಯ ಅರ್ಜಿಯನ್ನು ತಿರಸ್ಕರಿಸಲಾಗಿದೆ.



**ಕೋರ್ಟಿನಲ್ಲಿ ತೀರ್ಪು ನೋವಾರ್ಟಿಸ್ ಪರವಾಗಿದ್ದರೆ ? ಆಗ**

(೧) ಭಾರತೀಯ ಕಂಪನಿಗಳು ಜಾತಿಸೂಚಕ ಔಷಧಿಗಳನ್ನು ತಯಾರಿಸುವುದನ್ನು ನಿಲ್ಲಿಸಬೇಕಾಗುತ್ತಿತ್ತು. ಭಾರತದಲ್ಲಿ ಸರಕಾರಿ ಆಸ್ಪತ್ರೆಗಳಲ್ಲಿ ಜಾತಿಸೂಚಕ ಔಷಧಿಗಳು ಬಳಕೆಯಾಗುತ್ತಿವೆ. ಈ ಔಷಧಿಗಳು ಗುರುತುಸೂಚಕ ಔಷಧಿಗಿಂತ (Branded) ಕಡಿಮೆ ಬೆಲೆಯಲ್ಲಿ ದೊರಕುತ್ತವೆ. ಉದಾಹರಣೆಗೆ, ಗುರುತುಸೂಚಕ ಔಷಧಿಯಾದ ಗ್ಲಿವ್ಯಾಕ್‌ನ ಬೆಲೆ ಒಂದು ಲಕ್ಷ ಇಪ್ಪತ್ತು ಸಾವಿರ ರೂ.ಗಳು. ಅದೇ ಜಾತಿಸೂಚಕ ಔಷಧಿಯ ಬೆಲೆ ಎಂಟು ಸಾವಿರ ರೂಪಾಯಿಗಳು. ಭಾರತದಂತಹ ಬಡದೇಶದಲ್ಲಿ ಎಲ್ಲರೂ ಗುರುತುಸೂಚಕ ಔಷಧಿಗಳನ್ನು ಖರೀದಿಸಲು ಸಾಧ್ಯವಿಲ್ಲ. ನೋವಾರ್ಟಿಸ್‌ಗೆ ಗ್ಲಿವ್ಯಾಕ್ ತಯಾರಿಸಲು ಪರವಾನಗಿ ದೊರೆತಿದ್ದೇ ಆದರೆ ಭಾರತದಲ್ಲಿ ಜಾತಿಸೂಚಕ ಔಷಧಿ ತಯಾರಿಸುವವರೇ ಇಲ್ಲದಂತಾಗುತ್ತದೆ; ಮತ್ತು (೨) ಬಹುರಾಷ್ಟ್ರೀಯ ಕಂಪನಿಗಳು ಕ್ಷುಲ್ಲಕ ಔಷಧಿಗಳಿಗೂ ಪೇಟೆಂಟ್ ಪಡೆಯಲು ಸಾಧ್ಯವಾಗುತ್ತಿತ್ತು. ನೋವಾರ್ಟಿಸ್ ಅದನ್ನೇ ಮಾಡುತ್ತಿದೆ. ಈಗ ಭಾರತೀಯ ಪೇಟೆಂಟ್ ಕಚೇರಿಗೆ ೯,೦೦೦ ಅರ್ಜಿಗಳನ್ನು ಸಲ್ಲಿಸಲಾಗಿದೆ. ಆ ಔಷಧಿಗಳಲ್ಲಿ ಎಷ್ಟು ಕ್ಷುಲ್ಲಕ ಎಂಬುದರ ಬಗ್ಗೆ ಪೇಟೆಂಟ್ ಕಚೇರಿ ತೀರ್ಮಾನಿಸಬೇಕಿದೆ. ಈ ತೀರ್ಪು ಪೇಟೆಂಟ್ ಕಚೇರಿಗೆ ಪ್ರೋತ್ಸಾಹ ನೀಡಿದಂತಾಗುತ್ತದೆ. (೩) ಭಾರತೀಯರಿಗೆ ಹಾಗೂ ಜಗತ್ತಿನ ಅನೇಕ ಬಡರಾಷ್ಟ್ರಗಳ ಜನರಿಗೆ ಭಾರತೀಯ ಜಾತಿಸೂಚಕ ಔಷಧಿಗಳು ದೊರೆಯದಂತಾಗುತ್ತಿತ್ತು – ಜನಾರೋಗ್ಯಕ್ಕೆ ಅಪಾಯ ಒದಗಬಹುದಾಗಿತ್ತು.

ನೋವಾರ್ಟಿಸ್ ಕೋರ್ಟ್ ಕೇಸಿಗೆ ಭಾರತದಲ್ಲಿ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ವಿರೋಧ ವ್ಯಕ್ತವಾಗಿದೆ. ನೊಬೆಲ್ ಪ್ರಶಸ್ತಿ ಪಡೆದ ಸಂಸ್ಥೆಯಾದ ಮೆಡಿಕೋ ಸೈನ್ಸ್ ಫ್ರಾಂಟಿಯರ್ ಇಂಟರ್‌ನ್ಯಾಷನಲ್ ಹಾಗೂ ಭಾರತೀಯ ಜನಾರೋಗ್ಯ ಸಂಘಟನೆಗಳು ಈ ಕೋರ್ಟ್ ಕೇಸಿನ ವಿರುದ್ಧ ಪ್ರತಿಭಟಿಸಿದವು. ಇದಲ್ಲದೆ ಮುಂಬಯಿನ ಕ್ಯಾನ್ಸರ್ ಹಾಗೂ ಏಡ್ಸ್ ಅಸೋಸಿಯೇಷನ್ ಈ ಪ್ರತಿಭಟನೆಯಲ್ಲಿ ಪಾಲ್ಗೊಂಡಿತು.

ಭಾರತೀಯ ಕಂಪನಿಗಳ ಜಾತಿಸೂಚಕ ಔಷಧಿಗಳನ್ನು ಯುನಿಸೆಫ್ ಮಾತ್ರವಲ್ಲದೆ, ನೂರಾರು ದೇಶಗಳೂ ಖರೀದಿಸುತ್ತಿವೆ. ಕೋರ್ಟ್ ತೀರ್ಪು ಅವರೆಲ್ಲರಿಗೂ ಸಂತಸ ತಂದಿದೆ.

ನೋವಾರ್ಟಿಸ್ ಈಗ ಪುನಃ ಕೋರ್ಟಿಗೆ ಹೋಗಿದೆ! ಕೋರ್ಟ್‌ಗಳು ಜನಾರೋಗ್ಯದ ಪರವಾಗಿ ತೀರ್ಪು ನೀಡಿದರೆ ಯಾವ ಅಪಾಯವೂ ಇರಲಾರದು.

**ಭಾರತ ಹಾಗೂ ಬಹುರಾಷ್ಟ್ರೀಯ ಔಷಧಿ ಕಂಪನಿಗಳು**

ಭಾರತದಲ್ಲಿ ಔಷಧಿ ಉದ್ಯಮ ಪ್ರಾರಂಭವಾದದ್ದು ೧೯೨೦ರಲ್ಲಿ. ಆನಂತರವೇ ಬಹುರಾಷ್ಟ್ರೀಯ ಔಷಧಿ ಕಂಪನಿಗಳು ಭಾರತಕ್ಕೆ ಕಾಲಿಟ್ಟವು. ಪ್ರಾರಂಭದಲ್ಲಿ ಈ ಕಂಪನಿಗಳು ಕೇವಲ ಹೊರದೇಶಗಳಲ್ಲಿ ತಯಾರಿಸಿದ ಔಷಧಿಗಳನ್ನು ಮಾರುತ್ತಿದ್ದು, ಕ್ರಮೇಣ ಹೊರದೇಶದಿಂದ ಕಚ್ಚಾ ವಸ್ತುಗಳನ್ನು ತಂದು ಔಷಧಿ ತಯಾರಿಸಿ (formulation) ಮಾರಲು ಪ್ರಾರಂಭಿಸಿದವು. ಆದರೆ ಪ್ರಾರಂಭದ ಹಂತದಿಂದ ಕೊನೆಯ ಹಂತದವರೆಗೆ ಔಷಧಿಗಳನ್ನು ತಯಾರಿಸಿ ಭಾರತಕ್ಕೆ ಸ್ವಾವಲಂಬನೆ ತಂದುಕೊಡುವುದರ ಬದಲು ಕೇವಲ ಔಷಧಿ ತಯಾರಿಸಿ (formulation) ಅಪಾರ ಲಾಭ ಗಳಿಸಲು ಮುಂದಾದವು. ಎಂದಿಗೂ ಬಹುರಾಷ್ಟ್ರೀಯ ಕಂಪನಿಯ ಔಷಧಿಗಳು ಅತ್ಯಂತ ದುಬಾರಿ ಹಾಗೂ ಅವು ನಮಗೆ ಅಗತ್ಯವಿರುವ ಔಷಧಿಗಳನ್ನು ತಯಾರಿಸಲು ನಿರಾಕರಿಸಿದ್ದೂ ಉಂಟು (ಉದಾಹರಣೆಗೆ, ಕ್ಷಯರೋಗಕ್ಕೆ). ಭಾರತದಲ್ಲಿ ಸಾರ್ವಜನಿಕ ಔಷಧಿ ಕಂಪನಿಗಳು ಪ್ರಾರಂಭವಾದ ಮೇಲೆ ಭಾರತದಲ್ಲಿ ಪರಿಸ್ಥಿತಿ ಸುಧಾರಿಸಿತು. ಅದಕ್ಕೆ ಪೂರಕವಾಗಿ ಭಾರತೀಯ ಪೇಟೆಂಟ್ ಕಾನೂನು ನೆರವಿಗೆ ಬಂತು. ಹಾಥಿ ಸಮಿತಿ ವರದಿಯು ''ಬಹುರಾಷ್ಟ್ರೀಯ ಕಂಪನಿಗಳು ನಮ್ಮ ದೇಶದಲ್ಲಿ ಔಷಧಿ ಕ್ಷೇತ್ರದಲ್ಲಿ ತಮ್ಮದೇ ಆದ ಹಿಡಿತ ಸಾಧಿಸಿವೆ. ಆದ್ದರಿಂದ ಅವುಗಳ ಹಿಡಿತ (ಶೇ. ೨೬ರಷ್ಟು) ಈಕ್ವಿಟಿಗೆ ಇಳಿಸಬೇಕು'' ಎಂದು ಹೇಳಿದೆ.




ಆದರೆ, ಜಾಗತೀಕರಣ ಪ್ರಕ್ರಿಯೆಯಿಂದಾಗಿ ಭಾರತೀಯ ಪೇಟೆಂಟ್ ಕಾನೂನನ್ನು ತಿರುಚಲು ಹಾಗೂ ಅದು ಬಹುರಾಷ್ಟ್ರೀಯ ಕಂಪನಿಗಳಿಗೆ ಲಾಭದಾಯಕವಾಗುವಂತೆ ಮಾಡಲು ತಿದ್ದುಪಡಿ ತರಲಾಗಿದೆ. ಆದ್ದರಿಂದಲೇ ನೋವಾರ್ಟಿಸ್ ಪೇಟೆಂಟ್ ಪಡೆಯುವ ದುಸ್ಸಾಹಸಕ್ಕಿಳಿದಿತ್ತು.

**ಬಹುರಾಷ್ಟ್ರೀಯ ಕಂಪನಿಯ ಔಷಧಿಗಳು**

ಬಹುರಾಷ್ಟ್ರೀಯ ಕಂಪನಿಗಳಿಗೆ ಜನಾರೋಗ್ಯದ ಬಗ್ಗೆ ಎಳ್ಳಷ್ಟೂ ಕಾಳಜಿ ಇಲ್ಲ. ಅವು ಕೇವಲ ಲಾಭಕ್ಕಾಗಿ ಔಷಧಿ ತಯಾರಿಸುತ್ತವೆ. ವೈದ್ಯರಿಗೆ ಸುಳ್ಳು ಪುರಾವೆ ಒದಗಿಸಿ, ಹೆಚ್ಚು ಬೆಲೆಯ ಅನಗತ್ಯ ಔಷಧಿಗಳನ್ನು ಮಾರಲು ಹೊರಟಿವೆ. ವೈದ್ಯರನ್ನು ಪುಸಲಾಯಿಸಲು ಸಣ್ಣಪುಟ್ಟ ಉಡುಗೊರೆಗಳನ್ನು ಕೊಟ್ಟು ತಮ್ಮ ಬ್ರಾಂಡುಗಳ ಮಾರಾಟ ಹೆಚ್ಚಿಸಿಕೊಂಡಿವೆ. ಜಾಗತೀಕರಣದ ಪ್ರಭಾವದಿಂದ ಈ ಕಂಪನಿಗಳು ಸಣ್ಣ ಸಣ್ಣ ಔಷಧಿಗಳನ್ನು ನುಂಗಿ ನೀರು ಕುಡಿಯುತ್ತಿವೆ. ಪೇಟೆಂಟ್ ಹೆಸರಿನಲ್ಲಿ ಏಕಸ್ವಾಮ್ಯ ಮುಂದುವರೆಸಿವೆ. ಈ ನೋವಾರ್ಟಿಸ್‌ನಂತಹ ಕಂಪನಿಗಳು ಇಲ್ಲಸಲ್ಲದ ಔಷಧಿಗಳ ಪೇಟೆಂಟ್ ಪಡೆಯಲೂ ಮುಂದಾಗಿವೆ ಹಾಗೂ ಭಾರತೀಯ ಕಾನೂನು ಹಾಗೂ ಕೋರ್ಟುಗಳಿಗೆ ಸವಾಲೊಡ್ಡುತ್ತಿವೆ.

**ಡಾ॥ ಪ್ರಕಾಶ್ ಸಿ. ರಾವ್**
ನಂ. ೭೩/೨, ಮೊದಲನೇ 'ಆರ್' ಬಡಾವಣೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

# ನನ್ನ ಲೇಖನಿ

ಮನದಲ್ಲೇ ಅಳುಕುತ್ತೇನೆ
ಮತ್ತೆ ಮತ್ತೆ ಕೇಳುತ್ತೇನೆ
ನನ್ನ ನೆರಳಿಗೆ, ನನ್ನ ಸ್ವಗತಕ್ಕೆ
ಹಿಂಜರಿಯುತ್ತಲೇ ಕೇಳುತ್ತೇನೆ
ಯಾರಿಗಾದರೂ ಲಾಭವಾಗಿದೆಯೇ
ನನ್ನ ಲೇಖನಿಯಿಂದ ?
ನೋವುಗಳು ನಲಿವಾಗಿವೆಯೆ ?
ಪರಿಹಾರವಾಗಿವೆಯೇ ಕಷ್ಟಗಳು ?
ಮತ್ತೇಕೆ ನಾನು ಆಯ್ಕೆ
ಮಾಡಿದೆ ಲೇಖನಿಯನ್ನು ?
ನನ್ನ ಅಂತಿಮ ಆಯ್ಕೆ
ಲೇಖನಿಯೆಂಬುದೇನೋ ನಿಜ.
ಭಾಷೆ ನನ್ನ ಆಯ್ಕೆಯಲ್ಲ.
ಹುಟ್ಟು ನನ್ನ ಕೈಯಲ್ಲಿಲ್ಲ
ಹಾಯ ಕಟ್ಟಿದ್ದೇನೆ ಹಡಗಿಗೆ
ಗಾಳಿ ಬೀಸಿದತ್ತ ಸಾಗುತ್ತದೆ
ಯಾರಿಗೆ ಗೊತ್ತು ಬದುಕಿನ
ಯಾವ ದಡ ಸೇರುತ್ತದೆ ಹಡಗು.
ಎಂದಾದರೊಂದು ದಿನ
ಬಟಾಬಯಲಾಗಬೇಕಲ್ಲವೆ ?
ನನ್ನ ರಕ್ತದೊಳಗಿನ ಕಾವ್ಯ
ನನ್ನದೇ ಪ್ರತಿಬಿಂಬ
ಬಿಸಿಲ ಮಳೆಗೆ ತೆರೆದುಕೊಂಡ
ಜೀವ ಜೀವದ ಕಾವ್ಯ
ಉಪ್ಪು ಹನಿ ಘನೀಕರಿಸಿದ
ಶುದ್ಧ ಹರಳುಗಳ ಕಾವ್ಯ
ಅನುದಿನವೂ ನವನಿರ್ಮಿತಿಗಾಗಿ
ಅನುಭೂತಿಯ ಸಾಕ್ಷಾತ್ಕಾರಕ್ಕಾಗಿ
ಬರೆಯಲಾರೆ ಅರೆಬರೆಯ ಕಾವ್ಯ
ಅದಕ್ಕೆ ಅಳುಕುತ್ತೇನೆ ನಾನು
ಮತ್ತೆ ಮತ್ತೆ ಕೇಳುತ್ತೇನೆ
ಲಾಭವಾಗಿದೆಯೇ ಯಾರಿಗಾದರೂ
ನನ್ನ ಲೇಖನಿಯಿಂದ ?

**ಕೆ. ಷರೀಫಾ**
ಎ.ಪಿ.ಎಂ.ಸಿ., ಹರಿಹರ - ೫೭೭ ೬೦೧



ಪ್ರತಿಯೊಂದು ಕುಲಕಸುಬಿಗೂ ತನ್ನದೇ ಆದ ಪದಕೋಶವಿದೆ. ಕೃಷಿ, ಕಮ್ಮಾರಿಕೆ, ಚಮ್ಮಾರಿಕೆ, ಕ್ಷೌರಿಕೆ, ಕುಂಬಾರಿಕೆ, ಯಾವುದೇ ಇರಲಿ ಅವುಗಳಿಗೆಲ್ಲ ತನ್ನದೇ ಆದ ಪದಕೋಶವಿದೆ. ಇದೊಂದು ರೀತಿಯಲ್ಲಿ ಉಪಭಾಷೆ. ಗ್ರಾಮೀಣ ನೆಲೆಯಲ್ಲಿ ಬೆಳೆದು ಬಂದ ಕುಲಕಸುಬುಗಳ ಪದಕೋಶದಲ್ಲಿ ಆಡುನುಡಿಗಳೇ ಹೆಚ್ಚು, ಜನಪದ ಮೂಲದಿಂದ ಬಂದವುಗಳು. ಶುದ್ಧ ಕನ್ನಡದವುಗಳೆಂದು ಹೇಳಬಹುದು. ಈ ಉಪಭಾಷೆಯ ಪದಗಳು ಸಾಮಾನ್ಯ ನಿಘಂಟಿನಲ್ಲಿ ದೊರೆಯುವುದು ಕಷ್ಟ.

ಕನ್ನಡ ನಿಘಂಟು ಶಾಸ್ತ್ರಕ್ಕೆ ಪಾಶ್ಚಿಮಾತ್ಯರ ಕೊಡುಗೆ ಅಪಾರ. ಇದಕ್ಕೆ ರೀವ್ಹರ್ ಮತ್ತು ಕಿಟೆಲ್ ತಕ್ಕ ಉದಾಹರಣೆ. ವೃತ್ತಿಪದಕೋಶದ ಬೆಳವಣಿಗೆಗೆ ಕೂಡ ಅವರ ಸೇವೆ ಮಹತ್ತರವಾದುದು. ಆಧುನಿಕ ಭಾರತೀಯ ವೃತ್ತಿಪದಕೋಶದ ಚರಿತ್ರೆಯಲ್ಲಿ ಮೊತ್ತಮೊದಲು ಪ್ರಕಟವಾದ ವೃತ್ತಿಪದಕೋಶವೆಂದರೆ 'Materials for a Rural and Agricultural Gloassary of North Western Provinces and Oudh'. ಈ ಶಬ್ದಾವಳಿಯನ್ನು ೧೮೭೯ರಲ್ಲಿ ಅಲಹಾಬಾದದಿಂದ ಕ್ರೂಕ್ ಅವರು ಸಂಕಲಿಸಿದ್ದಾರೆ. ಕನ್ನಡ ವೃತ್ತಿಪದಕೋಶ ಒಂದು ಶತಮಾನದಷ್ಟು ಹಳೆಯದಾದರೂ ಹೆಚ್ಚಿನ ಬೆಳವಣಿಗೆಯನ್ನು ಕಂಡಿಲ್ಲ. ಉಲ್ಲಾಳ ನರಸಿಂಗರಾವ್ ಅವರು ಸಿದ್ಧಪಡಿಸಿದ ಬೇರೆ ಬೇರೆ ವೃತ್ತಿಗಳಿಗೆ ಸೇರಿದ ಎಚ್. ಕಿಸಮ್‌ವಾರ್ ಅವರ Glossary of Kannada Words (1891) ಕನ್ನಡದ ಮೊದಲ ವೃತ್ತಿಪದಕೋಶವೆಂದು ಅಭಿಪ್ರಾಯಪಡಲಾಗಿದೆ. ಈ ಮೊದಲಿನ ವೃತ್ತಿಪದಕೋಶಗಳು ಹೆಚ್ಚಾಗಿ ವೈದ್ಯವಿಜ್ಞಾನಕ್ಕೆ ಮಾತ್ರ ಸೀಮಿತವಾದಂತೆ ಕಂಡುಬರುತ್ತದೆ. ಈ ಕುರಿತಂತೆ ಇನ್ನೂ ಹೆಚ್ಚಿನ ಶೋಧನೆ ಅಗತ್ಯ.

ದಕ್ಷಿಣ ಭಾರತದಲ್ಲಿ ಆಂಧ್ರಪ್ರದೇಶವು ತೆಲುಗು ವೃತ್ತಿಪದಕೋಶ ರಚನೆಯಲ್ಲಿ, ಉಳಿದ ದಕ್ಷಿಣ ಭಾರತದ ರಾಜ್ಯಗಳಿಗಿಂತ ಮುಂದಿದೆ. ಯಂತ್ರ ನಾಗರಿಕತೆಯಿಂದ ಗ್ರಾಮೀಣ ವೃತ್ತಿಗಳು ಕಣ್ಮರೆಯಾಗುತ್ತಿರುವಾಗ ಸಹಜವಾಗಿಯೆ ಆ ವೃತ್ತಿವಲಯದ ಶಬ್ದಗಳು ಕಣ್ಮರೆಯಾಗುತ್ತಿವೆ. ಈ ಸಂದರ್ಭದಲ್ಲಿ ವೃತ್ತಿಪದಕೋಶಗಳ ಅಧ್ಯಯನ ಅಗತ್ಯವಿದೆ. ಜನಾಂಗೀಯ ಅಧ್ಯಯನಕ್ಕೆ, ಜನಪದ ಶಾಸ್ತ್ರಜ್ಞರಿಗೆ, ಇದರಿಂದ ಹೆಚ್ಚಿನ ಪ್ರಯೋಜನವಿದೆ.

**ವೃತ್ತಿಪದಕೋಶದ ಕೆಲವು ಸಮಸ್ಯೆಗಳು**

ವೃತ್ತಿಪದಕೋಶಗಳು ವಸ್ತುಪ್ರಧಾನವಾದುದರಿಂದ ತಾನು ಸಿದ್ಧಪಡಿಸಲು ಹೊರಟಿರುವ ಶಬ್ದಕೋಶದ ಬಗೆಗೆ ಕೋಶಕಾರನಿಗೆ ಪರಿಪೂರ್ಣ ಜ್ಞಾನವಿರಬೇಕು. ಅವುಗಳ ತಾಂತ್ರಿಕ ವಿಷಯಗಳ ತಲಸ್ಪರ್ಶಿ ಜ್ಞಾನವಿದ್ದರೆ ಮಾತ್ರ ತಪ್ಪಿಲ್ಲದೆ ಉತ್ತಮ ವೃತ್ತಿಪದಕೋಶದ ರಚನೆ ಸಾಧ್ಯವಾಗುತ್ತದೆ. ಸಾಮಾನ್ಯ ನಿಘಂಟುಗಳಲ್ಲಿ ವೃತ್ತಿಪದಗಳು ದೊರೆಯದ ಕಾರಣ ವ್ಯಾಪಕವಾದ ಸಮೀಕ್ಷೆ, ಪೂರ್ವಭಾವಿ ಅಭ್ಯಾಸ, ವಿಷಯ ಸಂಗ್ರಹ ಬಹಳ ಅಗತ್ಯ. ನಮ್ಮಲ್ಲಿ ವಸ್ತು ವಿಷಯ ವಿಜ್ಞಾನ ಸಾಹಿತ್ಯ ಹೆಚ್ಚಾಗಿ ಬೆಳೆಯದಿರುವುದು ವೃತ್ತಿಪದಕೋಶ ರಚನೆಗೆ ಮತ್ತೊಂದು ಅಡಚಣೆ. ಸಮಗ್ರ ವೃತ್ತಿಪದಕೋಶದ ತಯಾರಿಕೆಯಲ್ಲಿ ಬೇರ ಬೇರೆ ಪರಿಣತರ ಗುಂಪು ಅವಶ್ಯ. ಅದರಲ್ಲೂ ಆಯಾ ವೃತ್ತಿ ಮೂಲದ ಒಬ್ಬರಾದರೂ ಇರುವುದು ಬಹಳ ಅಗತ್ಯ. ವೃತ್ತಿಪದ ಕೋಶದ ರಚನಾಕಾರರಿಗೆ ಬರಿಯ ಭಾಷೆ, ವ್ಯಾಕರಣ, ಶೈಲಿಯ ಮೇಲೆ ಹಿಡಿತವಿದ್ದರೆ ಸಾಲದು, ವಸ್ತು ವಿಷಯದ ಜ್ಞಾನವೇ ಇಲ್ಲಿ ಮುಖ್ಯ. ಆದ್ದರಿಂದ ವೈದ್ಯಕೀಯ ವಿಜ್ಞಾನದ ಪದಕೋಶದ ರಚನೆಯನ್ನು ವೈದ್ಯರಾದವರು, ಸಿವಿಲ್ ಇಂಜಿನಿಯರಿಂಗ್ ಪದಕೋಶವನ್ನು ಸಿವಿಲ್ ಇಂಜಿನಿಯರಿಂಗ್‌ನಲ್ಲಿ ಪರಿಣತಿ ಹೊಂದಿದ ಇಂಜಿನಿಯರರು ರಚಿಸುವುದು ಒಳಿತು. ಭಾಷೆಯ ಮೇಲೆ ಪ್ರಭುತ್ವವಿದ್ದು, ಆಯಾ ವೃತ್ತಿಯ ಪರಿಣತರು ವೃತ್ತಿಪದಕೋಶ ರಚಿಸಿದರೆ ತಾಂತ್ರಿಕ ದೋಷಗಳಿಲ್ಲದೆ ವಸ್ತುನಿಷ್ಠವಾಗಿ ಸಂಕಲಿಸಬಹುದೆಂದು ನನ್ನ ಅಭಿಪ್ರಾಯ. ಕಾಮಶಾಸ್ತ್ರವನ್ನು ಋಷಿ-ಮುನಿಗಳು ಬರೆಯಲಿಲ್ಲವೆ ? ಎನ್ನುವ ವಾದ ಈ ವಿಷಯ ಕುರಿತಂತೆ ಸಮಂಜಸವಾಗಲಾರದು. ಆ ಋಷಿಗಳ ಬಗ್ಗೆ ನಮಗೆಷ್ಟು ಗೊತ್ತು!

ಡಾ|| ಎಸ್. ಎಸ್. ಅಂಗಡಿಯವರು ೧೯೯೮ರಲ್ಲಿ ಹೊರತಂದ 'ಕುಂಬಾರ ವೃತ್ತಿ ಪದಕೋಶ' ಕುಂಬಾರಿಕೆ ಕುರಿತಂತೆ ಪುಸ್ತಕರೂಪದಲ್ಲಿ ಹೊರಬಂದ ಕನ್ನಡದ ಮೊದಲ ವೃತ್ತಿಪದಕೋಶವೆಂದು ಹೇಳಬಹುದು. ಇದು ೭೦ ಪುಟಗಳ ಕಿರುಪುಸ್ತಕ. ಅದರಲ್ಲಿ ೨೬ ಪುಟಗಳಷ್ಟು ಕುಂಭಕಲೆಯ ಕುರಿತಾದ ಬರಹವಿದೆ. ಚಿತ್ರಗಳನ್ನು ಪ್ರತ್ಯೇಕ ಪುಟಗಳಲ್ಲಿ ಕೊಡಲಾಗಿದೆ. ೪೩ ಪುಟಗಳಲ್ಲಿ ಮಾತ್ರ ಪದಕೋಶವಿದೆ.

ಈ ಪದಕೋಶವನ್ನು ಉಪಕರಣಗಳು, ವಿವಿಧ ನಮೂನೆಯ ಪಾತ್ರೆಗಳು, ಸಾಂಸ್ಕೃತಿಕ ಸಂದರ್ಭದಲ್ಲಿ ಮಾಡುವ ವಸ್ತುಗಳು, ಕ್ರಿಯಾಪದಗಳು, ಸಂಕೀರ್ಣ ಹೀಗೆ ವರ್ಗೀಕರಿಸಲಾಗಿದೆ. ಇದು ಕನ್ನಡದಲ್ಲಿ ಮೊದಲ ಕುಂಬಾರಿಕೆ ವೃತ್ತಿಪದಕೋಶವಾದುದರಿಂದ ಅವರ ಶ್ರಮ ಮೆಚ್ಚುವಂತಹುದು. ಅವರೇ ಹೇಳಿಕೊಂಡಿರುವಂತೆ ಇಲ್ಲಿನ ಕುಂಬಾರಿಕೆ ಪದಗಳು ಬೆಳಗಾವಿ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಸೀಮಿತವಾಗಿರುವುದರಿಂದ ಹೆಚ್ಚಿನದನ್ನು ಅಪೇಕ್ಷಿಸುವುದು ಸಾಧ್ಯವಿಲ್ಲ.

ಬಸವರಾಜ ಕುಂಚೂರು



# ಕುಂಬಾರಿಕೆ - ಶಬ್ದಕೋಶ

ವೃತ್ತಿಪದಕೋಶದ ರಚನೆಯಲ್ಲಿ ಬರಬಹುದಾದ ಮತ್ತೊಂದು ತೊಂದರೆ ಎಂದರೆ ಒಂದು ಪದಕ್ಕೆ ಪರಿಚಿತವಲ್ಲದ ಮತ್ತೊಂದು ಅರ್ಥ ಇರುವುದು. ಉದಾಹರಣೆಗೆ, ಕುಂಬಾರಿಕೆಯಲ್ಲಿ ಅಚ್ಚು ಎನ್ನುವ ಪದ ತೆಗೆದುಕೊಳ್ಳೋಣ. ಅಚ್ಚು ಎಂದರೆ ಸಾಮಾನ್ಯ ಅರ್ಥದಲ್ಲಿ ಪಡಿಯಚ್ಚು, ಮುದ್ರೆ ಎನ್ನುವುದು. ಮಣ್ಣಿನ ವಸ್ತುಗಳ ತಯಾರಿಕೆಯಲ್ಲಿ ಪಡಿಯಚ್ಚು ಕೂಡ ಬಳಕೆಯಲ್ಲಿದೆ. ಪಿಂಗಾಣಿಯ ಅನೇಕ ವಸ್ತುಗಳನ್ನು ಪಡಿಯಚ್ಚಿನಲ್ಲಿ ತಯಾರಿಸಲಾಗುತ್ತಿದೆ. ಇದು ಹೆಚ್ಚು ಜನರಿಗೆ ಸುಲಭವಾಗಿ ತಿಳಿಯುವಂತಹುದು. ಕುಂಬಾರರ ವಲಯದಲ್ಲಿ ಮಾತ್ರ ಪರಿಚಿತವಿರುವ ಇನ್ನೊಂದು ಅರ್ಥವೆಂದರೆ 'ತೀಡೋ ಅಚ್ಚು', 'ತೀಡುವ ಅಚ್ಚು'. ಇದೊಂದು ಮುಚ್ಚಳ ಇದ್ದ ಹಾಗೆ ಇದ್ದು, ತಳ ತಗ್ಗಾಗಿರುತ್ತದೆ. ಇದರಲ್ಲಿ ಕುಂಬಾರಗಿತ್ತಿಯರು ಮಣ್ಣಿನ ಸುರುಳಿಯ ತುಂಡನ್ನು ಜಜ್ಜುವ ಕಲ್ಲಿನಿಂದ ಜಜ್ಜಿ ಅಗಲ ಮಾಡಿ ಅಚ್ಚಿಗೆ ಹಾಕಿ, ಎಡಗೈಯಲ್ಲಿ ಅಚ್ಚನ್ನು ಹಿಡಿದುಕೊಂಡು ಬಲಗೈಯಿಂದ ಸಬಸರಬಿಯಿಂದ (ತೀಡುವ ಅರಿವೆ) ಮಣ್ಣನ್ನು ತೀಡಿ ಎತ್ತರಿಸುತ್ತ ಬೇಕಾದ ಆಕೃತಿಯ ಬೋಸಿಗಳನ್ನು ಮಾಡುವರು ('ಬೋಸಿ' ಎಂದರೆ ಕಂಠವಿಲ್ಲದ ಮಣ್ಣಿನ ಬೋಳು ಆಕೃತಿ). ಬೋಸಿಯನ್ನು ತಿದ್ದಿ ತೀಡಿ, ಅದು ಅರೆ ಒಣಗಿದ ನಂತರ ಕಂಠ ಹಚ್ಚುವರು. ಮಾಡುವ ಮಡಕೆಗನುಗುಣವಾಗಿ ಅಚ್ಚುಗಳ ಗಾತ್ರ ಬೇರೆ ಬೇರೆಯಾಗಿರುತ್ತದೆ. ಹೀಗೆ ಇಂತಹ ಪದಗಳು ಹೆಚ್ಚಿಲ್ಲದಿದ್ದರೂ ಕಡಿಮೆ ಸಂಖ್ಯೆಯಲ್ಲಾದರೂ ಇವೆ. ಈ ತರಹದ ಪದಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ತಿಳಿದುಕೊಳ್ಳಬೇಕೆಂಬ ಕುತೂಹಲ, ತಾಳ್ಮೆ, ವೃತ್ತಿಗೆ ಸಂಬಂಧಿಸಿದವರ ಕೂಡ ಚರ್ಚೆ ಅಗತ್ಯ. ಸಾಮಾನ್ಯ ಸಮೀಕ್ಷೆಯಿಂದ ಇದೆಲ್ಲ ದೊರೆಯಲಾರದು.

ವೃತ್ತಿಪದಕೋಶಗಳಲ್ಲಿ ಕೂಡ ಪ್ರಾದೇಶಿಕ ಭಿನ್ನತೆ ಇರುವುದರಿಂದ, ವ್ಯಾಪಕ ಸಮೀಕ್ಷೆ ಅಗತ್ಯ. ವೃತ್ತಿಪದಕೋಶದ ರಚನೆ, ಸುಮ್ಮನೆ ಮನೆಯಲ್ಲಿ ತಣ್ಣಗೆ ಕುಳಿತು ಅವಸರದಿಂದ ಮಾಡುವ ಕೆಲಸವಲ್ಲ. ಅಧ್ಯಯನ ಮತ್ತು ಅರ್ಥಪೂರ್ಣವಾದ ಸಮೀಕ್ಷೆ, ವೃತ್ತಿಯವರೊಡನೆ ಚರ್ಚೆ, ವಿಷಯ ಸಂಗ್ರಹ, ರೇಖಾಚಿತ್ರಗಳ ತಿಳುವಳಿಕೆ ಬೇಕು. ಆಯಾ ವೃತ್ತಿಮೂಲ ಕುಲದ ಕಲಾವಿದರಿಂದಲೆ, ಚಿತ್ರಗಳನ್ನು ಬರೆಸುವುದು ಉತ್ತಮವೆಂದು ನನ್ನ ಅಭಿಪ್ರಾಯ.

**ಕುಂಬಾರಿಕೆ ಪದಕೋಶದ ಬೆಳವಣಿಗೆ**

ಕುಂಬಾರಿಕೆ ಪದಕೋಶದ ಬೆಳವಣಿಗೆ ತೀರಾ ಇತ್ತೀಚಿನ ಎರಡು ದಶಕಗಳ ಹಿಂದಿನದು. ೧೯೯೪ರಲ್ಲಿ ಹರಿಹರದಲ್ಲಿ ಜರುಗಿದ ಅಖಿಲ ಕರ್ನಾಟಕ ಕುಂಬಾರ ಸಮ್ಮೇಳನದಲ್ಲಿ ಹೊರತಂದ 'ಕುಂಭಕಲೆ' ಸ್ಮರಣ ಸಂಚಿಕೆಯಲ್ಲಿ ನಾನು ಬರೆದ ಲೇಖನ 'ಕುಂಭ ಪದಕೋಶ'ವೆ ಕನ್ನಡದ ಮೊದಲ ಕುಂಬಾರಿಕೆಯ ಶಬ್ದಕೋಶದ ಕುರಿತಾದ ಬರಹವೆಂದು ನನ್ನ ತಿಳುವಳಿಕೆ. ಈ ಕುರಿತು ಬರಹಗಳಿದ್ದಲ್ಲಿ ನನಗೆ ತಿಳಿಸಿದರೆ ಸಂತೋಷ. ಸ್ಮರಣ ಸಂಚಿಕೆಯೊಂದರಲ್ಲಿ, ಅದರಲ್ಲೂ ಒಂದು ಕುಲಕ್ಕೆ ಸಂಬಂಧಿಸಿದ್ದಾಗಿದ್ದರಿಂದ ಆ ಬರಹ ಹೆಚ್ಚಿನ ಜನರ ಗಮನ ಸೆಳೆಯುವುದು ಒತ್ತಟ್ಟಿಗಿರಲಿ, ಕುಂಬಾರರೇ ಅದನ್ನು ಕಣ್ಣೆತ್ತಿ ನೋಡಿರಲಾರರು. ಅದೊಂದು ನೀರಸವಾದ ವಿಷಯ ಬೇರೆ! ಕೇವಲ ೫೦ ಶಬ್ದಗಳನ್ನೊಳಗೊಂಡ ಕಿರುಲೇಖನ. ಏನಿದ್ದರೂ ಅದು ಮೊದಲ ಬರಹವೆಂಬುದು ನನ್ನ ತಿಳುವಳಿಕೆ.

**'ಕುಂಬಾರ ವೃತ್ತಿಪದಕೋಶ'**

ಡಾ|| ಎಸ್. ಎಸ್. ಅಂಗಡಿಯುವರು ೧೯೯೮ರಲ್ಲಿ ಹೊರತಂದ 'ಕುಂಬಾರ ವೃತ್ತಿ ಪದಕೋಶ' ಕುಂಬಾರಿಕೆ ಕುರಿತಂತೆ ಪುಸ್ತಕರೂಪದಲ್ಲಿ ಹೊರಬಂದ ಕನ್ನಡದ ಮೊದಲ ವೃತ್ತಿಪದಕೋಶವೆಂದು ಹೇಳಬಹುದು. ಇದು ೭೦ ಪುಟಗಳ ಕಿರುಪುಸ್ತಕ. ಅದರಲ್ಲಿ ೨೬ ಪುಟಗಳಷ್ಟು ಕುಂಭಕಲೆಯ ಕುರಿತಾದ ಬರಹವಿದೆ. ಚಿತ್ರಗಳನ್ನು ಪ್ರತ್ಯೇಕ ಪುಟಗಳಲ್ಲಿ ಕೊಡಲಾಗಿದೆ. ೩೨ ಪುಟಗಳಲ್ಲಿ ಮಾತ್ರ ಪದಕೋಶವಿದೆ.

ಈ ಪದಕೋಶವನ್ನು ಉಪಕರಣಗಳು, ವಿವಿಧ ನಮೂನೆಯ ಪಾತ್ರೆಗಳು, ಸಾಂಸ್ಕೃತಿಕ ಸಂದರ್ಭದಲ್ಲಿ ಮಾಡುವ ವಸ್ತುಗಳು, ಕ್ರಿಯಾಪದಗಳು, ಸಂಕೀರ್ಣ ಹೀಗೆ ವರ್ಗೀಕರಿಸಲಾಗಿದೆ. ಇದು ಕನ್ನಡದಲ್ಲಿ ಮೊದಲ ಕುಂಬಾರಿಕೆ ವೃತ್ತಿಪದಕೋಶವಾದುದರಿಂದ ಅವರ ಶ್ರಮ ಮೆಚ್ಚುವಂತಹುದು. ಅವರೇ ಹೇಳಿಕೊಂಡಿರುವಂತೆ ಇಲ್ಲಿನ ಕುಂಬಾರಿಕೆ ಪದಗಳು ಬೆಳಗಾವಿ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಸೀಮಿತವಾಗಿ ಇರುವುದರಿಂದ ಹೆಚ್ಚಿನದನ್ನು ಅಪೇಕ್ಷಿಸುವುದು ಸಾಧ್ಯವಿಲ್ಲ.

**'ಗ್ರಾಮೀಣ ವೃತ್ತಿಗಳು'**

ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಇವರಿಂದ ೨೦೦೦ದಲ್ಲಿ ಪ್ರಕಟವಾದ ಈ ಪುಸ್ತಕದಲ್ಲಿ ಆರು ಗ್ರಾಮೀಣ ವೃತ್ತಿಗಳ ಕುರಿತು ಬೇರೆ ಬೇರೆ ಲೇಖಕರ ಲೇಖನಗಳಿವೆ. ಅದರಲ್ಲಿ ಕುಂಬಾರಿಕೆಯು ಒಂದು. ಡಾ|| ದುಗ್ಗಪ್ಪ ಕಜೆಕಾರರು ಬರೆದ 'ಕುಂಬಾರಿಕೆ : ದಕ್ಷಿಣ ಕನ್ನಡದ ವೃತ್ತಿ'ಯಲ್ಲಿನ ಲೇಖನದಲ್ಲಿ ಕುಂಬಾರಿಕೆಯ ಸುಮಾರು ೩೦ ತುಳು ಶಬ್ದಗಳಿಗೆ



ಕನ್ನಡದಲ್ಲಿ ಅರ್ಥವಿವರಣೆ ನೀಡಿದ್ದಾರೆ. ಭಾಷಾಧ್ಯಯನಕಾರರಿಗೆ ಇದೊಂದು ಉಪಯುಕ್ತ ಮಾಹಿತಿ ಎಂದು ಹೇಳಬಹುದು.

**'ಗ್ರಾಮೀಣ ಗೃಹ ವಸ್ತುಗಳು'**

ಡಾ|| ಪಿ. ಆರ್. ತಿಪ್ಪೇಸ್ವಾಮಿಯವರು ಬರೆದ ಈ ಪುಟಾಣಿ ಪುಸ್ತಕ, ಮಕ್ಕಳಿಂದ ಮುದುಕರವರೆಗೆ ಓದಬಹುದಾದ ಸೊಗಸಾದ ಪುಸ್ತಕ. ಗ್ರಾಮೀಣ ಗೃಹ ವಸ್ತುಗಳ ಕುರಿತು ಅನೇಕ ರೋಚಕ ವಿಷಯಗಳು ಇದರಲ್ಲಿ ಅಡಕವಾಗಿವೆ. ಶ್ಯಾವಿಗಿ ಮಣೆ, ಒರಳು, ಒನಕೆಯಿಂದ ಮೊದಲು ಮಾಡಿ ಗೃಹೋಪಯೋಗಿ ಮಡಕೆಗಳಾದ ಕೊಡ, ಬಿಂದಿಗೆ, ಬಾನಿ, ಹರಿವೆ, ಮೊದಲಾದ ಮಣ್ಣಿನ ವಸ್ತುಗಳ ನಿರೂಪಣೆಯನ್ನು ಗಾದೆ, ಕವಿಸೂಕ್ತಿಗಳ ಮೂಲಕ ವಿವರಿಸಿರುವ ಅವರ ಶೈಲಿ ಮನಸೆಳೆಯುತ್ತದೆ. ವಸ್ತು ವಿಷಯ ವಿವರಣೆಯ ಈ ಕಿರುಪುಸ್ತಕ ಕುಂಭಕಲೆಯ ಮೇಲೆ ಬೆಳಕು ಚೆಲ್ಲುತ್ತದೆ. ನೇರವಾಗಿ ಕುಂಭಪದ ಕೋಶದ ಅರ್ಥಗಳಿಲ್ಲದಿದ್ದರೂ ಹಲವಾರು ಮಡಕೆಗಳ ವಿವರಣೆ, ಚಿತ್ರ ಸಮೇತ ಇದೆ. ವಾಡೆ, ಅಳಗ, ಹಚ್ಚೆ ಕುಡಿಕೆ, ತುಪ್ಪದ ಕುಡಿಕೆ, ಉತ್ತರ ಕನ್ನಡ ಜಿಲ್ಲೆಯಲ್ಲಿ ಕಾಕಂಬಿಯನ್ನು ತುಂಬಿಡುವ ಮಣ್ಣಿನ ಕೊಡ, ಬಳ್ಳಾರಿ ಪ್ರದೇಶದಲ್ಲಿ ದೊಡ್ಡಾಟದ ಸಮಯದಲ್ಲಿ ರಾತ್ರಿ ಬಳಸುತ್ತಿದ್ದ ಮಣ್ಣಿನ ದೀಪ – ಹೀಗೆ ಹಲವಾರು ಮಡಕೆಗಳ ಪೂರ್ಣ ವಿವರ ಇದರಲ್ಲಿದೆ. ಸಮೀಕ್ಷೆ ಮಾಡಿ ಬರೆದ ವಸ್ತು ವಿಷಯ ವಿಜ್ಞಾನದ ಕಿರುಪುಸ್ತಕವಿದು.

ಲೇಖಕರು ಗಡಿಗೆ, ಮಡಕೆಯ ಕುರಿತು ಹೇಳಿರುವ ವ್ಯತ್ಯಾಸವನ್ನು ಮಾತ್ರ ಒಪ್ಪಲು ಸಾಧ್ಯವಿಲ್ಲ. ಬಹುಶಃ ಆ ಕುರಿತಂತೆ ಹೆಚ್ಚು ಆಳವಾಗಿ ವಿಚಾರ ಮಾಡಲು ಅವರು ಹೋದಂತಿಲ್ಲ. ಗಡಿಗೆ, ಮಡಕೆ, ಸ್ವಾರಿ ಈ ಮೂರು ಸಮಾನಾರ್ಥ ಪದಗಳು. ಈ ಕುರಿತು ಮುಂದೆ ವಿವರಿಸಲಾಗಿದೆ.

**ಶಂಕರ ವ್ಹಿ. ಕುಂಬಾರವರ ಎಂ.ಫಿಲ್. ಪ್ರಬಂಧ**

ಈ ಪ್ರಬಂಧದಲ್ಲಿ ಬೀದರ್ ಜಿಲ್ಲೆಯಲ್ಲಿನ ಗೊಂಬಿಕುಂಬಾರ, ಲಾಡಕುಂಬಾರ, ಲಿಂಗಾಯತಕುಂಬಾರರ ಬದುಕಿನ ವಿವರಗಳನ್ನು ನೀಡುವದರ ಜೊತೆಗೆ ಆ ಜಿಲ್ಲೆಯಲ್ಲಿನ ಕುಂಬಾರಿಕೆಯ ಪದಗಳಿಗೆ, ವಿವರಣಾತ್ಮಕ ಮಾಹಿತಿಯನ್ನು ಇಡೀ ಒಂದು ಅಧ್ಯಾಯದಲ್ಲಿ ವಿವರಿಸಿದ್ದಾರೆ. ಭಾಷಾ ವಿಜ್ಞಾನಿಗಳಿಗೆ, ಜನಪದ ತಜ್ಞರಿಗೆ, ಅತ್ಯುಪಯುಕ್ತ ಮಾಹಿತಿ ಇಲ್ಲಿ ದೊರೆಯುತ್ತದೆ. ಇಲ್ಲಿನ ಶಬ್ದಗಳನ್ನು ಗಮನಿಸಿದಾಗ ಪ್ರಾದೇಶಿಕ ಭಿನ್ನತೆಯ ಅರಿವಾಗುತ್ತದೆ.

**'ಕುಂಬಾರ ಜನಾಂಗ'**

೨೦೦೩ರಲ್ಲಿ ನಾನೇ ಬರೆದು ಪ್ರಕಟಿಸಿದ ಕುಂಬಾರ ಜನಾಂಗ ೩೭೬ ಪುಟಗಳ ಪುಸ್ತಕ. ಎರಡು ಮುದ್ರಣಗಳನ್ನು ಕಂಡು ಎರಡು ಪ್ರಶಸ್ತಿಗಳನ್ನು ಪಡೆದ ಕೃತಿ. ಕುಂಬಾರ ಜನಾಂಗದ ಕುರಿತಾಗಿ ಕನ್ನಡದ ಮೊದಲ ತಕ್ಕಮಟ್ಟಿನ ಸಮಗ್ರ ಗ್ರಂಥವೂ ಕೂಡ. ಕುಂಭ ಪದಕೋಶದ ಕುರಿತು ಪ್ರತ್ಯೇಕ ಅಧ್ಯಾಯವೇ ಇದರಲ್ಲಿದೆ. ಕುಂಬಾರಿಕೆಯ ಸುಮಾರು ೨೦೦ ಶಬ್ದಗಳಿಗೆ ಅರ್ಥವನ್ನು ಕೊಡಲಾಗಿದ್ದು, ಪ್ರತ್ಯೇಕವಾಗಿ ರೇಖಾಚಿತ್ರಗಳನ್ನು ಕೊಡಲಾಗಿದೆ. ಸಾಂಸ್ಕೃತಿಕ ಸಂದರ್ಭದ ಮಡಕೆಗಳು ಮತ್ತು ಮಣ್ಣಿನ ಮೂರುತಿಗಳ ಬಗೆಗೆ ಚಿತ್ರ ಸಮೇತವಾದ ವಿವರಣೆಗಳನ್ನೊಳಗೊಂಡ ಅಧ್ಯಾಯ ಕೂಡ ಇದೆ. ಕುಂಬಾರಿಕೆ ವೃತ್ತಿಪದಕೋಶದ ಕುರಿತ ಹೆಚ್ಚು ಶಬ್ದಾರ್ಥಗಳನ್ನೊಳಗೊಂಡ ಈ

ಪುಸ್ತಕ ವಿದ್ವಾಂಸರ ಗಮನ ಸೆಳೆಯಲು ಕಾರಣವಾಯಿತೆಂದು ಹೇಳಲು ಬಯಸುತ್ತೇನೆ.

**'ಕುಂಭಕಲೆ ಮಣ್ಣಿನಲ್ಲಿ ಅರಳಿದ ಕಾವ್ಯ'**

ಇದು ೨೦೦೪ರಲ್ಲಿ ತುಮಕೂರು ಜಿಲ್ಲಾ ಕುಂಬಾರ ಸಂಘದಿಂದ ಪ್ರಕಟವಾದ ನಾನು ಬರೆದ ಸುಮಾರು ೧೯೫ ಪುಟಗಳ ಕುಂಭಕಲೆಯನ್ನು ಮಾತ್ರ ಉದ್ದೇಶವಾಗಿಟ್ಟುಕೊಂಡು ಬರೆದ ಕೃತಿ. ಕುಂಬಾರ ಜನಾಂಗದ ಪುಸ್ತಕದಲ್ಲಿನ ಹಲವಾರು ವಿಷಯಗಳನ್ನು ವಿಸ್ತರಿಸಿ ಬರೆಯಲಾಗಿದೆ. ರಾಕುಪಾಟರಿ, ಸ್ಟುಡಿಯೋಪಾಟರಿ, ಗ್ಲೇಸಿಂಗ್, ಮಕ್ಕಳೂ ಕಲಿಯ ಬಹುದಾದ ಮಣ್ಣಿನ ಕಲೆ ಹೀಗೆ ಹಲವಾರು ಹೊಸ ಅಧ್ಯಾಯಗಳು ಇದರಲ್ಲಿ ಸೇರಿವೆ. ಇದರಲ್ಲಿ ನೇರವಾಗಿ ಕುಂಬಾರಿಕೆಯ ಪದಗಳಿಗೆ ಅರ್ಥ ಕೊಡದಿದ್ದರೂ ಬಗೆ ಬಗೆಯ ಮಡಕೆಗಳ ಕುರಿತು ಚಿತ್ರದೊಂದಿಗೆ ವಿವರಣೆ ಕೊಡಲಾಗಿದೆ.

**'ಕುಂಬಾರನ ಹಾಡುಗಳು'**

ಇದು ಹರಿಹರದ ಹಿ. ಗೂ. ದುಂಡ್ಯೆಪ್ಪ ಕುಂಬಾರವರ 'ಕುಂಬಾರ'ನ ಕುರಿತಾದ ಮೊದಲ ಪದ್ಯ ಸಂಕಲನ. ಸಹಜವಾಗಿಯೇ ಇದರಲ್ಲಿನ ಎಲ್ಲಾ ಕವನಗಳು ಸಾಕಷ್ಟು ಕುಂಬಾರಿಕೆ ಪದಗಳನ್ನು ಒಳಗೊಂಡಿದೆ.

**'ಕುಂಬಾರ ದರ್ಶನ'**

೨೦೦೪ರಲ್ಲಿ ರಾಮಗಿರಿ ಕರಿಸಿದ್ದಪ್ಪ ಕುಂಬಾರ ಅವರು ಬರೆದು ಪ್ರಕಟಿಸಿದ ಸುಮಾರು ೧೫೦ ಪುಟಗಳ ಪುಸ್ತಕ. ಲೇಖಕರೇ ಹೇಳಿಕೊಂಡಿರುವಂತೆ ''ಕಾವ್ಯದ ಮೊರೆ ಹೊಕ್ಕು ಕಾವ್ಯಗಳಲ್ಲಿ ಬಳಸಿರಬಹುದಾದ ಕುಂಬಾರರ ನೆಲೆಗಳನ್ನು ಅರಿತುಕೊಂಡು'' ಬರೆದ ಕೃತಿ. ಕುಂಬಾರಿಕೆ ಶಬ್ದಕೋಶದ ಕುರಿತಂತೆ ಪ್ರಸ್ತಾಪವಿಲ್ಲ. ದಿನನಿತ್ಯ ಬಳಸುವ ಸುಮಾರು ೧೮ ಕುಂಬಾರಿಕೆಯ ಶಬ್ದಗಳಿಗೆ ಮಾತ್ರ ಅರ್ಥವನ್ನು ಕೊಡಲಾಗಿದೆ.

**'ಕುಂಬಾರಿಕೆ ಶಬ್ದಕೋಶ'**

ಪ್ರಕಟಣೆಗೆ ಸಜ್ಜಾಗಿರುವ ನಾನು ಬರೆದಿರುವ ಈ ಶಬ್ದಕೋಶ ಐದು ಅಧ್ಯಾಯಗಳನ್ನೊಳಗೊಂಡ ವಿವರಣಾತ್ಮಕ ಸಚಿತ್ರ - ಕುಂಭ ಪದಕೋಶ. ಕನ್ನಡ - ಕನ್ನಡವಲ್ಲದೆ, ಇಂಗ್ಲಿಷ್ - ಇಂಗ್ಲಿಷ್ - ಕನ್ನಡ ಹಾಗೂ ಇತರೆ ಭಾಷೆಗಳಾದ ತೆಲುಗು, ತುಳು, ಮರಾಠಿ ಭಾಷೆಯ ಕುಂಬಾರಿಕೆಯ ಕೆಲವು ಮುಖ್ಯ ಪದಗಳ ಅರ್ಥ ಕೊಡಲಾಗಿದೆ. ಅನುಬಂಧದಲ್ಲಿ ಸಾಂಸ್ಕೃತಿಕ ಮಣ್ಣಿನ ಮೂರುತಿಗಳ ವಿವರ, ಪ್ರಾಚೀನ ಕಾಲದ ಕುಂಭಗಳ ಪರಿಚಯ, ಪವಿತ್ರ ಮಡಕೆಗಳ ಪಟ್ಟಿ, ಕುಂಭಕಲೆ ಕುರಿತಂತೆ ಹಲವಾರು ಉಪಯುಕ್ತ ಮಾಹಿತಿಗಳ ವಿವರ, ಕುಂಬಾರನ ಕುರಿತಾದ ಗಾದೆಗಳು ಹಾಗೂ ಕುಂಭಕಲೆಗೆ ಪೂರಕವಾದ ಹಲವಾರು ವಿಷಯಗಳ ವಿವರಗಳನ್ನು ಒಳಗೊಂಡಿದೆ.

ಕನ್ನಡ - ಕನ್ನಡ ಶಬ್ದಕೋಶದ ಭಾಗದಲ್ಲಿ ಈಗಾಗಲೇ ಪ್ರಕಟವಾಗಿರುವ ಕುಂಭಪದ ಕೋಶದ ಬರಹಗಳನ್ನು ಗಮನದಲ್ಲಿಟ್ಟುಕೊಂಡು ಪ್ರಾದೇಶಿಕ ಭಿನ್ನತೆಯನ್ನು ಗುರುತಿಸಿ, ಶಬ್ದಗಳನ್ನು ಅಕಾರಾದಿಯಾಗಿ ವಿಂಗಡಿಸಿ ಅವುಗಳನ್ನು ಅರ್ಥೈಸಲಾಗಿದೆ. ನಾಮಪದ, ಕ್ರಿಯಾಪದಗಳನ್ನು ಸೂಚಿಸಲಾಗಿದೆ. ಸಂದರ್ಭಾನುಸಾರ, ಕವಿಸೂಕ್ತಿ, ವಚನ, ಗಾದೆಯನ್ನು ಕೊಟ್ಟು ಚಿತ್ರಗಳೊಂದಿಗೆ ಅರ್ಥವನ್ನು ವಿವರಿಸಿರುವುದರಿಂದ ಓದುಗರಿಗೆ ಇದು



ಹಿಡಿಸಬಹುದೆಂದು ನನ್ನ ವಿಶ್ವಾಸ. ಚಿತ್ರಗಳೇ ಇಲ್ಲಿ ಅರ್ಥವನ್ನು ಬಿಚ್ಚಿಡುತ್ತವೆ. ಅದೇ ಈ ಶಬ್ದಕೋಶದ ವೈಶಿಷ್ಟ್ಯ ಕೂಡ. ಚಿತ್ರಗಳು ವೃತ್ತಿಪದಕೋಶದ ಕೈಗನ್ನಡಿ. ಮಣ್ಣಿನ ಕೊಡವನ್ನಾಗಲಿ, ಬಿಂದಿಗೆಯನ್ನಾಗಲಿ ಅಥವಾ ಗಡಿಗೆಯನ್ನಾಗಲಿ ಶಬ್ದಗಳಿಂದ ಎಷ್ಟು ವರ್ಣಿಸಿದರೂ ಚಿತ್ರ ನೋಡಿದಾಗ ಥಟ್ಟನೆ ಆಗುವ ಅನುಭವ ಆಗಲಾರದು. ಗಡಿಗೆ ದುಂಡಗೂ ಅಲ್ಲ, ಗೋಲವೂ ಅಲ್ಲ, ಚೌಕವೂ ಅಲ್ಲ, ಆಯತವೂ ಅಲ್ಲ, ಅದೊಂದು ವಿಶಿಷ್ಟ ಆಕೃತಿ. ಚಿತ್ರ ಮಾತ್ರ ಅದನ್ನು ಸ್ಪಷ್ಟಗೊಳಿಸಬಲ್ಲದು. ಅದು ಶಬ್ದಕ್ಕೆ ಮೀರಿದ್ದು. ವೃತ್ತಿ ಪದಕೋಶಕ್ಕೆ ಬೇಕಾದ ಇನ್ನೊಂದು ಮುಖ್ಯ ವಿಷಯವೆಂದರೆ, ವಸ್ತು ವಿಷಯ ಜ್ಞಾನ. ಈ ದಿಶೆಯಲ್ಲಿ ನಾನು ನ್ಯಾಯ ಒದಗಿಸಿರುವೆನೆಂದು ನನ್ನ ಭಾವನೆ.

ಕುಂಬಾರಿಕೆಯ ಪದಗಳನ್ನು ಸ್ಥೂಲವಾಗಿ ಎರಡು ವಿಧವಾಗಿ ವಿಂಗಡಿಸಬಹುದು :

೧. ಉತ್ಪಾದನ ಕ್ರಿಯೆಗೆ ಸಂಬಂಧಿಸಿದ ಪದಗಳು

೨. ಉತ್ಪಾದಿತ ವಸ್ತುಗಳ ಪದಗಳು

**ಉತ್ಪಾದನ ಕ್ರಿಯೆಗೆ ಸಂಬಂಧಿಸಿದವುಗಳು**

ಮಡಕೆ ಗೇಯುವ ತಿಗುರಿ, ಮಡಕೆ ತಟ್ಟುವ ಕಲ್ಲು ಸೊಳ, ಮಡಕೆ ಸುಡುವ ಆವಿಗೆ ಮುಂತಾದ ಸಾಧನ ಸಲಕರಣೆಗಳು, ಈ ಪದಗಳು ಕುಂಬಾರರ ವಲಯದಲ್ಲಿ ಮಾತ್ರ ಹೆಚ್ಚು ಪರಿಚಿತವಾದವುಗಳು.

**ಉತ್ಪಾದಿತ ವಸ್ತುಗಳ ಪದಗಳು**

ಮೇಲಿನದಕ್ಕಿಂತ ಇದರ ವಲಯ ದೊಡ್ಡದು. ಉತ್ಪಾದಿತ ವಸ್ತುಗಳು ಜನರ ಬಳಕೆಗೆ ಬೇಕಾಗಿರುವುದರಿಂದ ಸಹಜವಾಗಿಯೆ, ಈ ಪದಗಳ ಚಲಾವಣೆಯ ವ್ಯಾಪ್ತಿಯು ಹೆಚ್ಚು. ಇದರಲ್ಲಿ ಎಲ್ಲಾ ಬಗೆಯ ಕುಂಭ ವಸ್ತುಗಳು ಒಳಗೊಂಡಿವೆ. ಉದಾಹರಣೆಗೆ, ಕೊಡ, ಬಿಂದಿಗೆ, ಹರಿವೆ, ಕುಡಿಕೆ, ಪಣತಿ ಇತ್ಯಾದಿ.

**ಮಡಕೆಗಳ ಬಳಕೆಗನುಗುಣವಾದ ವರ್ಗೀಕರಣ**

ಇದನ್ನು ಮುಖ್ಯವಾಗಿ ನಾಲ್ಕು ವಿಧವಾಗಿ ವಿಂಗಡಿಸಬಹುದು :

೧. ಘನ ಪದಾರ್ಥಗಳನ್ನು ತುಂಬಿಡುವ ಕುಂಭವಸ್ತುಗಳು

೨. ದ್ರವ ಪದಾರ್ಥಗಳನ್ನು ತುಂಬಿಡುವ ಕುಂಭವಸ್ತುಗಳು

೩. ಆಹಾರ ಬೇಯಿಸುವ ಪಾತ್ರೆಗಳು

೪. ಸಾಂಸ್ಕೃತಿಕ ಸಂದರ್ಭದ ಮಡಕೆಗಳು

**ಘನ ಪದಾರ್ಥಗಳನ್ನು ತುಂಬಿಡುವ ಕುಂಭವಸ್ತುಗಳು**

ದವಸ-ಧಾನ್ಯಗಳನ್ನು ತುಂಬಿಡುವ ವಾಡೆ, ಅಡುಗೆ ಮನೆಯಲ್ಲಿ ನಿತ್ಯದ ಉಪಯೋಗಕ್ಕೆ ದವಸ-ಧಾನ್ಯ ತುಂಬಿಡುವ ಅಡಕಲು ಗಡಿಗೆ, ಉಪ್ಪಿನ ಪಳ್ಳಿ, ಬೆಲ್ಲದ ಬಾನಿ, ಇತ್ಯಾದಿ.

**ದ್ರವ ಪದಾರ್ಥಗಳನ್ನು ತುಂಬಿಡುವ ಕುಂಭ ವಸ್ತುಗಳು**

ನೀರು ತುಂಬಿಡುವ ಹರಿವೆ, ನೀರು ಕಾಯಿಸುವ ಪಚೇಲಿ, ನೀರು ತರುವ ಕೊಡ, ಬಿಂದಿಗೆ, ಹಾಲಿನ ಮಗಿ, ತುಪ್ಪದ ಕುಡಿಕೆ, ಎಣ್ಣೆಯ ಕುಡಿಕೆ, ತತ್ರಾಣಿ ಇತ್ಯಾದಿ ಈ ವರ್ಗದಲ್ಲಿ ಸೇರಲ್ಪಡುತ್ತವೆ.

**ಆಹಾರ ಬೇಯಿಸುವ ಪಾತ್ರೆಗಳು**

ಅಂಬ್ಲಿ ಗಡಿಗೆ, ಬಾನದ ಗಡಿಗೆ, ಮುದ್ದಿ ಸ್ವಾರಿ, ಪಲ್ಯ ಚಟಿಗೆ, ರೊಟ್ಟಿ ಹಂಚು, ಪಡ್ಡಿನ ಹಂಚು ಮೊದಲಾದವುಗಳು ಈ ವರ್ಗದಲ್ಲಿ ಸೇರಲ್ಪಡುತ್ತವೆ.

ಕೆಲವು ಮಣ್ಣಿನ ಪಾತ್ರೆಗಳು ಹಲವು ಬಗೆಯ ಗೃಹೋಪಯೋಗಿ ಕೆಲಸಕ್ಕೆ ಬಳಸಲ್ಪಡುತ್ತವೆ. ಉದಾಹರಣೆಗೆ, ಹರಿವೆ ನೀರನ್ನು ತುಂಬಿಡಲು ಬಳಸುವರಲ್ಲದೆ ದವಸ-ಧಾನ್ಯಗಳನ್ನು ಕೂಡ ತುಂಬಿಡಲು ಬಳಸುವರು. ಬಾನಿಯನ್ನು ದನಕರುಗಳಿಗೆ ನೀರು ಕುಡಿಯಲು ಹಾಗೂ ಚಿಕ್ಕ ಬಾನಿಗಳನ್ನು ಮುಸುರಿ ಬಾನಿಯಾಗಿ, ಅಡುಗೆಮನೆಯಲ್ಲಿ ಉಪಯೋಗಿಸುವರು. ಅನೇಕ ಕಡೆ ಬೆಲ್ಲ ಹಾಕಿಡಲು, ಧಾನ್ಯಗಳನ್ನು ತುಂಬಿಡಲು ಕೂಡ ಬಾನಿಯನ್ನು ಬಳಸುವರು. ಗಡಿಗೆಯನ್ನು ಅದರ ಉಪಯೋಗಕ್ಕನುಗುಣವಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ಉದಾಹರಣೆಗೆ, ಅನ್ನದ ಮಡಕೆ, ನೀರಿನ ಗಡಿಗೆ, ಸಾರಿನ ಗಡಿಗೆ, ಪಲ್ಯ ಚಟಿಗೆ, ಮಜ್ಜಿಗೆ ಸ್ವಾರೆ, ಮೊಸರಿನ ಚಟಿಗಿ ಇತ್ಯಾದಿ.

**ಸಾಂಸ್ಕೃತಿಕ ಸಂದರ್ಭದ ಮಡಕೆಗಳು**

ಇವುಗಳನ್ನು ಪವಿತ್ರ ಮಡಕೆಗಳೆಂದು ಹೆಸರಿಸಬಹುದು. ಮದುವೆಯ ಸಂದರ್ಭದ ಐರಾಣಿ ಗಡಿಗೆ, ಕೇಲು, ಗುಗ್ಗಳ ಕೊಡ, ಶುಭಕಾರ್ಯಗಳಲ್ಲಿ ಸ್ಥಾಪಿಸುವ ಮಂಗಳಘಟ, ಗೌರಿ ಹಬ್ಬದ ಗೌರಿ ಗಡಿಗೆ, ಊರದೇವರ ಜಾತ್ರೆ – ಉತ್ಸವದ ಸಂದರ್ಭದಲ್ಲಿ ಕುಂಬಾರನ ಮನೆಯಿಂದ ಒಯ್ಯುವ ಗಡಿಗೆ, ಸ್ವಾಮಿಗಳನ್ನು, ಗಣ್ಯ ವ್ಯಕ್ತಿಗಳನ್ನು ಸ್ವಾಗತಿಸುವ ಸಂದರ್ಭದಲ್ಲಿ ಉಪಯೋಗಿಸುವ ಕುಂಭ, ಹೀಗೆ ಹಲವಾರು ಪವಿತ್ರ ಗಡಿಗೆಗಳಿವೆ.

ಇದಲ್ಲದೆ ಸಾಂಸ್ಕೃತಿಕ ಸಂದರ್ಭದ ಮಣ್ಣಿನ ಮೂರುತಿಗಳು ಇವೆ. ಅವುಗಳಲ್ಲಿ ಮುಖ್ಯವಾಗಿ ಗಣೇಶ, ಮಣ್ಣೆತ್ತು, ಜೋಕುಮಾರ, ಗುಳ್ಳವ್ವ, ಗೊಗ್ಗವ್ವ ಇತ್ಯಾದಿ.

ಮೇಲಿನ ವರ್ಗೀಕರಣವಲ್ಲದೆ ವರ್ಣಕ್ಕನು ಗುಣವಾಗಿ ಕಪ್ಪು, ಕೆಂಪು ಮತ್ತು ಬೂದು ಬಣ್ಣದ ಮಡಕೆಗಳೆಂದು ಕೂಡ ವಿಂಗಡಿಸಬಹುದಾಗಿದೆ. ಪ್ರಾಚ್ಯ ಶಾಸ್ತ್ರಜ್ಞರು ಮಡಕೆಗಳ ಬಣ್ಣದ ವರ್ಗೀಕರಣಕ್ಕೆ ಹೆಚ್ಚಿನ ಮಹತ್ವ ಕೊಟ್ಟಿರುವುದು ತಿಳಿದುಬರುತ್ತದೆ. ಆಕೃತಿಗೆ ಅನುಗುಣವಾಗಿ ದುಂಡು ಗಡಿಗೆ, ಮೊಟ್ಟೆ ಆಕೃತಿಯ ಗಡಿಗೆ, ಮೊಗ್ಗಿನಾಕೃತಿಯ ಗಡಿಗೆ ಎಂತಲೂ ವಿಂಗಡಿಸಬಹುದಾಗಿದೆ. ಬಾಯಿ, ಕಂಠಕ್ಕನುಸಾರ ವಾಗಿ ಕೂಡ ವರ್ಗೀಕರಣ ಇದೆ. ಇವು ಹೆಚ್ಚಾಗಿ ಪ್ರಯೋಗದಲ್ಲಿಲ್ಲ. ವೃತ್ತಿ ಪದಕೋಶಗಳಲ್ಲಿ ಸಾಮಾನ್ಯವಾಗಿ ವರ್ಗೀಕರಣ ಮಾಡುವ ರೂಢಿ ಬೆಳೆದುಬಂದಿದೆಯಾದರೂ, ನಾನು ಆ ರೀತಿ ಈ ಶಬ್ದಕೋಶದಲ್ಲಿ ವರ್ಗೀಕರಣ ಮಾಡಿಲ್ಲ. ಅದಕ್ಕೆ ಮುಖ್ಯಕಾರಣವೆಂದರೆ, ಸಾಮಾನ್ಯ ನಿಘಂಟಿನ ಸ್ವರೂಪ ಉಳಿಯಲೆಂಬುದು. ಕುಂಬಾರಿಕೆಯ ಪದಗಳ ಸಂಖ್ಯೆ ಕೂಡ ಕಡಿಮೆ, ಎಲ್ಲಾ ಸೇರಿದರೂ ಐದುನೂರರ ಗಡಿ ಕೂಡ ದಾಟಲಾರದು. ಹೀಗಾಗಿ ವರ್ಗೀಕರಣದ ಅಗತ್ಯವಿಲ್ಲವೆಂಬುದು ನನ್ನ ಭಾವನೆ. ವರ್ಗೀಕರಣ ಮಾಡದಿರುವುದರಿಂದ ಈ ಪದಕೋಶಕ್ಕೆ ಯಾವುದೇ ಬಾಧೆಯಾಗಿಲ್ಲ. ವಿಸ್ತಾರವಾದ ಪೀಠಿಕೆ ವೃತ್ತಿಪದಕೋಶಗಳಿಗೆ ಬಹಳ ಅಗತ್ಯ. ಅದನ್ನೇ ನಾನು ಇಲ್ಲಿ ಅನುಸರಿಸಿರುವೆ.



**ಗಡಿಗೆ, ಮಡಕೆ, ಸೋರೆ**

ಅನೇಕರು ಗಡಿಗೆ, ಮಡಕೆ, ಸ್ವಾರಿಗೆ ವ್ಯತ್ಯಾಸವನ್ನು ಕಲ್ಪಿಸಿರುವುದುಂಟು. ಗಡಿಗೆ ಬಾಯಿ ದೊಡ್ಡದು, ಮಡಕೆ ಬಾಯಿ ಸಣ್ಣದು ಎಂದು ಕೆಲವರ ಅಭಿಪ್ರಾಯ. ಇದರಲ್ಲಿ ಯಾವುದೇ ಹುರುಳಿಲ್ಲ. ಈ ಮೂರೂ ಸಮಾನಾರ್ಥ ಪದಗಳು. ಗಡಿಗೆ, ಮಡಕೆ ಇವೆರಡೂ ಪದಗಳು ಕರ್ನಾಟಕದಾದ್ಯಂತ ಪರಿಚಿತ ಪದಗಳು. ಆದರೆ, ಗಡಿಗೆ ಎನ್ನುವುದು ಉತ್ತರ ಕರ್ನಾಟಕ, ಹೈದರಾಬಾದ್ ಕರ್ನಾಟಕದಲ್ಲಿ ಹೆಚ್ಚು ಬಳಕೆಯಲ್ಲಿದ್ದರೆ, ಮಡಕೆ ಪದ ದಕ್ಷಿಣ ಕರ್ನಾಟಕ ಹಾಗೂ ಮಧ್ಯ ಕರ್ನಾಟಕದಲ್ಲಿ ಹೆಚ್ಚು ಬಳಕೆಯಲ್ಲಿರುವುದು ತಿಳಿದುಬರುತ್ತದೆ. ಸೋರೆ, ಸ್ವಾರಿ ಎನ್ನುವ ಪದ ಉತ್ತರ ಕರ್ನಾಟಕ, ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ಹಾವೇರಿ, ಗದಗ ಪ್ರದೇಶದಲ್ಲಿ ಬಳಕೆಯಲ್ಲಿದೆ.

ಗಡಿಗೆ, ಮಡಕೆ, ಸೋರೆ ಪದಗಳಲ್ಲದೆ, ಕುಂಭ, ಭಾಂಡೆ, ಪಾತ್ರೆ ಎನ್ನುವ ಹೆಸರುಗಳು ಕೂಡ ಬಳಕೆಯಲ್ಲಿವೆ. ಕುಂಭ ಎನ್ನುವುದು ಪವಿತ್ರ ಮಡಕೆಯಾಗಿ ಹೆಚ್ಚಿನ ಚಲಾವಣೆ ಯಲ್ಲಿದೆ. ಕುಂಬಾರರ ಮನೆಗೆ 'ಕುಂಭ ಕೊಡ್ರಿ' ಎಂದು ಕೇಳಲು ಜನರು ಬರುವುದು ಕೂಡ ಉಂಟು. ಪಾತ್ರೆ ಎನ್ನುವುದು ಕೂಡ ಮಣ್ಣಿನ ಮಡಕೆಗಳಿಗೆ ಪರ್ಯಾಯವಾಗಿ ಚಲಾವಣೆಯಲ್ಲಿದೆಯಾದರೂ, ಬಹಳ ಕಡಿಮೆ ಎಂದು ಹೇಳಬಹುದು.

ಗಡಿಗೆ ಮತ್ತು ಮಡಕೆಗಳನ್ನು ಪ್ರಾಚೀನದಿಂದ ಅರ್ವಾಚೀನದವರೆಗಿನ ಅನೇಕ ಕವಿಗಳು, ವಚನಕಾರರು, ದಾಸರು, ತತ್ವಪದಕಾರರು ತಮ್ಮ ಸಾಹಿತ್ಯದಲ್ಲಿ ವಿಪುಲವಾಗಿ ಬಳಸಿದ್ದಾರೆ. ಮಡಕೆ ಶಬ್ದ ಗಡಿಗೆಗಿಂತ ಹೆಚ್ಚು ಗ್ರಂಥಸ್ಥವಾಗಿರುವುದು ಕಂಡುಬರುತ್ತದೆ. ಘಟ ಮತ್ತು ಕುಂಭ ಈ ಪದಗಳು ಕೂಡ ಹೆಚ್ಚು ಗ್ರಂಥಸ್ಥವಾಗಿರುವುದು ಕಂಡುಬರುತ್ತದೆ. ಸೋರೆ ಹೆಚ್ಚು ಗ್ರಂಥಸ್ಥವಾಗಿಲ್ಲ. ಇವು ಗಮನಿಸಬೇಕಾದ ಅಂಶಗಳು.

''ಅಡಕಿಲ ಮಡಕೆಗಳ ಸಯ್ತಿಡಲರುವುವೆ ನಾಯ್ಗಳೊಡೆವುವಲ್ಲವೆ?'' (ನಯಸೇನ)
''ಮಡಕೆ ಮಾಡುವೆಡೆ ಮಣ್ಣೆ ಮೊದಲು'' (ಬಸವಣ್ಣ)
''ಮಡಕೆಯೊಳು ಕುಲಿತಾಡಾರು ಜೀವಿಪರು?'' (ರಾಘವಾಂಕ)
''ಒಡಕು ಮಡಕೆಯು ಹೊಲ್ಲ ಕುಡುಕ ನೆರೆಹೊಳು ಹೊಲ್ಲ'' (ಸರ್ವಜ್ಞ)
''ಮರ್ಮವಿಲ್ಲದ ಮಾತು ಒಡ ಮಡಕೆಯ ತೂತು''(ಕನಕದಾಸರು)
'' ಗಡಿಗೆ ಗುಡವನ ನುಂಗಿತ್ತು
ಅಡಿಯಲಿರ್ದ ಕುಡಿಕೆ ಆ ಉಭಯವ ನುಂಗಿತ್ತು'' (ಗುಪ್ತ ಮಂಚಣ್ಣ)
''ತುಪ್ಪದ ಗಡಿಗೆಯಂತೆ ಇದು ಹಸನಲ್ಲ'' (ಮೋಳಿಗೆ ಮಾರಯ್ಯ)
''ನಮ್ಮ ನಾಗರಿಕತೆಯ ಕತೆ ಹಿರಿಕದು
ಒಡಕು ಮಡಕೆಗೆ ತುಂಬುತಿರುವ ಬಣ್ಣದ
ನೀರು'' (ಗೋಪಾಲಕೃಷ್ಣ ಅಡಿಗ)
''ಚಟಗಿ ಮುಚುಳ ಖಾನದಗಡಿಗಿ ಬಾಳ
ಜೋಕ್ರೆ'' (ಶಿಶುನಾಳ ಶರೀಫ)
''ಹಗಲು ಬೆಳಕಿನ ಗಡಿಗೆ
ಒಡೆದು ಚೂರಾಯಿತಿದೋ
ಪಶ್ಚಿಮಾದ್ರಿಯ ಶಿಖರಧರೆಯೊಂದರಲ್ಲಿ'' (ಜಿ. ಎಸ್. ಶಿವರುದ್ರಪ್ಪ)
ಅತ್ತೆ ಒಡೆದ ಮಡಕೆಗೆ ಮೂರೇ ಕಾಸು (ಗಾದೆ)
ಗಡಿಗೆ ಹೋಗಿದ್ದಕ್ಕೆ ಮಗೆ ಕೊಟ್ಟು ಶಾಸ್ತ್ರ
ಕೇಳಿದಂತೆ (ಗಾದೆ)
ಅಟ್ಟಸ್ವಾರೆ ಆಚೀಕೆ ಬಿತ್ತು
ವಗ್ಗರ್ಣಿ ಸಾರು ಹೆಸ್ರೇಳ್ತು (ಗಾದೆ)

**'ಇಂಗ್ಲಿಷ್ - ಇಂಗ್ಲಿಷ್ - ಕನ್ನಡ'**

ಕುಂಭ ಕಲೆ ಈಗ ಸೆರಾಮಿಕ್ ವಿಜ್ಞಾನದ ಒಂದು ಭಾಗವಾಗಿ ಹೊಸ ರೂಪವನ್ನು ಹೊತ್ತುಕೊಂಡು ಬೆಳೆಯತೊಡಗಿದೆ. "Ceramic is for all" ಎನ್ನುವುದು ಅದರ ವ್ಯಾಪ್ತಿಯನ್ನು ಬಿಂಬಿಸುತ್ತದೆ. ಅನೇಕ ಕಡೆ ಕುಂಬಾರಿಕೆ ತರಬೇತಿ ಕೇಂದ್ರಗಳು ಅಲ್ಪಾವಧಿ ಹಾಗೂ ದೀರ್ಘಾವಧಿ ಕೋರ್ಸುಗಳನ್ನು ನಡೆಸುತ್ತಿವೆ. ಗುಲ್ಬರ್ಗದ ಶರಣಬಸಪ್ಪ ಅಪ್ಪಾ ಇಂಜಿನಿಯರಿಂಗ್ ಕಾಲೇಜಿನಲ್ಲಿ ಪ್ರತ್ಯೇಕವಾದ ನಾಲ್ಕು ವರ್ಷ ಅವಧಿಯ ಸೆರಾಮಿಕ್ ಇಂಜಿನಿಯರಿಂಗ್ ಡಿಗ್ರಿ ಕೋರ್ಸ್ ಕೂಡ ಇದೆ. ಅವರಿಗೆಲ್ಲ ಇದು ನೆರವಾಗಲೆಂಬ ಕಾರಣದಿಂದ ಇಂಗ್ಲಿಷ್-ಇಂಗ್ಲಿಷ್-ಕನ್ನಡ ಶಬ್ದಕೋಶವನ್ನು ಕುಂಬಾರಿಕೆ ಶಬ್ದಕೋಶದ ಪುಸ್ತಕದ ಒಂದು ಮುಖ್ಯವಾದ ಭಾಗವಾಗಿ ಸೇರಿಸಲಾಗಿದೆ. ಸೆರಾಮಿಕ್ ವ್ಯಾಪ್ತಿ ದೊಡ್ಡದು, ಮಣ್ಣಿನ ಮೂಲದ ಎಲ್ಲಾ ವಿಷಯಗಳನ್ನು ಒಳಗೊಂಡ ವಿಜ್ಞಾನವಿದು. ಬರೆದರೆ ಅದೇ ಒಂದು ಬೃಹತ್ತಾದ ನಿಘಂಟಾದೀತು. ನಾನು ಇಲ್ಲಿ ಕುಂಭವಸ್ತುಗಳಿಗೆ ಅಂದರೆ, ಮಡಕೆಗಳಿಗೆ ಮಾತ್ರ ಹೆಚ್ಚಿನ ಆದ್ಯತೆ ಕೊಟ್ಟಿರುವೆ. ಆದರೂ ಅನೇಕ ಶಬ್ದಗಳು ಬಿಟ್ಟುಹೋಗಿರುವ ಸಾಧ್ಯತೆ ಕೂಡ ಇದೆ. ಇಂಗ್ಲಿಷಿನ ಸೆರಾಮಿಕ್ ಪುಸ್ತಕಗಳಲ್ಲಿನ ಗ್ಲಾಸರಿಯನ್ನು ಇದಕ್ಕೆ ಆಧಾರವಾಗಿಟ್ಟುಕೊಂಡು ಪದಕೋಶವನ್ನು ರಚಿಸಲಾಗಿದೆ.

ತಾಂತ್ರಿಕ ಪದಗಳ ಭಾಷಾಂತರ ಅಷ್ಟು ಸುಲಭವಾದುದಲ್ಲ. ಪುಸ್ತಕಗಳ ಕೊರತೆ ಬೇರೆ. ಆದಷ್ಟು ಜಾಗ್ರತೆ ವಹಿಸಿ, ತಾಂತ್ರಿಕ ದೋಷಕ್ಕೆ ಆಸ್ಪದ ಕೊಡದಂತೆ ಬರೆಯಲು ಪ್ರಯತ್ನಿಸಿರುವೆ. ಅನೇಕ ಶಬ್ದಗಳಿಗೆ ನೇರ ಭಾಷಾಂತರ ಮಾಡಿದರೆ ಒಂದಕ್ಕೊಂದು ಅಸ್ಪಷ್ಟತೆ ಆಗುವ ಸಂಭವ ಹೆಚ್ಚು. ವಸ್ತು ವಿಷಯ ಜ್ಞಾನವಿಲ್ಲದಿದ್ದರೆ ಪ್ರಮಾದಗಳಾಗುವ ಸಾಧ್ಯತೆಗಳು ಕೂಡ ಹೆಚ್ಚು.

**'ಇತರೆ ಭಾಷೆಗಳ ಶಬ್ದಕೋಶ'**

ಇದರಲ್ಲಿ ತುಳು, ತೆಲುಗು ಮತ್ತು ಮರಾಠಿಯ ಮುಖ್ಯವಾದ ಕುಂಬಾರಿಕೆಯ ಕೆಲವು ಪದಗಳಿಗೆ ಮಾತ್ರ ಅರ್ಥ ಕೊಡಲಾಗಿದೆ. ಸಾಮಾನ್ಯ ಓದುಗರಿಗೂ ಉಪಯುಕ್ತವಾಗಬಹುದು.

ಅನುಬಂಧದಲ್ಲಿ ಕುಂಭ ಕಲೆಗೆ ಪೂರಕವಾದ ಅನೇಕ ಉಪಯುಕ್ತ ಮಾಹಿತಿಗಳನ್ನು ಒದಗಿಸಿದ್ದು, ಅವು ಓದುಗರಿಗೆ ರುಚಿಸಬಹುದೆಂದು ನನ್ನ ವಿಶ್ವಾಸ. ಯಾಂತ್ರಿಕಯುಗ, ಇತ್ತೀಚೆಗೆ ಬಂದ ಜಾಗತೀಕರಣದಿಂದಾಗಿ ಒಂದು ಕಡೆ ಹೊಸ ಹೊಸ ಶಬ್ದಗಳು ದಂಡಿಕ್ಕಿರುವಂತೆ ಇನ್ನೊಂದು ಕಡೆ ಪರಂಪರಾನುಗತವಾದ ವೃತ್ತಿಗಳು ನೆಲಕಚ್ಚಿದ್ದರಿಂದ, ಸಹಜವಾಗಿಯೆ ಗ್ರಾಮೀಣ ವೃತ್ತಿಪದಗಳು ಮರೆಯಾಗತೊಡಗಿವೆ. ಹೊಸತು ಹೊಸತು ಬರಲಿ, ಆದರೆ ಹಳತು ಅಳಿಯಬಾರದು ತಾನೆ? ಭಾಷಾಶಾಸ್ತ್ರಜ್ಞರ ವೃತ್ತಿಪರ ಕೋಶಕಾರರ ತೀವ್ರವಾದ ಜರೂರ ಚಿಂತನೆ ಈ ಕುರಿತು ಅಗತ್ಯ.

**ಬಸವರಾಜ ಕುಂಚೂರು**
'ಬಸವೇಶ್ವರ ನಿಲಯ', ನಂ. ೯೪೪೭/೨೫, ೭ನೇ ಮುಖ್ಯರಸ್ತೆ, ೨ನೇ ತಿರುವು, ವಿವೇಕಾನಂದ ಬಡಾವಣೆ, ದಾವಣಗೆರೆ - ೫೭೭ ೦೦೪

ಚಿತ್ರಗಳಲ್ಲಿ ಭಾಷೆಯ ಲಯವನ್ನು ರೂಪವನ್ನು ಹಾಸ್ಯಕ್ಕಾಗಿ ಬಳಸುವುದು ಕಥಾಪ್ರಸಂಗದಲ್ಲಿ ಹೊಂದಿಕೊಳ್ಳದ ಹೇರಿಕೆ ಅನ್ನಿಸುವ ಮಟ್ಟಿಗೆ ಹಾಸ್ಯಕ್ಕಾಗಿ ಒಂದು ಪ್ರದೇಶದ ಭಾಷೆಯನ್ನು ಬಳಸುವುದು ಸೂಕ್ತವೇ ಅನ್ನುವುದು ಚಿಂತನೆಯ ವಿಷಯ. ಕನ್ನಡ ಚಿತ್ರರಂಗ ಹಾಸ್ಯಚಿತ್ರ ಹಾಗೂ ಹಾಸ್ಯನಟರ ಒಂದು ಸುದೀರ್ಘ ಪರಂಪರೆಯನ್ನು ಹೊಂದಿದೆ. ಚಿತ್ರಕಥೆಗಳಲ್ಲಿನ ಪಾತ್ರ ಹಾಗೂ ಪ್ರಸಂಗಗಳು ಸೃಷ್ಟಿಸುವ ಹಾಸ್ಯ ದೇಶದ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಯನ್ನು ಗೇಲಿ ಮಾಡಿ ವಿನೋದಿಸಿ ಆಯಾ ಕ್ಷೇತ್ರದ ಜನರನ್ನು ಎಚ್ಚರಿಸಿ ಸಾಮಾಜಿಕ ಜಾಗರೂಕತೆಯನ್ನು ಮೂಡಿಸುವ ಬಹಳ ಅದ್ಭುತವಾದಂತಹ ಕೆಲಸ ಮಾಡಿದ ನಿದರ್ಶನ ನಮ್ಮ ಕನ್ನಡ ಚಿತ್ರಮಾಧ್ಯಮಗಳಲ್ಲಿ ಇದೆ. ಆದರೆ ಹಾಸ್ಯದ ಸೂತ್ರವನ್ನು ಸಮಾಜಪರ ಕಾಳಜಿಗಾಗಿ ಬಳಸದೆ ಕೇವಲ ಮನರಂಜನೆಯ ಆಧಾರವಾಗಿಟ್ಟುಕೊಂಡು ಭಾಷೆಯನ್ನು ಈ ರೀತಿಯಲ್ಲಿ ಬಳಸುವುದು ಸೂಕ್ತವಲ್ಲ. ಇಂತಹ ಹಾಸ್ಯ ಚಿತ್ರ ವೀಕ್ಷಕರಿಗೆ ನಗೆ ಬರಿಸಿ, ಅಂತಹ ಚಿತ್ರಗಳು ಅಪಾರ ಆರ್ಥಿಕ ಲಾಭವನ್ನು ಗಳಿಸಬಹುದು. ಆದರೆ ಅದರ ಪರಿಣಾಮ ಆಯಾ ಭಾಷಾ ಸಮುದಾಯದ ಸಾಂಸ್ಕೃತಿಕ ವಲಯಗಳ ಮೇಲೆ ಅತ್ಯಂತ ಸೂಕ್ಷ್ಮ ಹಾಗೂ ಅವ್ಯಕ್ತವಾಗಿ ಆಗದೆ ಇರದು. ಇಂತಹ ನಷ್ಟಗಳು ಕಣ್ಣಿಗೆ ಕಾಣದೇ ಹೋಗಬಹುದು. ನಾವುಗಳು ಅದನ್ನು ನೇರವಾಗಿ ಅನುಭವಿಸದೇನೇ ಇರಬಹುದು. ಆದರೆ ಇಂತಹ ನಷ್ಟಗಳನ್ನು ಭೌತಿಕ ಸಂಪತ್ತಿನ ರೂಪಗಳಲ್ಲಿ ಧರಿಸಲು ಸಾಧ್ಯವಾಗದು.

---

# ಕನ್ನಡ ಸಿನೇಮಾಧ್ಯಮಗಳಲ್ಲಿ ಹಾಸ್ಯ/ಭಾಷೆಯ ಅಪಹಾಸ್ಯ: ಕೆಲವು ಆಕ್ಷೇಪಣೆಗಳು



**ಕ**ನ್ನಡ ದೃಶ್ಯಮಾಧ್ಯಮಗಳು, ವಿಶೇಷವಾಗಿ ಸಿನೇಮಾಧ್ಯಮಗಳು, ಇತಿಹಾಸದ ಉದ್ದಕ್ಕೂ ನೋಡುವ ವರ್ಗಕ್ಕೆ ಹಾಸ್ಯವನ್ನ ವಿನೋದವನ್ನ ಉಣಬಡಿಸುತ್ತಲೇ ಬಂದಿದೆ. ಹಾಸ್ಯ-ವಿನೋದದ ಜೊತೆಗಿನ ಕನ್ನಡ ಚಿತ್ರರಂಗದ ನಂಟು ಬಹಳ ಹಳೆಯದು. ಚಿತ್ರದಲ್ಲಿನ ಹಾಸ್ಯ ಪ್ರಸಂಗಗಳು, ಹಾಸ್ಯಮಯ ಸಂವಾದಗಳು ಚಿತ್ರ ವೀಕ್ಷಕರಿಗೆ, ವಿನೋದಪ್ರಿಯರಿಗೆ ಒಂದು ಬಗೆಯ ಹಬ್ಬವನ್ನುಂಟುಮಾಡಿದರೆ ಅಂತಹ ಹಾಸ್ಯಮಯ ವಾತಾವರಣವನ್ನು ಸೃಷ್ಟಿಸುವ ಹಾಸ್ಯನಟರು ಚಿತ್ರ ಅಭಿಮಾನಿಗಳ ಮನದಲ್ಲಿ ತಮ್ಮ ವಿಶೇಷ ಛಾಪನ್ನು ಮೂಡಿಸಿದ್ದಾರೆ. ಕನ್ನಡ ಚಿತ್ರಗಳಲ್ಲಿನ ಹಾಸ್ಯ-ವಿನೋದ, ಚಿತ್ರಕಥೆಗಳ ಅಂಗವಾಗಿ ಅಥವಾ ಪ್ರಸಂಗ ಸಾಪೇಕ್ಷವಾಗಿ ಅನೇಕ ಚಿತ್ರಗಳಲ್ಲಿ ಮೂಡಿಬಂದಿವೆ. ಇನ್ನು ಹಲವು ಚಿತ್ರಗಳು ಹಾಸ್ಯ ಹಾಗೂ ವಿನೋದವನ್ನು ಕೇಂದ್ರವಸ್ತುವನ್ನಾಗಿ ಇಟ್ಟುಕೊಂಡು ವಿಶೇಷವಾಗಿ ಚಿತ್ರೀಕರಿಸಲ್ಪಟ್ಟಿವೆ. ಇನ್ನು ಕೆಲವು ಚಿತ್ರಗಳಲ್ಲಿ ಈ ತೆರನೆಯ ಹಾಸ್ಯಮಯ ಪ್ರಸಂಗಕ್ಕೆಂದೇ ಮೀಸಲಾದ ಹಾಸ್ಯನಟರ ಅಭಿನಯ ಕಂಡುಬಂದರೆ, ಮತ್ತೆ ಅನೇಕ ಚಿತ್ರಗಳಲ್ಲಿ ಮುಖ್ಯ ನಾಯಕ, ನಾಯಕಿ ಹಾಗೂ ಉಳಿದ ಪಾತ್ರಗಳ ಮಾಧ್ಯಮವಾಗಿಯೇ ಇಂತಹ ಪ್ರಸಂಗಗಳ ಸಂಯೋಜನೆ ಕಂಡುಬರುತ್ತದೆ.

ಚಿತ್ರಗಳಲ್ಲಿ ಹಾಸ್ಯದ ಸಂಯೋಜನೆ ಹೇಗೆಯೇ ಇರಲಿ, ಆದರೆ ಒಂದು ಅಂಶ ಬಹುಮುಖ್ಯವಾಗಿ ಒಡೆದು ಕಾಣುವುದೆಂದರೆ ಹಾಸ್ಯಕ್ಕೂ ಭಾಷೆಗೂ ಇರುವ ಅನ್ಯೋನ್ಯ ಸಂಬಂಧ. ಚಿತ್ರಗಳಲ್ಲಿನ ಕಥಾಪ್ರಸಂಗ, ಸಂವಾದಗಳು, ನಟನ ಅಭಿನಯ, ಘಟನೆಯ ವಿನ್ಯಾಸ ಇವೆಲ್ಲವೂ ಚಿತ್ರದಲ್ಲಿ ನಗೆಯನ್ನು ಸೃಷ್ಟಿಸುವಲ್ಲಿ, ಸಿನೆಮಾ ಮಂದಿರದಲ್ಲಿ ಕುಳಿತ ವೀಕ್ಷಕರಿಗೆ ಹೊಟ್ಟೆಹುಣ್ಣಾಗುವ ಹಾಗೆ ನಗಿಸುವಲ್ಲಿ ಕಾರಣವಾದರೂ ಕೂಡ ಹಾಸ್ಯರಸವನ್ನು ಮೂಡಿಸುವಲ್ಲಿ ಇವೆಲ್ಲ ಘಟಕಗಳು, ಭಾಷೆಯ ಮೂಲಕವೇ ರೂಪತಾಳುತ್ತವೆ. ಇವೆಲ್ಲವು ಹಾಸ್ಯ ವಿನೋದವನ್ನು ಸೃಷ್ಟಿಸುವ ಪರಿಕರಗಳಾದರೆ ಅವುಗಳಿಗೆ ಜೀವ ತುಂಬುವುದು ಭಾಷೆ, ಮೂಕಚಿತ್ರವನ್ನು ಹೊರತುಪಡಿಸಿ ಅನ್ನಬಹುದೇ ? ನನ್ನ ಅನಿಸಿಕೆಯ ಪ್ರಕಾರ ಮೂಕಾಭಿನಯದ ಒಂದೆ ಅವ್ಯಕ್ತ ಹಾಗೂ ನಿಶ್ಶಬ್ದವಾಗಿ ಭಾಷೆ ತನ್ನ ಇರುವಿಕೆಯನ್ನು ಸೂಚಿಸುತ್ತಲೇ ಇರುತ್ತದೆ. ಇಂತಹ ಸಿನಿಮಾಗಳಲ್ಲಿ ನಿಶ್ಶಬ್ದ ಭಾಷೆಯ ಹೆಣಿಕೆಯ ಮೂಲಕ ನಟ, ಹಾಸ್ಯ ಅಭಿನಯದ ಪ್ರಸಂಗಗಳ ಚಿತ್ರವನ್ನು ಬಿಡಿಸುವುದನ್ನು ನಾವು ಗಮನಿಸಬಹುದು. ಒಟ್ಟಾರೆಯಲ್ಲಿ ಸಿನಿಮಾಗಳಲ್ಲಿನ ಹಾಸ್ಯ ಹಾಗೂ ಭಾಷೆಯ ಅಂಟು-ನಂಟು-ಗಂಟು ಬಹಳ ಮುಖ್ಯ ಹಾಗೂ ಗಮನೀಯ.

ಈ ಸಂದರ್ಭದಲ್ಲಿ ನನಗೆ ಕಾಡುವ ಪ್ರಶ್ನೆ ಅಂದರೆ ಒಟ್ಟಾರೆಯಾಗಿ ಒಂದು ಚಿತ್ರದಲ್ಲಿ ಭಾಷೆಯ ಎಷ್ಟು ರೂಪಗಳು (ಪ್ರಾದೇಶಿಕ) ಬಳಕೆಯಲ್ಲಿ ಬರಬಹುದು ಅಥವಾ ಚಿತ್ರದ ನಿರ್ಮಾಪಕ/ನಿರ್ದೇಶಕ ಚಿತ್ರಗಳಲ್ಲಿ ಕನ್ನಡದ ಪ್ರಾದೇಶಿಕರೂಪಗಳನ್ನು ಬಳಸುವಾಗ ಯಾವ ಆಧಾರದ ಮೇಲೆ ಅವುಗಳ ಆಯ್ಕೆಯನ್ನು ಅವರು ವಿಂಗಡಿಸುವರು ಅಥವಾ ಅವಲಂಬಿತವಾಗಿರಿಸುವರು, ಅನ್ನುವುದು. ಒಂದು ವೇಳೆ ಪಾತ್ರ, ಕಥಾಸಂದರ್ಭ, ದೇಶ ಕಾಲ ಹಾಗೂ ವಾತಾವರಣದ ಅನ್ವಯವಾಗಿ ಚಿತ್ರಗಳಲ್ಲಿ ಕನ್ನಡದ ವಿವಿಧ ಪ್ರದೇಶಗಳ ಬಳಕೆಯ ಭಾಷೆಯನ್ನು ಬಳಸುವುದಾದಲ್ಲಿ ಬಹುಮುಖ್ಯವಾಗಿ ಕಾಡುವ ಅಂಶವೆಂದರೆ, ಕನ್ನಡ ಚಿತ್ರಗಳಲ್ಲಿ ವಿಶೇಷವಾಗಿ ಇತ್ತೀಚಿನ ಚಿತ್ರಗಳಲ್ಲಿ ಹಾಗೂ ಟೀವಿಯ ಧಾರಾವಾಹಿಗಳಲ್ಲಿಯೂ ಕೂಡ ಹಾಸ್ಯ-ವಿನೋದದ ವಾತಾವರಣ

---

**ಡಾ|| ಪರಿಮಳಾ ಅಂಬೇಕರ್**

ಸೃಷ್ಟಿಸುವಲ್ಲಿ ಬಳಸಿಕೊಳ್ಳಲಾದ ಭಾಷೆಯ ಪ್ರಾದೇಶಿಕ ರೂಪ ಉತ್ತರ ಕರ್ನಾಟಕ ಪ್ರದೇಶದ್ದೇ ಆಗಬೇಕೇ ಅನ್ನುವುದು. ಕರ್ನಾಟಕದ ಇನ್ನೂ ಹಲವು ಪ್ರಾದೇಶಿಕ ರೂಪಗಳು ಚಿತ್ರದಲ್ಲಿನ ಹಾಸ್ಯರಸವನ್ನು ಮೈಗೂಡಿಸುವಲ್ಲಿ ಅಸಮರ್ಥವಾಗಿರುವವೆ, ಅನ್ನುವುದು, ನಕ್ಕುನಗಿಸುವ ಸಾಮರ್ಥ್ಯ ಕನ್ನಡದ ಬೇರೆ ಪ್ರಾದೇಶಿಕ ಟಚ್ ಉಳ್ಳ, ಟೋನ್ ಉಳ್ಳಭಾಷೆಗೆ ಇಲ್ಲವೇ ಅನ್ನುವುದು ಅಥವಾ ಉತ್ತರ ಕರ್ನಾಟಕದ ಭಾಷೆಯನ್ನು ಆಡುವ ಜನ ಅಥವಾ ಈ ಭಾಷೆಯನ್ನು ಬಳಸುವ ನಮ್ಮ ಪ್ರದೇಶದ ಜನರೇ ಚಿತ್ರೋದ್ಯಮದಲ್ಲಿರುವ ಎಲ್ಲರಿಗೂ ನಗುವ ಹಾಗೂ ನಗಿಸುವ ಒಂದು ಸಾಧನವಾಗಿ ಕಂಡಿರ ಬಹುದೇ !? ಅಥವಾ ಹಿಂದುಳಿದ ಪ್ರದೇಶ ಹಿಂದುಳಿದ ಜನವೆಂದು ಬಗೆದು, ಇಲ್ಲಿನ ಭಾಷೆಯನ್ನು ಗೇಲಿಮಾಡಿ, ನಮ್ಮ ಜನರ ನೆಲದ ಭಾಷೆಯನ್ನು ಸಂಪೂರ್ಣ ಕರ್ನಾಟಕದ ಸಾಂಸ್ಕೃತಿಕ ಸಂದರ್ಭ ದಲ್ಲಿಯೇ ಅಪಹಾಸ್ಯಕ್ಕೀಡುಮಾಡುವ ಹುನ್ನಾರವೇ ? ಒಂದೂ ತಿಳಿಯದ ಅಂಶ. ಜೊತೆಗೆ ಮಾಧ್ಯಮಗಳಲ್ಲಿ, ಅದರಲ್ಲೂ ವಿಶೇಷವಾಗಿ ಮನೋರಂಜನಾ ಮಾಧ್ಯಮ ಗಳಲ್ಲಿ ಬಳಸುವ ಭಾಷೆ, ವಿಶಿಷ್ಟ ಸಂದರ್ಭಿತಾರ್ಥದಲ್ಲಿ ಹಾಸ್ಯ-ವಿನೋದಕ್ಕಾಗಿ ಬಳಸಿಕೊಂಡಾಗ, ಅದರ ಬಳಕೆಯಿಂದ ಮಾತ್ರವೇ ಆ ಭಾಷೆ ಅಪಹಾಸ್ಯಕ್ಕೆ ತುತ್ತಾಗುತ್ತದೆಯೇ ಎಂದು ಪರೀಕ್ಷಿಸುವುದೂ ಅನಿವಾರ್ಯ.

ಸಮಾಜದಲ್ಲಿ ಬಳಸುವ ಭಾಷೆಗೆ ತನ್ನದೇ ಆದಂತಹ ಸಾಮಾಜಿಕ ಸ್ಥಾನಮಾನ ಇರುವುದನ್ನು ನಾವು ಕಾಣುತ್ತೇವೆ. ಭಾರತೀಯರ ಮನೋಧರ್ಮದ ವೈಶಿಷ್ಟ್ಯತೆ ಎಂದರೆ ಅದು ಎಂದಿನಿಂದಲೂ ಗ್ರಾಮಾಂತರ ಪ್ರದೇಶದ ಭಾಷೆಗೆ ಆಗಲಿ ಅಥವಾ ಅದನ್ನ ಬಳಸುವ ಸಮುದಾಯಕ್ಕಾಗಲಿ ಗೌರವ, ಸಾಮಾಜಿಕ ಸ್ಥಾನಮಾನ ಕೊಟ್ಟಿರುವುದಾಗಿ ನಾವು ಕಾಣುವುದಿಲ್ಲ. ಗ್ರಾಮೀಣ ಭಾಷೆ, ಭಾಷೆಯ ಪ್ರಾದೇಶಿಕ ಲಯ ರೂಪಗಳು ಎಂದಿನಿಂದಲೂ ಅಶಿಷ್ಟ, ಅಶಿಕ್ಷಿತರ ಭಾಷೆಯೆಂದೇ ಪರಿಗಣಿಸಲ್ಪಟ್ಟಿವೆ, ಅವಹೇಳನಕ್ಕೀಡಾಗುತ್ತಲೇ ಬಂದಿವೆ. ಒಂದು ಕಡೆ ಗ್ರಾಮೀಣ ಭಾಷೆಗಳು, ನಗರದ ಶಿಷ್ಟ ಹಾಗೂ ಸುಸಂಸ್ಕೃತ ಭಾಷೆಯ ಅಭಿಜಾತ್ಯತೆಯ ಮಾನಸಿಕತೆಯಿಂದ ದೂರೀಕರಿಸಲ್ಪಟ್ಟರೆ, ಇನ್ನೊಂದೆಡೆ ಪ್ರಾದೇಶಿಕ ಭಾಷಾ ರೂಪಗಳು, ಪ್ರದೇಶಗಳ ಆರ್ಥಿಕ ಹಾಗೂ ರಾಜಕೀಯ ಪ್ರಸ್ತುತತೆ ಹಾಗೂ ಸಂಭಾವನೆಗಳ ಆಧಾರದ ಮೇಲೆ ಧಿಕ್ಕರಿಸಲ್ಪಡುತ್ತಿವೆ. ಹೀಗಾಗಿ ಕರ್ನಾಟಕದಲ್ಲಿ, ಕನ್ನಡ ಭಾಷೆಯ ಬಳಕೆಯ ವಲಯ ದಲ್ಲಿ ಪ್ರಾದೇಶಿಕ ಭಾಷೆಯ ಸ್ಥಾನಮಾನಾಧಾರಿತವಾದ, ಶಿಷ್ಟ ಕನಿಷ್ಠವೆನ್ನಿಸಿಕೊಳ್ಳುವಂತಹ ಭಾಷೆಯ ವಲಯಗಳು ರೂಪುತಳೆದಿವೆ. ಅಕ್ಕಿ-ರಾಗಿಯ ಸೂಚ್ಯ ಮಿಥಕೀಯ ವ್ಯತ್ಯಾಸ ಹಾಗೂ ಭಿನ್ನತೆ, ಕನ್ನಡವನ್ನು ಬಳಸುವ ಸಮಾಜದಲ್ಲಿ, ಮಾಧ್ಯಮಗಳಲ್ಲಿ, ಶಿಕ್ಷಣ ಕ್ಷೇತ್ರಗಳಲ್ಲಿ, ರಾಜಕೀಯ ಹಾಗೂ ಸಾಂಸ್ಕೃತಿಕ ವಲಯಗಳಲ್ಲಿಯೂ ಕೂಡ ಢಾಳಾಗಿ ಕಾಣುತ್ತಿದೆ.

ಭಾಷೆಗೆ ಸಂಬಂಧಿತವಾದ ಈ ವಿಡಂಬನೆ ಈ ರೋಗ ಕೇವಲ ಕನ್ನಡಭಾಷೆಗಷ್ಟೇ ಅಂಟಿಲ್ಲ. ವಿಪರೀತಾರ್ಥದಲ್ಲಿ ಕಾಣುವುದಾದರೆ ಆಳರಸರ ಭಾಷೆಯೇ ನಾಡಭಾಷೆ ಅನ್ನುವ ಬುದ್ಧಿವಂತರ ಮಾತು ಇಂದು ನೂರಕ್ಕೆ ನೂರರಷ್ಟು ಸತ್ಯವಾಗಿ ಪರಿಣಮಿಸಿದೆ. ಕಾರಣ ಗ್ರಾಮಾಂತರ ಪ್ರದೇಶಗಳ ಭಾಷಾ ರೂಪ ಹಿಂದುಳಿದ ಪ್ರದೇಶಗಳ ಭಾಷೆಗಳು ಇಂದು ಆರ್ಥಿಕವಾಗಿ ಮುನ್ನುಗ್ಗುತ್ತಿರುವ, ಹೈಟೆಕ್ ಸಿಟಿಯಾಗಿ ಭೂತಾಕಾರವಾಗಿ ಬೆಳೆಯುತ್ತಿರುವ ರಾಜಧಾನಿಯ ಕನ್ನಡಕ್ಕೆ, ಕನ್ನಡ ಸಿನೇರಂಗಕ್ಕೆ, ಉಳಿದ ಪ್ರಾದೇಶಿಕ ರೂಪ ಲಯ ಉಳ್ಳ ಕನ್ನಡ ಹಾಸ್ಯವಾಗಿ ಕಾಣುತ್ತಿವೆ. ಹಾಸ್ಯವನ್ನು ಸೃಷ್ಟಿಸುವಲ್ಲಿ ಸಲೀಸಾಗಿ ದೊರೆಯುತ್ತಿವೆ.

ಭಾಷೆಯನ್ನು, ಭಾಷೆಯ ಲಯವನ್ನು ಅಥವಾ ಭಾಷೆಯನ್ನು ಬಳಸುವ ಸಮುದಾಯವನ್ನೇ ಮಾಧ್ಯಮಗಳಲ್ಲಿ ಹಾಸ್ಯಕ್ಕಾಗಿ ಆರಿಸಿಕೊಂಡಲ್ಲಿ, ಅಂತಹ ಹಾಸ್ಯ ಅಪಹಾಸ್ಯಕ್ಕೆ ತುತ್ತಾಗುವಲ್ಲಿ ಸಂಶಯವಿಲ್ಲ. ಮನೋರಂಜನಾ ಮಾಧ್ಯಮಗಳಲ್ಲಿ ಬಳಸಿಕೊಂಡಿರುವ ಹಾಸ್ಯ, ಪ್ರಸಂಗದ್ದೆ ಅಥವಾ ಸನ್ನಿವೇಶದ್ದಾಗಿರದೆ ನೇರವಾಗಿ ನಿರ್ದಿಷ್ಟ ಬಳಸಿರುವ ಭಾಷೆಯ ಲಯ ಹಾಗೂ ಗಂಧದ ಆಧಾರವಾಗಿದ್ದಲ್ಲಿ, ಅಂತಹ ಕಥೆಗಳಲ್ಲಿ ಅಳವಡಿಸಿರುವ ಹಾಸ್ಯ ಭಾಷೆಯ ಅಪಹಾಸ್ಯಕ್ಕೆ ಎಡೆಮಾಡುತ್ತದೆ. ತನ್ನ ಉಸಿರಿನ ಹಾಗೆ, ತನ್ನ ಮಣ್ಣಿನ ಹಾಗೆ ಭಾಷೆಯನ್ನು ಪ್ರೀತಿಯಿಂದ, ಸಹಜವಾಗಿ ಬಳಸುತ್ತಿರುವ ಭಾಷಾ ಸಮುದಾಯ ಸಮಾಜ ಎಲ್ಲ ಕ್ಷೇತ್ರಗಳಲ್ಲಿ ಅಪಹಾಸ್ಯಕ್ಕೆ ಗುರಿಯಾಗುತ್ತದೆ. ಕಾರಣ, ಇಂತಹ ಚಿತ್ರಗಳು, ಭಾಷೆಯನ್ನು ಆ ಭಾಷೆಯನ್ನು ಬಳಸುವ ಜನರನ್ನು ಅಪಹಾಸ್ಯ ಮಾಡುವ ಹಾಗೆ ತನ್ನನ್ನು ತಾನು ಪ್ರಸ್ತುತಪಡಿಸಿದಂತಾಗುತ್ತದೆ. ಒಟ್ಟಿನಲ್ಲಿ ಆಕ್ಷೇಪಣೆ ಏನೆಂದರೆ, ಇಂದಿನ ಕನ್ನಡ ಚಿತ್ರರಂಗ, ಟೀವಿ ಚಾನೆಲ್‌ಗಳು ಉತ್ತರ ಕರ್ನಾಟಕದ ಗಡಿನಾಡಾದ ಬೀದರ್ ಜನ ಆಡುವ ಕನ್ನಡವನ್ನು ಗುಲಬರ್ಗಾ ಹಾಗೂ ಸುತ್ತಮುತ್ತಲಿನ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಕನ್ನಡದ ರೂಪವನ್ನು ಹಾಸ್ಯಕ್ಕಾಗಿ ಬಳಸಿಕೊಂಡು ಅದನ್ನು ಅಪಹಾಸ್ಯಕ್ಕೆ ಗುರಿಮಾಡುತ್ತಿವೆ.

ಚಿತ್ರಗಳಲ್ಲಿ ಭಾಷೆಯ ಲಯವನ್ನು ರೂಪವನ್ನು ಹಾಸ್ಯಕ್ಕಾಗಿ ಬಳಸುವುದು ಕಥಾಪ್ರಸಂಗದಲ್ಲಿ ಹೊಂದಿಕೊಳ್ಳದ ಹೇರಿಕೆ ಅನ್ನಿಸುವ ಮಟ್ಟಿಗೆ ಹಾಸ್ಯಕ್ಕಾಗಿ ಒಂದು ಪ್ರದೇಶದ ಭಾಷೆಯನ್ನು ಬಳಸುವುದು ಸೂಕ್ತವೇ ಅನ್ನುವುದು ಚಿಂತನೆಯ ವಿಷಯ. ಕನ್ನಡ ಚಿತ್ರರಂಗ ಹಾಸ್ಯಚಿತ್ರ ಹಾಗೂ ಹಾಸ್ಯನಟರ ಒಂದು ಸುದೀರ್ಘ ಪರಂಪರೆಯನ್ನು ಹೊಂದಿದೆ. ಚಿತ್ರಕಥೆ ಗಳಲ್ಲಿನ ಪಾತ್ರ ಹಾಗೂ ಪ್ರಸಂಗಗಳು ಸೃಷ್ಟಿಸುವ ಹಾಸ್ಯ ದೇಶದ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಯನ್ನು ಗೇಲಿಮಾಡಿ ವಿನೋದಿಸಿ ಆಯಾ ಕ್ಷೇತ್ರದ ಜನರನ್ನು ಎಚ್ಚರಿಸಿ ಸಾಮಾಜಿಕ ಜಾಗರೂಕತೆಯನ್ನು ಮೂಡಿಸುವ ಬಹಳ ಅದ್ಭುತ ವಾದಂತಹ ಕೆಲಸಮಾಡಿದ ನಿದರ್ಶನ ನಮ್ಮ ಕನ್ನಡ ಚಿತ್ರಮಾಧ್ಯಮಗಳಲ್ಲಿ ಇದೆ. ಆದರೆ ಹಾಸ್ಯದ

## ಬದುಕು ಪ್ರೀತಿಸುತ್ತದೆ

ಮೊಗ್ಗೆಂಬುದು ಎಲ್ಲೇ ಇರಲಿ
ಯಾರು ನೋಡಲಿ
ಯಾರೂ ನೋಡದಿರಲಿ,
ಅರಳೇ ಅರಳುತ್ತದೆ
ಗಂಧ ಚೆಲ್ಲುತ್ತದೆ.

ಯಾರೂ ನೆಡದ ಮರ
ಈಗಲೂ ಬೆಳೆಯುತ್ತಿದೆ,
ಕೇಳುಗರು ಇಲ್ಲದಿದ್ದರೂ
ಮರದ ಮೇಲಿನ ಹಕ್ಕಿ
ದಿನವೂ ಹಾಡುತ್ತದೆ.

ಯಾರೂ ಕಣ್ತೆತ್ತಿ
ನೋಡದ ಮಾತ್ರಕೆ
ಇಲ್ಲವಾಗುವುದಿಲ್ಲ ಯಾವುದೂ,
ಯಾರೂ ಮುದ್ದಿಸದ ಕಾಗೆ
ಇನ್ನೂ ಬದುಕಿದೆ.

ತೊರೆದು ಹೋದರೂ ನೀನು
ನನ್ನ ಕನಸುಗಳನ್ನು
ಕತ್ತಲಾಗುವುದಿಲ್ಲ ನನಗೆ,
ಏಕೆಂದರೆ ಬದುಕು
ಇರುವುದನ್ನು ಪ್ರೀತಿಸುತ್ತದೆ !

**ಗಣೇಶ ಹೊಸ್ಮನೆ**
ಜಾನ್ಮನೆ - ೫೮೧ ೩೧೫, ಶಿರಸಿ
ಉತ್ತರ ಕನ್ನಡ

ಸೂತ್ರವನ್ನು ಸಮಾಜಪರ ಕಾಳಜಿಗಾಗಿ ಬಳಸದೆ ಕೇವಲ ಮನರಂಜನೆಯ ಆಧಾರವಾಗಿಟ್ಟುಕೊಂಡು ಭಾಷೆಯನ್ನು ಈ ರೀತಿಯಲ್ಲಿ ಬಳಸುವುದು ಸೂಕ್ತವಲ್ಲ. ಇಂತಹ ಹಾಸ್ಯ ಚಿತ್ರ ವೀಕ್ಷಕರಿಗೆ ನಗೆ ಬರಿಸಿ, ಅಂತಹ ಚಿತ್ರಗಳು ಅಪಾರ ಆರ್ಥಿಕ ಲಾಭವನ್ನು ಗಳಿಸಬಹುದು. ಆದರೆ ಅದರ ಪರಿಣಾಮ ಆಯಾ ಭಾಷಾ ಸಮುದಾಯದ ಸಾಂಸ್ಕೃತಿಕ ವಲಯಗಳ ಮೇಲೆ ಅತ್ಯಂತ ಸೂಕ್ಷ್ಮ ಹಾಗೂ ಅವ್ಯಕ್ತವಾಗಿ ಆಗದೆ ಇರದು. ಇಂತಹ ನಷ್ಟಗಳು ಕಣ್ಣಿಗೆ ಕಾಣದೇ ಹೋಗಬಹುದು. ನಾವುಗಳು ಅದನ್ನು ನೇರವಾಗಿ ಅನುಭವಿಸದೇನೇ ಇರಬಹುದು. ಆದರೆ ಇಂತಹ ನಷ್ಟಗಳನ್ನು ಭೌತಿಕ ಸಂಪತ್ತಿನ ರೂಪಗಳಲ್ಲಿ ಧರಿಸಲು ಸಾಧ್ಯವಾಗದು. ಈ ತೆರನೆಯ ಬಳಕೆಯಿಂದ, ಆಯಾ ಭಾಗದ ಜನರ ವ್ಯಕ್ತಿತ್ವ, ಪ್ರದೇಶದ ಸಾಂಸ್ಕೃತಿಕ ಶ್ರೀಮಂತಿಕೆ ಅಪಹಾಸ್ಯಕ್ಕೆ ತುತ್ತಾಗದೇ ಇರದು. ಹಾಸ್ಯ ತನ್ನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಘನತೆಯ ಪರದೆಯನ್ನು ಹರಿದು ಹೊರಬಂದಲ್ಲಿ ಅದು ವ್ಯಕ್ತಿ, ವ್ಯವಸ್ಥೆ, ಜನಾಂಗ, ಸಂಸ್ಕೃತಿಯನ್ನು ಅಪಹಾಸ್ಯಕ್ಕೆ ಗುರಿಮಾಡುತ್ತದೆ.

ಪ್ರದೇಶದ ಭಾಷೆಯನ್ನು ನಮ್ಮ ಜೀವ ವಾಹಿನಿಯಾಗಿ, ಉಸಿರಾಗಿ ಬಳಸುವ ವಹಿವಾಟು ನಮ್ಮ ದೇಶದಲ್ಲಿದೆ. ಆದರೆ ನಮ್ಮ ಭಾರತೀಯರ ಮನೋಭಾವ ಭಾಷೆಯ ಬಳಕೆಯ ಬಗ್ಗೆಗಂತು ವಿಚಿತ್ರವಾದದ್ದು. ಆಳರಸನ ಭಾಷೆಗೆ ಇದ್ದ ಗೌರವ ಆಳಿಸಿಕೊಳ್ಳುವವನ ಭಾಷೆಗೆ ಇಲ್ಲ. ವಸಾಹತುಶಾಹಿ ವ್ಯವಸ್ಥೆಯಲ್ಲಿ ಬೆಳೆದುಬಂದ ನಮ್ಮ ಭಾಷಾ ಮನೋಭಾವ ಇಂದೂ ಕೂಡ ತನ್ನ ಕುರುಹುಗಳನ್ನು ಉಳಿಸಿಕೊಂಡುಬಂದಿದೆ. ಇಂದಿನ ಆಧುನಿಕ ವಿದ್ಯುನ್ಮಾನಗಳ ವ್ಯವಸ್ಥೆಯಲ್ಲಿ, ನಗರೀಕರಣದ ಪರಿಣಾಮವಾಗಿ ಬೆಳೆಯುತ್ತಿರುವ ಸಂಸ್ಕೃತಿಯ ಅಡಿಯಲ್ಲಿನ ಭಾಷೆ ಇಂದು ತನ್ನದೇ ಆದಂತಹ ವರ್ಚಸ್ಸು ದರ್ಪದಿಂದ ಮೆರೆಯುತ್ತಿದೆ. ನಮ್ಮ ಸಮಾಜದ ಚೌಕಟ್ಟಿನಲ್ಲಿ, ಜಾತಿ-ವರ್ಣಗಳಿಗೆ ದೊರಕಿರುವ ಸಾಮಾಜಿಕ ಹೈರಾರ್ಕಿ ಭಾಷೆ ಹಾಗೂ ಆ ಭಾಷೆಯನ್ನು ಬಳಸುವ ಪ್ರದೇಶವಲಯಕ್ಕೂ ಕೂಡ ಅಂಟಿಕೊಂಡು ಬಂದಿದೆ. ಈ ದರ್ಪದೆದುರು ನಮ್ಮ ದೇಸೀ ಭಾಷೆಗಳು ಪ್ರದೇಶದ ಲಯ ನಾಜೂಕುಗಳಿಂದ ದೂರ ಸರಿದು, ನಕಲಿಗೆ ಬಲಿಯಾಗುತ್ತಿವೆ. ಹೆಚ್ಚೂ ಕಡಿಮೆ ತಮ್ಮ ಮೂಲದಿಂದಲೇ ಸರಿಯುತ್ತಿವೆ. ಇದು ಇಂದಿನ ವಾಸ್ತವ.

ನನ್ನ ಪ್ರಕಾರ ಭಾಷೆ ಕೇವಲ ಒಂದು ಜೀವಂತ ಮಾಧ್ಯಮ ಅಷ್ಟೆ. ಅದಕ್ಕೆ ತನ್ನದೇ ಆದಂತಹ ಯಾವ ಸ್ವಂತಿಕೆಯಾಗಲಿ ಸಾಮಾಜಿಕ ಸ್ಥಾನಮಾನವಾಗಲಿ ಸಿಗಕೂಡದು. ಭಾಷೆಯ ಬಗ್ಗೆ ವಸ್ತುನಿಷ್ಠ ದೃಷ್ಟಿಯನ್ನು ಇಂದು ನಾವು ಬೆಳೆಸಿಕೊಳ್ಳಬೇಕಾಗಿದೆ. ಭಾಷೆ ಒಂದು ಸಾಧನ ಸಲಕರಣೆ ಅಷ್ಟೆ, ತಲೆಯ ಮೇಲಿನ ಕಿರೀಟವಲ್ಲ. ಸಮಾಜದಲ್ಲಿ ಬಳಸುವ ಭಾಷೆಗೆ ಕಿರೀಟದ ಮನ್ನಣೆ ಕೊಟ್ಟಲ್ಲಿ, ಅದರ ಅಧಿಕಾರಶಾಹಿ ಬಳಕೆಗೆ ಕುಮ್ಮಕ್ಕು ಕೊಟ್ಟ ಹಾಗೆಯೇ ಸರಿ. ಭಾರತೀಯರು ಎಂದಿನಿಂದಲೂ ಭಾಷೆಯ ಬಗ್ಗೆ, ಭಾಷೆಯನ್ನು ಬಳಸುವ ವ್ಯಕ್ತಿ ಹಾಗೂ ಸಮಾಜದ ಬಗ್ಗೆ ವ್ಯಕ್ತಿನಿಷ್ಠ ಧೋರಣೆಯನ್ನು ಬೆಳೆಸಿಕೊಂಡು ಬಂದಿರುವೆವು, ಅದು ಸಲ್ಲ. ಕಾರಣ, ಒಂದೆಡೆ ಸಾಮ್ರಾಜ್ಯಶಾಹಿಯ ಭಾಷೆಯಾಗಿ ಆಂಗ್ಲ ಇಂದಿಗೂ ನಮ್ಮನ್ನು ಆಳುತ್ತಿದೆಯಾದರೆ ಇನ್ನೊಂದೆಡೆ, ಆಧುನಿಕ ಹೈಟೆಕ್ ಸಂಸ್ಕೃತಿಗಳ ಅಡಿಯಲ್ಲಿ ರೂಪುತಳೆಯುತ್ತಿರುವ, ನಗರೀಕೃತಕೊಂಡ ರಾಜಧಾನಿಯ ಭಾಷೆಗಳು ತಮ್ಮ ರಾಜಕೀಯ ಹಾಗೂ ಆರ್ಥಿಕ ತೆಕ್ಕೆಯಲ್ಲಿ ಬರುವ ಎಲ್ಲ ಪ್ರಾದೇಶಿಕ ಹಾಗೂ ದೇಸೀಯ ಭಾಷೆಗಳನ್ನು ತಮ್ಮ ಮೂಲದಿಂದಲೇ ನಶಿಸುವ ಹಾಗೆ ಮಾಡುತ್ತಿವೆ. ಇಂದಿನ ನಮ್ಮ ಶಿಕ್ಷಣ ವ್ಯವಸ್ಥೆ, ರಾಜಕೀಯ ವಲಯಗಳು, ಆರ್ಥಿಕ ಯೋಜನೆಗಳು, ಒಂದಲ್ಲಾ ಒಂದು ರೀತಿಯಲ್ಲಿ, ಪ್ರಾದೇಶಿಕ ಜೀವನ ಸಂಸ್ಕೃತಿಯ ಮೇಲೆಯೇ ಕೊಡಲಿ ಏಟು ಹಾಕುತ್ತಿವೆ. ಅನುಕರಣೆ ನಕಲು ಸಾಂಸ್ಕೃತಿಕ ವಲಯಕ್ಕೆ ಜೀವ ತುಂಬಲಾರದು. ಬೇರಿನ ಹುಡುಕಾಟ ಅವಶ್ಯಕ. ಜೀವಂತ ವಾಹಿನಿಯ ಜೊತೆಗಿನ ಸಂವಹನ ಅತ್ಯಗತ್ಯ. ಅಲ್ಲಿಯೇ ಜೀವಂತಿಕೆ, ಅಲ್ಲಿಯೇ ಬಣ್ಣ, ಅಲ್ಲಿಯೇ ಸ್ವರ, ಅಲ್ಲಿಯೇ ಹುಟ್ಟು, ಅಲ್ಲಿಯೇ ಲಾಲಿ ನಗೆ. ಕಾರಣ, ಮಾಧ್ಯಮಗಳು ಭಾಷೆಯನ್ನು ಅಪಹಾಸ್ಯ ಮಾಡುವುದನ್ನು ತಡೆಗಟ್ಟಬೇಕು. ಅಶ್ಲೀಲತೆಯ ಪರಿಭಾಷೆಯ ಚೌಕಟ್ಟಿಗೆ ಕೇವಲ ಉಡುವ ವಸ್ತ್ರ, ಜೀವನದ ಥಾಟ, ಗಂಡು ಹೆಣ್ಣಿನ ದೇಹಸಂಬಂಧವಷ್ಟೇ ಸಿಲುಕುವುದಿಲ್ಲ. ಭಾಷೆಯ ಅಮಾಯಕ ಹಾಗೂ ಅಪಾರ್ಥ ಬಳಕೆ ಕೂಡ ಸಮಾಜದಲ್ಲಿ ಅಶ್ಲೀಲತೆಯನ್ನು ಸೃಷ್ಟಿಸುತ್ತದೆ. ಸಿನೇಮಾಧ್ಯಮದಲ್ಲಿ ಬಳಸುವ ಅಸಾಮಾಜಿಕ ಹಾಗೂ ಅನೈತಿಕ ಮೂಲದ ವ್ಯವಸ್ಥೆಯನ್ನು ತಡೆಗಟ್ಟಲು, ಮಾಧ್ಯಮವನ್ನು ಜನಪರ ಹಾಗೂ ಜೀವನಕ್ಕೆ ಅನುಗುಣವಾದ ರೀತಿಯಲ್ಲಿ ನಿರೂಪಿಸುವಲ್ಲಿ, ಅಂತಹದ್ದೇ ಆದ ಚಿತ್ರಗಳನ್ನು ಚಿತ್ರೀಕರಿಸುವಲ್ಲಿ, ಸಹಾಯವಾಗಿ ನಿಲ್ಲುವ, ಗುಣಮಟ್ಟ ನಿಯಂತ್ರಣ ವ್ಯವಸ್ಥೆಯಾದ ಮಾಧ್ಯಮದ ಸೆನ್ಸಾರ್ ಬೋರ್ಡು ಈ ನಿಟ್ಟಿನಲ್ಲಿಯೂ ಕೂಡ ಗಂಭೀರವಾಗಿ ಕೆಲಸ ಮಾಡಬೇಕಾಗಿದೆ. ಭಾಷೆಯ ಸೂಕ್ಷ್ಮತೆಯ ಅಧ್ಯಯನದ ಆಧಾರವಾಗಿ, ಈ ತೆರನೆಯ ಭಾಷೆಯ ಅಪಹಾಸ್ಯವನ್ನು ತಡೆಗಟ್ಟುವಲ್ಲಿ ತಮ್ಮ ಕಾರ್ಯರೂಪವನ್ನು ಪುನರ್ ರೂಪಿಸಬೇಕು. ಜೊತೆಗೆ ಕನ್ನಡ ಭಾಷೆ ಹಾಗೂ ಸಂಸ್ಕೃತಿಯ ಅಭಿವೃದ್ಧಿಗೆ ಸಂಬಂಧಿಸಿದ ಎಲ್ಲ ತೆರನೆಯ ಸರಕಾರ ಹಾಗೂ ಖಾಸಗಿ ಸಂಘ-ಸಂಸ್ಥೆಗಳು ಈ ನಿಟ್ಟಿನಲ್ಲಿ ಯೋಚಿಸಿ, ಮಾಧ್ಯಮಗಳಿಂದ ಉಂಟಾಗುವ ಈ ತರಹದ ಸಂಸ್ಕೃತಿಯ ಸೋರುವಿಕೆಯನ್ನು, ಅಪಹಾಸ್ಯವನ್ನು ತಡೆಗಟ್ಟಬೇಕು. ಈ ಚಿಂತನೆ ಹಾಗೂ ಕಾಳಜಿಯ ಮೂಲದಿಂದ ತಮ್ಮ ಕಾರ್ಯಚಟುವಟಿಕೆ ಗಳನ್ನು ರೂಪಿಸಿಕೊಳ್ಳಬೇಕು.

ಎಲ್ಲಕ್ಕಿಂತ ಮಿಗಿಲಾಗಿ, ಭಾಷಾ ಸಮುದಾಯ ದವರು, ನಾವುಗಳು, ನಮ್ಮ ಭಾಷೆಯ ದೇಸೀಯ ರೂಪವನ್ನು, ಪ್ರಾದೇಶಿಕ ಲಯವನ್ನು ಬಳಸಿ ಬೆಳೆಸಬೇಕು. ಬೇರೆ ಭಾಷೆಯ ಅನುಕರಣೆ ನಕಲಿನ ರೋಗವನ್ನು ಬಿಟ್ಟು ತಮ್ಮ ಜೀವಂತಿಕೆಯನ್ನು ಉಳಿಸಿಕೊಳ್ಳಬೇಕು. ಹೊಸ ಆಧುನಿಕ ತಂತ್ರಜ್ಞಾನ, ಸಂಪರ್ಕ-ಸಾಧನೆಗಳ ಅನ್ವಯವಾಗಿ ನೆಲದ ಭಾಷೆಯನ್ನು ಬೆಳೆಸಬೇಕು. ಪ್ರದೇಶದ ಭೌತಿಕ ಹಾಗೂ ಆರ್ಥಿಕ ಬೆಳವಣಿಗೆಗೆ ಅನುಗುಣವಾಗಿ ಭಾಷಾ ಸಂಸ್ಕೃತಿಯನ್ನೂ ಕೂಡ ಬೆಳೆಸಿಕೊಂಡು ಬರುವಲ್ಲಿ ಕಾಳಜಿ ಹೊಂದಬೇಕು. ಈ ತೆರನೆಯ ಜಾಗರೂಕ ಹಾಗೂ ಕಾಳಜಿಮನೋಭಾವ ಎಲ್ಲರಲ್ಲಿ ಮೂಡಬೇಕು. ಅದರಿಂದಾಗಿಯೇ ತಮ್ಮ ಭಾಷೆ ಉಳಿಯುವುದು, ನಮ್ಮ ಉತ್ತರ ಕರ್ನಾಟಕದ ನೆಲದ ಸಂಸ್ಕೃತಿ ಉಳಿಯುವುದು. ಇಲ್ಲದೇ ಹೋದಲ್ಲಿ ಸಿನೇಮಾಧ್ಯಮಗಳು ಟೀವಿ ಅಂತಹ ಮನೋರಂಜನಾ ಮಾಧ್ಯಮಗಳು ಬೆಳ್ಳಿ ಪರದೆಯ ಮೇಲೆ ಸೃಷ್ಟಿಸುತ್ತಿರುವ ಭಾಷೆಯ ಅಪಹಾಸ್ಯ ವಾಸ್ತವಿಕವಾದ, ಘೋರ ಅಪಹಾಸ್ಯಕ್ಕೆ ನಮ್ಮನ್ನೇ ನಾವು ತೆರೆದು ಕೊಂಡಂತಾಗಬಹುದು !!

ಡಾ|| ಪರಿಮಳಾ ಅಂಬೇಕರ್
ಉಪನ್ಯಾಸಕಿ, ಹಿಂದಿ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ,
ಗುಲಬರ್ಗಾ - ೬

## ಬಿಸಿಲ ಹನಿಗಳು

ಬೆವರ ಮಳೆಹನಿಗೆ
ಭೂ ಮೈ ಕಂಪಿಸಿ
ಕೆಂಪು ಕೆಂಪು ಕುಡಿ !

ವಿಜಯಕಾಂತ ಪಾಟೀಲ
ಚಿಕ್ಕಾಂಶಿ - ಹೊಸೂರು - ೫೮೧ ೧೦೪



# ಕುವೆಂಪು ಕನ್ನಡತದ ಕಣ್ಮಣಿ

**ಡಾ|| ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ**

ಕುವೆಂಪುರವರಿಗೆ ದೊರೆತಿದ್ದ ಗುರುಗಳು ಅಂತಿಂಥವರಲ್ಲ. ಬಿ.ಎಂ.ಶ್ರೀ., ಕೃಷ್ಣಶಾಸ್ತ್ರಿ, ಟಿ. ಎಸ್. ವೆಂಕಣ್ಣಯ್ಯ ಮೊದಲಾದವರು. ಈ ಒಬ್ಬೊಬ್ಬರೂ ವ್ಯಕ್ತಿಗಳಾಗಿ, ವಿದ್ವಾಂಸರಾಗಿ ಬಹಳ ಎತ್ತರದಲ್ಲಿದ್ದವರು. ಟಿ. ಎಸ್. ವೆಂಕಣ್ಣಯ್ಯನವರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ವಿಭಾಗದಲ್ಲಿ ಪ್ರೊಫೆಸರ್ ಆಗಿದ್ದರು. ಅವರು ಆಗಾಗ ರಾಮಕೃಷ್ಣಾಶ್ರಮಕ್ಕೆ ಹೋಗಿಬರುತ್ತಿದ್ದುದುಂಟು. ಹಾಗೆ ಹೋದಾಗಲೆಲ್ಲ ಆಶ್ರಮದಲ್ಲೇ ಇದ್ದ ಕುವೆಂಪು ಕೊಠಡಿಗೆ ಹೋಗದೆ ಅವರ ಯಾತ್ರೆ ಪೂರ್ಣವಾಗುತ್ತಿರಲಿಲ್ಲ. ಕುವೆಂಪುಗೆ ತಮ್ಮ ಗುರುಗಳಲ್ಲಿ ತುಂಬ ವಿನಯ, ಗೌರವ. ಇಷ್ಟು ದೊಡ್ಡವರು, ಹೀಗೆ ಸಾಮಾನ್ಯರೆಂಬಂತೆ ತಮ್ಮ ರೂಮಿಗೆ ಬಂದುಬಿಡುತ್ತಾರಲ್ಲ ಅಂತ ಎಲ್ಲಿಲ್ಲದ ಸಂಕೋಚ, ಮುಜುಗರ. ಕುವೆಂಪು ರೂಮಿಗೆ ಹೋದ ವೆಂಕಣ್ಣಯ್ಯನವರು ಅವರು ಬರೆದಿದ್ದ ಹೊಸ ಕವನಗಳನ್ನು ಒತ್ತಾಯ ಹಾಕಿ ತೆಗೆಸಿ, ಓದಿಸಿ ಕೇಳಿ, ಅವುಗಳನ್ನು ಅಡಿಯಿಂದ ಮುಡಿವರೆಗೆ ಪ್ರಶಂಸಿಸುತ್ತಿದ್ದರು. ಮುಂದೆ ತಾವು ತೀರಿಕೊಳ್ಳುವ ಮುಂಚೆ ಒಂಟಿಕೊಪ್ಪಲಿನಲ್ಲಿದ್ದ ಕುವೆಂಪು ಮನೆಗೂ ಒಮ್ಮೆ ಹೋಗಿದ್ದ ವೆಂಕಣ್ಣಯ್ಯನವರು ಬೆಳಗಿನಿಂದ ಸಂಜೆವರೆಗೆ ತಮ್ಮ ಕವನಗಳನ್ನು ಓದಿಸಿ, ಪಟ್ಟ ಸಂಭ್ರಮವನ್ನು ಕುವೆಂಪು ಅವರೇ ಒಂದೆಡೆ ಪ್ರಸ್ತಾಪಿಸಿದ್ದಾರೆ.

**ಕು**ವೆಂಪು ಅವರನ್ನು ಕುರಿತು ಬರೆದ ಕವನದ ಒಂದು ಭಾಗ ಇದು :

*ಯುಗದ ಕವಿಗೆ ಜಗದ ಕವಿಗೆ*  
*ಶ್ರೀ ರಾಮಾಯಣ ದರ್ಶನ -*  
*ದಿಂದಲೆ ಕೈಮುಗಿದ ಕವಿಗೆ*  
*ಮಣಿಯದವರು ಯಾರು ?*  
*ರಾಮಕೃಷ್ಣ ವಚನೋದಿತ ಪ್ರತಿಭೆ ತೆರೆದ ಕವನ ತತಿಗೆ*  
*ತಣಿಯದವರು ಯಾರು ?*  
*ಮಲೆನಾಡಿನ ಸೌಂದರ್ಯಕೆ*  
*ಕುಣಿದಾಡಿದ ಕವಿಯ ಜೊತೆಗೆ*  
*ಕುಣಿಯದವರು ಯಾರು ?*

ಕುವೆಂಪು ಅವರನ್ನು ಹೃತ್ಪೂರ್ವಕವಾಗಿ ಪ್ರಶಂಸಿಸಿರೋ ಈ ಕವನ ಬರೆದವರು ಯಾರೋ ಅಂತಿಂಥವರಲ್ಲ. ಕುವೆಂಪು ಅವರಷ್ಟೇ ಶ್ರೇಷ್ಠರಾದ ಇನ್ನೊಬ್ಬ ವರಕವಿ ಬೇಂದ್ರೆ. ಕುವೆಂಪು ಅವರಿಗೆ ದೊರೆತ ಪ್ರಶಸ್ತಿಗಳಲ್ಲೆಲ್ಲ ಬಹುಶಃ ಇದರಷ್ಟು ಅಮೂಲ್ಯವಾದದ್ದು ಇನ್ನೊಂದಿಲ್ಲ.

ಕುವೆಂಪು ಮಹಾಪ್ರತಿಭಾವಂತರು, ಸತತ ಸಾಧನೆ ಮಾಡಿದವರು, ಮಾತ್ರ ಅಲ್ಲ, ಬಹಳ ಅದೃಷ್ಟವಂತರು ಕೂಡ. ತಮ್ಮ ಪಾಲಿನ ದೈವ ತಮಗೇ ತಿಳಿಯದ ಹಾಗೆ ಎಷ್ಟೋ ಸಂದರ್ಭಗಳಲ್ಲಿ ಕಾವಲಾಗಿ ನಿಂತು ತಮ್ಮನ್ನು ರಕ್ಷಿಸಿತು ಅನ್ನೋದನ್ನ ಅವರೇ ಹೇಳಿಕೊಂಡಿರೋದು ಉಂಟು. ಇದು ಅಂಥ ಒಂದು ಘಟನೆ.

ಓದುವ ಸಲುವಾಗಿ ಕುವೆಂಪು ತಮ್ಮ ಊರು ಬಿಟ್ಟು ಬಂದು ಮೈಸೂರಲ್ಲಿ ಹೈಸ್ಕೂಲು ಸೇರಿದ್ದರು. ಅವರು ವಾಸವಾಗಿದ್ದದ್ದು ಸಂತೇಪೇಟೆಯ ಒಂದು ಬಾಡಿಗೆ ರೂಮಿನಲ್ಲಿ. ಆಗಾಗ ರಾಮಕೃಷ್ಣಾಶ್ರಮಕ್ಕೆ ಹೋಗಿ ಬರೋದು ಅವರ ಅಭ್ಯಾಸ. ಒಮ್ಮೆ ಒಟ್ಟಿಗೇ ಕೆಲವು ದಿನ ಅವರು ಆಶ್ರಮಕ್ಕೆ ಹೋಗಲಿಲ್ಲ. ಇದು ಆಶ್ರಮದ ಅಧ್ಯಕ್ಷರಾಗಿದ್ದ ಸಿದ್ಧೇಶ್ವರಾನಂದರ ಗಮನಕ್ಕೆ ಬಂತು. ಕೂಡಲೇ ಅವರು ಆಶ್ರಮಕ್ಕೆ ಬರ್ತಾ ಇದ್ದ ಇನ್ನೊಬ್ಬ ಹುಡುಗ ನಾ. ಕಸ್ತೂರಿಯನ್ನು ಕರೆದು ''ನೋಡು ಕಸ್ತೂರಿ, ಪುಟ್ಟಪ್ಪ ಅಂತ ಒಬ್ಬ ಹುಡುಗ ತಪ್ಪದೆ ಇಲ್ಲಿಗೆ ಬರ್ತಿದ್ದನಲ್ಲ, ಅವನು ಯಾಕೋ ನಾಲ್ಕಾರು ದಿನದಿಂದ ಆಶ್ರಮಕ್ಕೆ ಬರ್ತಿಲ್ಲ. ಅವನು ಎಲ್ಲಿದ್ದಾನೆ, ಯಾಕೆ ಬರ್ತಿಲ್ಲ ಅಂತ ತಿಳಕೊಂಡು ಬಾ'' ಅಂತ ಕೆಲಸ ಹಚ್ಚಿದರು. ನಾ. ಕಸ್ತೂರಿ ಆಗ ಸ್ಕೌಟ್‌ನಲ್ಲಿ ಒಬ್ಬ ಪೆಟ್ರೋಲ್ ಲೀಡರ್. ಅವರ ಬೆನ್ನಿಗೆ ಸದಾ ಐದಾರು ಹುಡುಗರು. ಕಸ್ತೂರಿ ಆ ಬಂಟರನ್ನು ಕಟ್ಟಿಕೊಂಡು ಎಲ್ಲ ಕಡೆ ಅಲೆದು ಪುಟ್ಟಪ್ಪನವರ ರೂಮು ಪತ್ತೆ ಮಾಡಿದರು. ಅಲ್ಲಿ ನೋಡಿದರೆ ಹುಡುಗ ಸುಡು ಜ್ವರದಲ್ಲಿ ಮಲಗಿದಾನೆ; ನೋಡಿಕೊಳ್ಳುವವರು ಯಾರೂ ಇಲ್ಲ. ಸಿದ್ಧೇಶ್ವರಾನಂದರಿಗೆ ಈ ವಿಷಯ ತಿಳಿಯಿತು. ಅವರು ಕೂಡಲೇ ಪುಟ್ಟಪ್ಪನವರನ್ನು ಬಲಾತ್ಕಾರ ಮಾಡಿ ಆಸ್ಪತ್ರೆಗೆ ಸೇರಿಸಿದರು. ಗುಣವಾದ ಮೇಲೆ ಅವರನ್ನು ರಾಮಕೃಷ್ಣಾಶ್ರಮಕ್ಕೇ ಕರೆದುಕೊಂಡು ಹೋಗಿಬಿಟ್ಟರು. ಪುಟ್ಟಪ್ಪನವರು ರಾಮಕೃಷ್ಣಾಶ್ರಮದ ಪೂರ್ಣ ತೆಕ್ಕೆಗೆ ಒಳಗಾದ್ದು ಹೀಗೆ. ಮುಂದೆ ತಮ್ಮ ವಿವಾಹವಾಗೋವರೆಗೆ ಅವರು ಅಲ್ಲೇ ಇದ್ದುಬಿಟ್ಟರು. ಆಶ್ರಮದ ಶಾಂತ ವಾತಾವರಣ, ಲೈಬ್ರರಿ, ಸ್ವಾಮೀಜಿಯವರ ಸಹವಾಸ ಇವೆಲ್ಲ ಬೆಳೀತಾ ಇದ್ದ ಬಾಲಕನ ವ್ಯಕ್ತಿತ್ವದ ಮೇಲೆ ಗಾಢ ಪ್ರಭಾವ ಮಾಡಿದುವು. ಅಲ್ಲಿ ಲಭ್ಯವಾದ ಪರಮಹಂಸರ ಚಿಂತನೆಗಳು, ವಿವೇಕಾನಂದರ ಉಜ್ವಲ ಬರೆಹಗಳು ಪುಟ್ಟಪ್ಪನವರಿಗೆ ಹೊಸ ಜನ್ಮವನ್ನೇ ಕೊಟ್ಟವು. ಕುವೆಂಪು ತಮ್ಮ ರಾಮಾಯಣ ದರ್ಶನದಲ್ಲಿ



ಕೌಸಲ್ಯೆಯ ನಂದನಂ ದೇವಕಿಯ ಕಂದನುಂ  
ತಾವೊಂದೆ ಮೈಯೊಳಿಂದವತಾರಮೆತ್ತಿದಾ  
ಶ್ರೀರಾಮಕೃಷ್ಣ ಭಗವತ್ ಗೋತ್ರ ಸಂಜಾತನ್ ನಾನ್

ಎಂದು ತಮ್ಮನ್ನು ಕರೆದುಕೊಂಡಿದ್ದಾರೆ. ಕೌಸಲ್ಯೆಯ ಮಗನಾದ ರಾಮ, ದೇವಕಿಯ ಮಗನಾದ ಕೃಷ್ಣ ಇಬ್ಬರೂ ಒಟ್ಟಾಗಿ ಒಂದೆ ಮೈಯಲ್ಲಿ ರಾಮಕೃಷ್ಣ ಪರಮಹಂಸರಾಗಿ ಅವತರಿಸಿದರು. ಆ ರಾಮಕೃಷ್ಣ

ಋಷಿಯ ಗೋತ್ರದಲ್ಲಿ ಬಂದವನು ನಾನು ಅನ್ನುವುದು ಆ ಮಾತಿನ ಅರ್ಥ. ಇಂಥ ಸೌಭಾಗ್ಯಕರವಾದ ಪ್ರಭಾವ ಅವರಿಗೆ ದೊರೆತದ್ದು ಒಂದು ಬೇನೆಯ ಕಾರಣದಿಂದ. ತತ್ಕಾಲಕ್ಕೆ ನಮ್ಮ ದೃಷ್ಟಿಗೆ ಕೇಡುಗಳಾಗಿ ಕಾಣುವ ಕೆಲವು ಘಟನೆಗಳು ಮುಂದೆ ನಮ್ಮ ಶ್ರೇಯಸ್ಸಿಗೆ ಕಾರಣವಾಗುವುದೂ ಉಂಟು. ಕುವೆಂಪುವೇ ಒಂದು ಕಡೆ ಹೇಳ್ತಾರೆ: "ಇಂದಿನ ಅನರ್ಥಮೆಯೆ ತೊಟ್ಟಿಲಾಗದೆ ಮುಂದಣಭ್ಯುದಯ ಶಿಶುಗೆ?"

ಪುಟ್ಟಪ್ಪನವರು ಮಹಾರಾಜ ಕಾಲೇಜಿನಲ್ಲಿ ಬಿ.ಎ. ಮುಗಿಸಿದರು. ಮುಂದೆ ತತ್ವಶಾಸ್ತ್ರದ ಎಂ.ಎ.ಗೆ ಸೇರುವುದು ಅಂತ ತೀರ್ಮಾನಿಸಿದರು. ಆ ಕಾಲದಲ್ಲಿ ಬಹಳ ಮೇಧಾವಿಗಳಾದ ವಿದ್ಯಾರ್ಥಿಗಳು ತತ್ವಶಾಸ್ತ್ರದ ಅಧ್ಯಯನ ಮಾಡೋದು ಒಂದು ಅಗ್ಗಳಿಕೆಯ ವಿಷಯ ಆಗಿತ್ತು. ಅಲ್ಲದೆ ಪ್ರೊ|| ವಾಡಿಯಾರಂಥ ಅಂತರರಾಷ್ಟ್ರೀಯ ಖ್ಯಾತಿಯ ಅಧ್ಯಾಪಕರು ಆಗ ತತ್ವಶಾಸ್ತ್ರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದರು. ಅವರ ಶಿಷ್ಯರಾಗಿ ಅಧ್ಯಯನ ಮಾಡುವುದು ಒಂದು ಹೆಮ್ಮೆಯ ಸಂಗತಿಯಾಗಿತ್ತು. ಆ ತರಗತಿಗೆ ಸೇರೋದಕ್ಕೆ ಪುಟ್ಟಪ್ಪ ಬೇರೆ ವಿದ್ಯಾರ್ಥಿಗಳ ಜೊತೆ ಹೋಗಿದ್ದಾರೆ. ಆ ಹೊತ್ತಿಗೆ ಅಲ್ಲಿ ಕನ್ನಡದ ಅಧ್ಯಾಪಕರಾಗಿದ್ದ ಎ. ಆರ್. ಕೃಷ್ಣಶಾಸ್ತ್ರಿಗಳು ಪುಟ್ಟಪ್ಪನವರಿಗೆ ಹೇಳಿಕಳಿಸಿದರು. ಅವರನ್ನು ಕಾಣಲು ಹೋದಾಗ ಕೃಷ್ಣಶಾಸ್ತ್ರಿಗಳು ಪುಟ್ಟಪ್ಪನವರನ್ನು ಕೇಳಿದರು :

"ಎಂ.ಎ.ಗೆ ಅಪ್ಲಿಕೇಷನ್ ಹಾಕಿದೀರಾ ಪುಟ್ಟಪ್ಪ?"

"ಹೌದು ಸಾರ್, ಹಾಕಿದೇನೆ."

"ಯಾವ ಎಂ.ಎ.ಗೆ ಹಾಕಿದೀರಿ?"

"ಫಿಲಾಸಫಿಗೆ."

"ಈ ವರ್ಷದಿಂದ ಕನ್ನಡ ಎಂ.ಎ. ಆರಂಭ ಆಗತ್ತೆ. ನೀವು ಕನ್ನಡ ಎಂ.ಎ.ಗೆ ಯಾಕೆ ಬರಬಾರ್ದು?"

"ಫಿಲಾಸಫಿಗೆ ಹಾಕಿಬಿಟ್ಟಿದ್ದೇನೆ. ನನಗೆ ಸೀಟೂ ಕೊಟ್ಟಿದ್ದಾರೆ."

"ಫಿಲಾಸಫಿ ಏನಪ್ಪಾ. ನೀವೇ ಅದನ್ನು ಓದಿಕೊಳ್ಳೋ ಸಾಮರ್ಥ್ಯ ಪಡೆದಿದ್ದೀರಿ. ಹೇಗಿದ್ದರೂ ಆಶ್ರಮದಲ್ಲಿ ಇದೀರಿ. ಅಲ್ಲಿ ಮೂರು ಹೊತ್ತೂ ಅದೇ ತಾನೆ? ನೀವು ಒಳ್ಳೆಯ ಕವಿಗಳು. ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸೋ ಶಕ್ತಿ ಇರುವವರು. ನಿಮ್ಮ ಅಗತ್ಯ ಇರೋದು ಫಿಲಾಸಫಿಗಿಂತ ಹೆಚ್ಚು ಕನ್ನಡಕ್ಕೆ. ನಮಗೆ ನಿಮ್ಮಂಥ ಪ್ರತಿಭಾವಂತ ವಿದ್ಯಾರ್ಥಿಗಳೇ ಬೇಕಪ್ಪಾ."

ಮುಂದೆ ಅದೇನಾಯಿತೋ! ಫಿಲಾಸಫಿ ತೆಗೆದುಕೊಳ್ಳುವ ಪುಟ್ಟಪ್ಪನವರ ನಿರ್ಧಾರ ಕರಗಿಹೋಯಿತು. ಅವರು ಕನ್ನಡ ಎಂ.ಎ. ಸೇರಿಬಿಟ್ಟರು. ಆಗ ಅದು ಒಂದು ಸಾಧಾರಣ ಘಟನೆಯಾಗಿ ಕಂಡರೂ ಅದು ತಮ್ಮ ಜೀವನದ ಮಹತ್ವದ ಪ್ರಸಂಗವಾಯಿತು ಅನ್ನೋದನ್ನ ಮುಂದೆ ಕುವೆಂಪು ಕಂಡುಕೊಂಡರು. ಪಂಪ, ರನ್ನ, ನಾಗವರ್ಮ, ಜನ್ನ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶರಂಥ ಶ್ರೇಷ್ಠ ಕವಿಗಳ ಅಧ್ಯಯನ ಮಾಡದೆ ಇದ್ದಿದ್ದರೆ, ಕನ್ನಡ ಅಧ್ಯಾಪಕರಾಗಿ ಪಾಠ ಹೇಳದೆ ಇದ್ದಿದ್ದರೆ ರಾಮಾಯಣದರ್ಶನದಂಥ ಕೃತಿಯನ್ನು ಬರೆಯೋದಕ್ಕೆ ಬೇಕಾದ ಶಬ್ದ ಸಂಪತ್ತು, ಶೈಲಿಗಳು ಅವರಿಗೆ ಖಂಡಿತವಾಗಿ ಸಿದ್ಧಿಸ್ತಾ ಇರಲಿಲ್ಲ.




ಮುಂದೆ ಕೃಷ್ಣಶಾಸ್ತ್ರಿಗಳ ಬಗ್ಗೆ ಕೃತಜ್ಞತೆ ಹೇಳುತ್ತ ಕುವೆಂಪು ಅವರೇ ಈ ಮಾತನ್ನು ಹೇಳಿದ್ದಾರೆ. ಫಿಲಾಸಫಿಗೆ ಸೇರಲು ಹೋಗಿ ದಾರಿ ತಪ್ಪುತ್ತಿದ್ದ ತಮ್ಮನ್ನು ಕನ್ನಡ ಸಾಹಿತ್ಯಕ್ಕೆ ಕರೆತಂದದ್ದು ಕೃಷ್ಣಶಾಸ್ತ್ರಿಗಳಲ್ಲ, ಅವರ ರೂಪದಲ್ಲಿದ್ದ ಕನ್ನಡ ಶಾರದೆ ಎಂದು ಕುವೆಂಪು ಭಾವುಕರಾಗಿ ಹೇಳಿದ್ದಿದೆ.

ಪ್ರೊ|| ಬಿ. ಎಂ. ಶ್ರೀಕಂಠಯ್ಯನವರು ಆ ಕಾಲದ ಪ್ರಸಿದ್ಧ ಇಂಗ್ಲಿಷ್ ಪ್ರಾಧ್ಯಾಪಕರಲ್ಲಿ ಒಬ್ಬರು. ಅವರು ಕನ್ನಡದ ಗೌರವ ಪ್ರಾಧ್ಯಾಪಕರೂ ಆಗಿದ್ದರು. ಕನ್ನಡಕ್ಕಾಗಿ ಹಗಲಿರುಳೂ ದುಡಿದು ಕನ್ನಡದ ಕಣ್ವ ಎಂದು ಕರೆಸಿಕೊಂಡಿದ್ದ ಅವರು ಕುವೆಂಪುಗೂ ಗುರುಗಳಾಗಿದ್ದವರು. ಒಮ್ಮೆ ಅವರು ತುಂಬಿದ ಸಾಹಿತ್ಯ ಸಭೆಯೊಂದರಲ್ಲಿ ಮಾತನಾಡ್ತಿದ್ದಾರೆ. ಕನ್ನಡದಲ್ಲಿ ಎಂಥ ಉತ್ತಮೋತ್ತಮ ಸಾಹಿತ್ಯ ಸೃಷ್ಟಿಯಾಗ್ತಾ ಇದೆ ಅಂತ ಹೇಳುತ್ತ ಅವರು ಹಠಾತ್ತನೆ, ಸಭೆಯಲ್ಲಿ ಕೂತಿದ್ದ ಯುವಕ ಕುವೆಂಪು ಕಡೆ ಎಲ್ಲರ ಗಮನ ಸೆಳೆಯುತ್ತ ಹೇಳಿದರು :

"ರೌರವನರಕ ಅಂತ ಒಂದು ನರಕ ಇದೆ ಅಂತ ಹೇಳ್ತಾರಪ್ಪ. ಅಂಥದೊಂದು ನರಕ ಇದೆಯೋ ಇಲ್ಲವೋ ನಮಗೆ ತಿಳೀದು. ಅದು ಇರುವುದೇ ಆದಲ್ಲಿ ಆ ನರಕಕ್ಕೆ ಹೋಗೋ ಕನ್ನಡಿಗರು ಬೇರೆ ಯಾರೂ ಅಲ್ಲ. ಈ ಪುಟ್ಟಪ್ಪ ನವರ ಕವಿತೆಗಳನ್ನು ಓದದೇ ಇರೋ ಕನ್ನಡಿಗರು."

ಈ ಮಾತಿಗೆ ಸಭೆಯಲ್ಲಿ ಭಾರೀ ಹರ್ಷೋದ್ಗಾರ ಎದ್ದಿತು. ಬೇರೆ ಸಭಿಕರ ಮಧ್ಯೆ ಕೂತಿದ್ದ ಕುವೆಂಪು ಈ ಅನಿರೀಕ್ಷಿತ ಪ್ರಶಂಸೆಯಿಂದ ನಾಚಿ ನೀರಾಗಿ ಹೋಗಿದ್ದರು.

ಕುವೆಂಪುರವರಿಗೆ ದೊರೆತಿದ್ದ ಗುರುಗಳು ಅಂತಿಂಥವರಲ್ಲ. ಬಿ.ಎಂ.ಶ್ರೀ., ಕೃಷ್ಣಶಾಸ್ತ್ರಿ, ಟಿ. ಎಸ್. ವೆಂಕಣ್ಣಯ್ಯ ಮೊದಲಾದವರು. ಈ ಒಬ್ಬೊಬ್ಬರೂ ವ್ಯಕ್ತಿಗಳಾಗಿ, ವಿದ್ವಾಂಸರಾಗಿ ಬಹಳ ಎತ್ತರದಲ್ಲಿದ್ದವರು.

ಟಿ. ಎಸ್. ವೆಂಕಣ್ಣಯ್ಯನವರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ವಿಭಾಗದಲ್ಲಿ ಪ್ರೊಫೆಸರ್ ಆಗಿದ್ದರು. ಅವರು ಆಗಾಗ ರಾಮಕೃಷ್ಣಾಶ್ರಮಕ್ಕೆ ಹೋಗಿ ಬರುತ್ತಿದ್ದುದುಂಟು. ಹಾಗೆ ಹೋದಾಗಲೆಲ್ಲ ಆಶ್ರಮದಲ್ಲೇ ಇದ್ದ ಕುವೆಂಪು ಕೊಠಡಿಗೆ ಹೋಗದೆ ಅವರ ಯಾತ್ರೆ ಪೂರ್ಣವಾಗುತ್ತಿರಲಿಲ್ಲ. ಕುವೆಂಪುಗೆ ತಮ್ಮ ಗುರುಗಳಲ್ಲಿ ತುಂಬ ವಿನಯ, ಗೌರವ. ಇಷ್ಟು ದೊಡ್ಡವರು, ಹೀಗೆ ಸಾಮಾನ್ಯರೆಂಬಂತೆ ತಮ್ಮ ರೂಮಿಗೆ ಬಂದುಬಿಡುತ್ತಾರಲ್ಲ ಅಂತ ಎಲ್ಲಿಲ್ಲದ ಸಂಕೋಚ, ಮುಜುಗರ. ಕುವೆಂಪು ರೂಮಿಗೆ ಹೋದ ವೆಂಕಣ್ಣಯ್ಯನವರು ಅವರು ಬರೆದಿದ್ದ ಹೊಸ ಕವನಗಳನ್ನು ಒತ್ತಾಯ ಹಾಕಿ ತೆಗೆಸಿ, ಓದಿಸಿ ಕೇಳಿ, ಅವುಗಳನ್ನು ಅಡಿಯಿಂದ ಮುಡಿವರೆಗೆ ಪ್ರಶಂಸಿಸುತ್ತಿದ್ದರು. ಮುಂದೆ ತಾವು ತೀರಿಕೊಳ್ಳುವ ಮುಂಚೆ ಒಂಟಿಕೊಪ್ಪಲಿನಲ್ಲಿದ್ದ ಕುವೆಂಪು ಮನೆಗೂ ಒಮ್ಮೆ ಹೋಗಿದ್ದ ವೆಂಕಣ್ಣಯ್ಯನವರು ಬೆಳಗಿನಿಂದ ಸಂಜೆಯವರೆಗೆ ತಮ್ಮ ಕವನಗಳನ್ನು ಓದಿಸಿ, ಪಟ್ಟ ಸಂಭ್ರಮವನ್ನು ಕುವೆಂಪು ಅವರೇ ಒಂದೆಡೆ ಪ್ರಸ್ತಾಪಿಸಿದ್ದಾರೆ. ಕವನ ವಾಚನದ ಸಭೆಗಳಲ್ಲಿಯೂ ಅಷ್ಟೆ. ವೆಂಕಣ್ಣಯ್ಯನವರಿದ್ದರೆ ಸಾಕು ಕುವೆಂಪು ಭಾವಪರವಶರಾಗಿಬಿಡುತ್ತಿದ್ದರು. "ನನಗಂತೂ ಅವರೊಬ್ಬರ ಸಾನ್ನಿಧ್ಯವೇ ಉಳಿದ ಸಾವಿರಾರು ಮಂದಿಯ ಇರುವಿಕೆಯನ್ನು ನುಂಗಿ ನಿಂತಂತೆ ಆಗುತ್ತಿತ್ತು; ಅವರೊಬ್ಬರಿಗಾಗಿಯೇ ಗಂಟೆಗಟ್ಟಲೆ ಬೇಕಾದರೂ ಕವನ ವಾಚನ ಮಾಡುವ ಹುಮ್ಮಸ್ಸು ಉಂಟಾಗುತ್ತಿತ್ತು. ಅವರು ಅಂಥ ಸಹೃದಯ ವರೇಣ್ಯರಾಗಿದ್ದರು" ಎಂದು ಕುವೆಂಪುವೇ ಹೇಳಿದ್ದಿದೆ. ಪುಟ್ಟಪ್ಪನವರ 'ಮಲೆನಾಡಿನ ಚಿತ್ರಗಳು' ಎಂಬ ಸುಂದರ ಪ್ರಬಂಧ ಸಂಕಲನ ರಚನೆಯಾಗಲು ವೆಂಕಣ್ಣಯ್ಯನವರೇ ಮುಖ್ಯ ಪ್ರೇರಣೆ.

ವಿಶೇಷ ಪ್ರತಿಭೆ, ನಿರಂತರ ಸಾಧನೆ, ಶ್ರೇಷ್ಠ ಶ್ರೀರಕ್ಷೆ ಇವುಗಳ ಬಲದಿಂದ ಬೆಳೆದ ಕುವೆಂಪು ಕನ್ನಡದ ಸರ್ವಕಾಲದ ಶ್ರೇಷ್ಠ ಸಾಹಿತಿಗಳಲ್ಲಿ ಒಬ್ಬರಾಗಿದ್ದಾರೆ. ಕನ್ನಡದ ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿಯೂ ಅವರು ಕೃಷಿ ಮಾಡಿದರು. ಕೆಲವು ಪ್ರಕಾರಗಳಲ್ಲಿ ಉತ್ಕೃಷ್ಟವಾದ ಬೆಳೆ ತೆಗೆದರು. ಅವರ ಲಕ್ಷ್ಯ ವಿಶೇಷವಾಗಿ ಹರಿದದ್ದು ಕಾವ್ಯಕ್ಷೇತ್ರದಲ್ಲಿ. ನವಿಲು, ಕೊಳಲು, ಪಾಂಚಜನ್ಯ, ಕಲಾಸುಂದರಿ, ಅಗ್ನಿಹಂಸ, ಕೋಗಿಲೆ ಮತ್ತು ಸೋವಿಯೆಟ್ ರಷ್ಯಾ, ಪಕ್ಷಿಕಾಶಿ ಮೊದಲಾದ ಅನೇಕ ಭಾವಗೀತ ಸಂಗ್ರಹಗಳನ್ನೇ ಅಲ್ಲದೆ 'ಚಿತ್ರಾಂಗದಾ'ದಂಥ ಖಂಡಕಾವ್ಯವನ್ನು ಮತ್ತು 'ಶ್ರೀ ರಾಮಾಯಣ ದರ್ಶನಂ'ನಂಥ ಮಹಾಕಾವ್ಯವನ್ನು ಅವರು ರಚಿಸಿದ್ದಾರೆ. ಬಾ ಫಾಲ್ಗುಣ ರವಿದರ್ಶನಕೆ, ದೇವರು ರುಜು ಮಾಡಿದನು, ಗಗನಗುರು, ಪಟ್ಟಣದಲ್ಲಿ ಹೊರಸುಹಕ್ಕಿ, ಮುಂಗಾರು, ಹೋಗುವೆನು ನಾ, ಕೋಗಿಲೆ ಮತ್ತು ಸೋವಿಯೆಟ್ ರಷ್ಯಾ, ಒಂದು ಸಣ್ಣ ಹಕ್ಕಿಗೆ ಮೊದಲಾದುವು ಅವರ ತುಂಬ ಸುಂದರವಾದ ಭಾವಗೀತೆಗಳು.

ಕುವೆಂಪು ಕಾವ್ಯ 'ಸೌಂದರ್ಯ' 'ಸತ್ಯ' 'ಶಿವ' ಗಳ ಕಲ್ಪನೆಯನ್ನು ಶ್ರುತಿಯಾಗಿಟ್ಟುಕೊಂಡು ಸೃಷ್ಟಿಯಾದದ್ದು.

ಆನಂದಮಯ ಈ ಜಗಹೃದಯ
ಏತಕೆ ಭಯ ಮಾಣೊ
ಸೂರ್ಯೋದಯ ಚಂದ್ರೋದಯ
ದೇವರ ದಯ ಕಾಣೊ
ರವಿವದನವೆ ಶಿವಸದನವೊ
ಬರಿ ಕಣ್ಣದು ಮಣ್ಣೊ
ಶಿವನಿಲ್ಲದೆ ಸೌಂದರ್ಯವೆ
ಶವಮುಖದಾ ಕಣ್ಣೋ!

ಎಂಬ ಶ್ರದ್ಧೆಯಿಂದ ಬರೆದ ಕವಿ ಅವರು. ಋಷಿ ಮಾತ್ರನೇ ಸೃಷ್ಟಿಸುವ ಕವಿಯಾಗಬಲ್ಲ ಎಂಬ ನಂಬಿಕೆಯಲ್ಲಿ ಕುವೆಂಪು ತಮ್ಮ ಬದುಕು, ಕಾವ್ಯ ಎರಡನ್ನೂ ರೂಪಿಸಿಕೊಂಡವರು. ನೆನೆದರೂ ಸಾಕು ನಮ್ಮ ಭಾವನೆ ಕಲ್ಪನೆಗಳೆಲ್ಲ ತತ್ತರಿಸಿಹೋಗುವಂಥ ಈ ಅನಂತವಿಶ್ವ ಮಹಾಪ್ರಜ್ಞೆಯೊಂದರ ಸೋದ್ದಿಶ್ಯ ಸೃಷ್ಟಿ ಎನ್ನುವುದು ಅವರ ದೃಢಭಾವನೆ. 'ದೇವರು ರುಜು ಮಾಡಿದನು' ಎಂಬ ಕವಿತೆ ಕುವೆಂಪು ಕಾವ್ಯದ ಬೆನ್ನಿಗಿರುವ ಒಟ್ಟು ನಿಲುವನ್ನು ಧ್ವನಿಸುವ ಒಂದು ಮಹತ್ವದ ಕವಿತೆ. ಆ ಕವಿತೆಯ ವಸ್ತು ಹೀಗಿದೆ.

ಭವ್ಯವಾದ ದಟ್ಟ ವನವೊಂದರ ನಡುವೆ, ಜುಳು ಜುಳು ಹರಿಯುವ ಸುಂದರ ತುಂಗೆಯ ದಡದ ಮೇಲೆ ಕವಿ ನಿಂತಿದ್ದಾರೆ. ಎತ್ತರದ ಸಹ್ಯಾದ್ರಿ ಪರ್ವತಶ್ರೇಣಿ ಕಣ್ಣು ಸೆಳೆಯುತ್ತಿದೆ. ಪಕ್ಷಿಗಳ ಮನೋಹರ ಧ್ವನಿ ಕಿವಿ ತುಂಬುತ್ತಿದೆ. ಇಡೀ ಸೃಷ್ಟಿಯ ಮೇಲೆ ಅದನ್ನು ಹರಸಿದಂತೆ ಹೂಬಿಸಿಲು ಬಿದ್ದಿದೆ. ಕವಿ 'ಈ ಭವ್ಯದೃಶ್ಯದಿಂದ ರೋಮಾಂಚಿತರಾಗಿದ್ದಾರೆ. ಇಂಥ ಅದ್ಭುತ ದೃಶ್ಯವನ್ನು ನಿರ್ಮಿಸಿದ ಶಕ್ತಿ ಯಾವುದು ಎಂಬ ಬೆರಗಿನಲ್ಲಿ ನಿಂತಿರುವ ಕವಿಯ ಎದುರಿಗೆ ಆಕಾಶದ ನೀಲಿ ಹಾಳೆಯಲ್ಲಿ ಬಿಳಿಹಕ್ಕಿಗಳ ಹಿಂಡೊಂದು ಆಕರ್ಷಕವಾದ ವಿನ್ಯಾಸ ದಲ್ಲಿ ತೇಲಿಹೋಗುತ್ತದೆ. ಭಾವಪರವಶರಾದ ಕವಿಯ ಕಣ್ಣಿಗೆ ಅದು ಭಗವತ್ ಶಕ್ತಿ ತನ್ನ ವಿಶ್ವ ಕವಿತೆಯ ಅಡಿಗೆ ಹಾಕಿದ ರುಜುವಿನಂತೆ ಭಾಸವಾಗುತ್ತದೆ ; ಈ ವಿಶ್ವವನ್ನು ರಚಿಸಿದವನು ನಾನು, ಇದು ನನ್ನದೇ ಎಂದು ಭಗವಂತ ಸಾರುತ್ತಿರುವಂತೆ ತೋರುತ್ತದೆ. ನಿರ್ಮಲ ಸೌಂದರ್ಯವೇ ಶಿವ ಎನ್ನುವುದನ್ನೂ ಮತ್ತು ಈ ಅನುಪಮ ಸೃಷ್ಟಿಯ ಹಿಂದೆ ಭಗವಂತನಿದ್ದಾನೆ ಎನ್ನುವು ದನ್ನೂ ಈ ಕವಿತೆ ಮನೋಹರವಾಗಿ ಧ್ವನಿಸುತ್ತದೆ.

ಕುವೆಂಪು ಕವಿತೆಗಳ ವಸ್ತುಗಳಲ್ಲಿ ಪ್ರಧಾನವಾದದ್ದು ನಿಸರ್ಗದ ಸೌಂದರ್ಯ ಮತ್ತು ಅದರ ಹಿಂದಿರುವ ಅಗಾಧ ವಿಶ್ವಚೈತನ್ಯದ ಚಿಂತನೆ. ಇಂಗ್ಲಿಷ್ ಸಾಹಿತ್ಯದ ಶ್ರೇಷ್ಠ ಕವಿಗಳಲ್ಲಿ ಒಬ್ಬನಾದ ವರ್ಡ್ಸ್‌ವರ್ತ್ ತನ್ನ ನಿಸರ್ಗ ಪ್ರೇಮದ ಫಲವಾಗಿ 'Nature Poet' ಎಂದು ಕರೆಸಿಕೊಂಡಂತೆ ಕುವೆಂಪು ಪ್ರಕೃತಿ ಕವಿ ಎಂದು ಪ್ರಸಿದ್ಧರಾಗಿದ್ದಾರೆ. ಅವರ ದೃಷ್ಟಿಯಲ್ಲಿ ನಿಸರ್ಗ ಜಡವಸ್ತು ಅಲ್ಲವೇ ಅಲ್ಲ. ತೋರಿಕೆಗೆ ಜಡವಾಗಿ ಕಂಡರೂ ಅದರ ಅಂತರಂಗ ಚೈತನ್ಯಮಯವಾದ್ದು. "ಚೇತನಮೂರ್ತಿಯು ಆ ಕಲ್ಲು/ತೆಗೆ ಜಡವೆಂಬುದೆ ಬರಿ ಸುಳ್ಳು" ಎನ್ನುವುದು ಅವರ ನಿಲುವು. "ನನ್ನ ಕೈಯಲ್ಲಿರುವ ಕಲ್ಲಿಗೆ ಬಗೆಗೆ ಸಿಲುಕದ ಮನಸಿದೆ/ ನಿದ್ದೆಗೈದ ಇದರಂತರಂಗದಿ ಹಾವಿನಂತಹ ಕನಸಿದೆ" ಎಂದು ಸಾರಿದವರು ಅವರು. ನದಿ ದಂಡೆಯೊಂದರ ಮೇಲೆ ನಿಂತ ಕುವೆಂಪು ಸುತ್ತಲ ನಿಸರ್ಗವನ್ನು ಹೀಗೆ ವರ್ಣಿಸುತ್ತಾರೆ: ಹೊಳೆ ದಡದಲ್ಲಿರುವ ಬಿಳಿ ಮರಳರಾಶಿ, ಅದರ ಮೇಲೆ ಸುರಿದಿರುವ ಒಣಗಿದ ಎಲೆಗಳ ರಾಶಿ, ನರ್ತಿಸುತ್ತ ಸಾಗಿರುವ ಹೊಳೆಯ ನೀಲಿ ಜಲರಾಶಿ, ಮೇಲೆ ಮೂಕಸಾಕ್ಷಿಯಂತೆ ಎಲ್ಲವನ್ನೂ ಮೌನವಾಗಿ ನೋಡ್ತಾ ಇರುವ ನೀಲಿ ಆಕಾಶ – ಇದೆಲ್ಲ ಖಂಡಿತ ಜಡವಲ್ಲ, ನಿಸರ್ಗ ಎನ್ನುವ ಈಶ್ವರ ಶರೀರದ ಅವಯವಗಳು. ಬ್ರಹ್ಮವೆಂಬ ಮಹಾಪ್ರಜ್ಞಾಸಾಗರದ ತರಂಗಗಳು –

ಈ ಬಿಳಿಮಳಲರಾಶಿ, ವನಪರ್ಣದಾರಾಶಿ
ನರ್ತಿಸುತ ಪ್ರವಹಿಸುವ ನೀಲಾಭ ಜಲರಾಶಿ
ನೀಲ ನೀರವ ಶಕುನದಂತಿರುವ ಆಕಾಶ
ಎಲ್ಲವೂ ನನ್ನ ದೃಷ್ಟಿಗೆ ಆತ್ಮದಾವೇಶ ಭಾವಗಳು
ಜಡವಲ್ಲ, ಸ್ಥೂಲ ವಸ್ತುಗಳಲ್ಲ
ಈಶ್ವರ ಶರೀರದಲಿ ಚಿನ್ಮಯ ಮಹಾಂಗಗಳು
ಬ್ರಹ್ಮದ ಮಹಾಚಿತ್ತ ಶರಧಿಯ ತರಂಗಗಳು
ನಾನುಸಿರೆಳೆಯೆ ಮೋಡದಲಿ ಶ್ವಾಸವಾಡುವುದು.

ಇಡೀ ವಿಶ್ವ ಒಂದೇ ಚೈತನ್ಯದ ಆವಿರ್ಭಾವ ಎನ್ನೋ ಅದ್ವೈತದ ಈ ಅದ್ಭುತ ವ್ಯಾಖ್ಯಾನ ಹೀಗೆ ಕಾವ್ಯಾತ್ಮಕ ವಾಗಿ ಮೂಡಿರುವುದು ಕುವೆಂಪು ಅವರಲ್ಲಿ ಮಾತ್ರ.

'ಚಿತ್ರಾಂಗದಾ' ಎನ್ನುವ ಖಂಡಕಾವ್ಯ ತಾವು ಮುಂದೆ ಪ್ರಕಟಿಸಿದ ಮಹಾಕಾವ್ಯ ರಚನೆಗೆ ಕುವೆಂಪು ನಡೆಸಿದ ಪೂರ್ವಸಿದ್ಧತೆಯಂತಿದೆ. ಈ ಶತಮಾನದಲ್ಲಿ ಮಹಾಕಾವ್ಯ ಸಂಪ್ರದಾಯದಲ್ಲಿ ಐದಾರು ಕಾವ್ಯಗಳು ರಚಿತವಾಗಿವೆ. ಆದರೆ ಶ್ರೀ ರಾಮಾಯಣ ದರ್ಶನಂ ಅವೆಲ್ಲಕ್ಕೂ ಅಗ್ರಸ್ಥಾನದಲ್ಲಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಅವರ ಮಹಾಕಾವ್ಯ ಭಾರತೀಯ ಮಹಾಕಾವ್ಯ ಸಂಪ್ರದಾಯವನ್ನಷ್ಟೇ ತದ್ವತ್ತಾಗಿ ಅನುಸರಿಸಿದ್ದಲ್ಲ. ಪಾಶ್ಚಾತ್ಯ ಮಹಾಕಾವ್ಯಗಳ ಗಾಢ ಅಧ್ಯಯನದ ಫಲವಾಗಿ ಕುವೆಂಪು ಕೆಲವು ಹೊಸ ಅಂಶಗಳನ್ನು ಸೃಜನಾತ್ಮಕವಾಗಿ ಅದರಲ್ಲಿ ಅಳವಡಿಸಿ ಕೊಂಡಿದ್ದಾರೆ. ಇದರ ಫಲವಾಗಿ 'ರಾಮಾಯಣ ದರ್ಶನ' ಭಾರತೀಯ ಪಾಶ್ಚಾತ್ಯ – ಎರಡೂ ಸಂಪ್ರದಾಯಗಳ ಒಂದು ಸುವರ್ಣ ಮಾಧ್ಯಮವಾಗಿದೆ ಎನ್ನಬಹುದು. ರಾಮಾಯಣ ದರ್ಶನ ಕೇವಲ ವಾಲ್ಮೀಕಿ ರಾಮಾಯಣದ ನೆರಳಾಗಿರದೆ ಹೊಸ ಪಾತ್ರ, ಪ್ರಸಂಗ, ಸಂವೇದನೆ, ವಿಚಾರಗಳನ್ನು ಗರ್ಭೀಕರಿಸಿಕೊಂಡು ಆಧುನಿಕ ಲೋಕದರ್ಶನವೊಂದರ ಮಹಾಪ್ರತಿಮೆ ಯಾಗಿದೆ. ಪ್ರಜಾಪ್ರಭುತ್ವದ ಕೇಂದ್ರಬಿಂದುವಾದ ಸಾಮಾನ್ಯನನ್ನು ಮೊದಲಬಾರಿಗೆ ವಿಶೇಷವಾಗಿ ಗಣನೆಗೆ ತೆಗೆದುಕೊಳ್ಳುವ ಮಹಾಕಾವ್ಯ ಇದೊಂದೇ. ಆದರೂ ಅದು ಸಾಮಾನ್ಯನಿಗೆ ಎಂದೂ ಎಟುಕದ ಸಂಸ್ಕೃತ ಭೂಯಿಷ್ಠ ಶೈಲಿಯಲ್ಲಿ ರಚಿತವಾಗಿರುವುದು ಮಾತ್ರ ಒಂದು ಸೋಜಿಗವೇ.

ಅನೇಕ ಆಧುನಿಕ ವಿಮರ್ಶಕರ ಪ್ರಕಾರ ಕುವೆಂಪು ಅವರ ಅಪೂರ್ವ ಕೊಡುಗೆಯೆಂದರೆ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಎಂಬ ಅವರ ಎರಡು ಭವ್ಯ ಕಾದಂಬರಿಗಳು. ಕುವೆಂಪು ಅವರ ನಿಜವಾದ ಮಹಾಕಾವ್ಯವೆಂದರೆ ಇವೇ ಎನ್ನಬಹುದು. ಮಲೆನಾಡಿನ ಪ್ರಾದೇಶಿಕ ಕಸುವನ್ನು ಹೀರಿ ಬೆಳೆದ ಈ ಎರಡು ಮಹಾಕೃತಿಗಳು ವಿಶ್ವದ ಶ್ರೇಷ್ಠ ಕಾದಂಬರಿಗಳ ಸಾಲಿನಲ್ಲಿ ನಿಲ್ಲಲು ಅರ್ಹವಾಗಿವೆ. ಮನುಷ್ಯ ಸ್ವಭಾವದ ಗಾಢಪರಿಚಯ, ಅವನನ್ನು ಆವರಿಸಿ ನಿಂತ ಪ್ರಕೃತಿಯ ಅದಮ್ಯ ಚೇತನದ ಅರಿವು, ಮಾನವನ ಶಕ್ತಿ, ದೌರ್ಬಲ್ಯ, ಪಶುತ್ವ, ದೈವಿಕತೆಗಳ ಬೆರಗುಗೊಳಿಸುವ ಗ್ರಹಿಕೆ ಈ ಕೃತಿಗಳ ಬುಡಕ್ಕೆ ಇದೆ. ಕುವೆಂಪು ಅವರ ಅಸಾಧಾರಣ ಸೃಷ್ಟಿಶಕ್ತಿ ಪ್ರಕಟ ವಾಗಿರುವುದು ಇವುಗಳ ಮೂಲಕವೇ. ಕುವೆಂಪು ತಮ್ಮ ಕಾವ್ಯಕ್ಕೇ ಮೊದಲ ಮನ್ನಣೆ ನೀಡುವಂತೆ ಕಾಣುತ್ತದೆ. ಆದರೆ ಅನೇಕ ವಿಮರ್ಶಕರ ಮೊದಲ ಮನ್ನಣೆಗೆ ಪಾತ್ರ ವಾಗಿರುವುದು ಅವರ ಕಾವ್ಯವಲ್ಲ, ಕಾದಂಬರಿಗಳು.

ಕುವೆಂಪು ಹಲವು ನಾಟಕಗಳನ್ನೂ ಬರೆದಿದ್ದಾರೆ. ಅವುಗಳಲ್ಲಿ ಸ್ಮಶಾನ ಕುರುಕ್ಷೇತ್ರ, ಶೂದ್ರ ತಪಸ್ವಿ ಹೆಚ್ಚು

**ಸುದ್ದಿ ಚಿತ್ರ**



೨೦೦೭ರ ಬೆಂಗಳೂರು ಪುಸ್ತಕೋತ್ಸವ ಅಕ್ಟೋಬರ್ ೧೨ರಿಂದ ೨೧ರವರೆಗೆ ಬೆಂಗಳೂರು ಅರಮನೆ ಮೈದಾನದಲ್ಲಿ ಯಶಸ್ವಿಯಾಗಿ ನಡೆಯಿತು. ಕಳೆದ ವರ್ಷಗಳಂತಲ್ಲದೆ ಕನ್ನಡ ಪುಸ್ತಕ ಮಳಿಗೆಗಳು ಹೆಚ್ಚು ಸಂಖ್ಯೆಯಲ್ಲಿದ್ದುದು ಈ ವರ್ಷದ ವಿಶೇಷ. ಜೊತೆಗೆ, ರಾಜ್ಯ ಹಾಗೂ ಅಂತರರಾಜ್ಯ ಪ್ರಕಾಶಕರಲ್ಲದೆ, ತಮಿಳು, ತೆಲುಗು, ಮಲಯಾಳ ಭಾಷೆಗಳ ಪುಸ್ತಕ ಮಳಿಗೆಗಳೂ ಇದ್ದವು.

*ಚಿತ್ರದಲ್ಲಿ ನವಕರ್ನಾಟಕ ಪುಸ್ತಕ ಮಳಿಗೆಗಳ ದೃಶ್ಯಗಳು.*

ಗಮನ ಸೆಳೆಯುವಂಥವು. ಜಲಗಾರ ಮತ್ತು ಶೂದ್ರ ತಪಸ್ವಿಗಳ ಬೆನ್ನಿಗಿರುವ ಪ್ರತಿಭಟನೆಯ ನಿಲುವನ್ನು ನೋಡಿದಾಗ ಕನ್ನಡದ ಮೊದಲ ಬಂಡಾಯ ಸಾಹಿತಿ ಕುವೆಂಪು ಅವರೇ ಎನಿಸುತ್ತದೆ. ಇವು ಹೊರಬಂದಾಗ ಸಂಪ್ರದಾಯವಂತರ ವಲಯದಲ್ಲಿ ಅಸಮಾಧಾನದ ಬಿರುಗಾಳಿ ಬೀಸಿದ್ದೂ ಉಂಟು. ಸಂಪ್ರದಾಯವಂತರನ್ನು ಪ್ರತಿನಿಧಿಸುವ ಪಾತ್ರಗಳ ಮೇಲೆ ಕುವೆಂಪು ಅಗತ್ಯಕ್ಕಿಂತ ಹೆಚ್ಚು ಪ್ರಹಾರ ಮಾಡಿದ್ದಾರೆ ಎಂದು ಕೆಲವರು ಹಿರಿಯ ಸಾಹಿತಿಗಳೂ ಭಾವಿಸಿದ್ದುಂಟು. ಆದರೆ ಕೃತಿಯಲ್ಲಿ ಕುವೆಂಪು ಸೃಷ್ಟಿಸುವ ವಾತಾವರಣದ ನಡುವೆ ಅವರ ಪಾತ್ರ ನಿರ್ವಹಣೆ ಔಚಿತ್ಯಕ್ಕೆ ಹೊರತಾಗಿದೆ ಎನ್ನುವಂತಿಲ್ಲ. ಕುವೆಂಪು ತಮ್ಮ ಎಲ್ಲ ಬರೆಹಗಳಲ್ಲಿಯೂ ಅವೈಚಾರಿಕ ವೈಷಮ್ಯಗಳನ್ನು ವಿರೋಧಿಸಿಕೊಂಡು ಬಂದವರೇ. ಕಾರಂತರೋ ಶ್ರೀರಂಗರೋ ಇದೇ ಬಗೆಯ ವೈಚಾರಿಕತೆಯನ್ನು ಪ್ರಕಟಿಸಿದಾಗ ಅಸಮಾಧಾನ ಪಡದವರು, ಕುವೆಂಪು ಅವರಲ್ಲಿ ಅಂಥ ನಿಲುವು ಕಂಡಾಗ ಅಸಮಾಧಾನ ಪಡುವುದು ಸಮರ್ಪಕವೆನಿಸುವುದಿಲ್ಲ.

ಉತ್ತಮ ಕೃತಿಗಳನ್ನು ಕುರಿತ ಅಭಿರುಚಿ ನಿರ್ಮಾಣ ಮತ್ತು ಪರಂಪರೆಯ ಬಗ್ಗೆ ಅಭಿಮಾನ ಕುವೆಂಪು ಕಾಲದ ಸಾಹಿತಿಗಳು ಸಾಧಿಸಬೇಕಾದ ಒಂದು ಸಾಹಿತ್ಯಕ ಮೌಲ್ಯವಾಗಿತ್ತು. ಹಾಗೆಂದೇ ಕನ್ನಡ ಕಾವ್ಯಪರಂಪರೆಯಲ್ಲಿ ಬಂದ ಅನೇಕ ಶ್ರೇಷ್ಠ ಕೃತಿಗಳನ್ನು ಕುರಿತು, ರುಚಿಸೃಷ್ಟಿ ಮಾಡುವ ರಸಾತ್ಮಕ ವಿಮರ್ಶೆಗಳನ್ನು ಕುವೆಂಪು ಬರೆದರು. ಪಂಪ, ರನ್ನ, ನಾಗವರ್ಮ, ಜನ್ನ, ಕುಮಾರವ್ಯಾಸ, ಲಕ್ಷ್ಮೀಶ – ಇಂಥ ಹಿರಿಯ ಕವಿಗಳ ಬಗ್ಗೆ ಅವರು ಬರೆದ ವಿಮರ್ಶೆ ಓದುಗರಲ್ಲಿ ಮೆಚ್ಚಿಗೆ, ಕುತೂಹಲ ಹುಟ್ಟಿಸಿ ಅವರ ಕಾವ್ಯಗಳನ್ನು ಕೂಡಲೇ ಓದಬೇಕೆಂಬ ಕಾತುರತೆಯನ್ನು ಉಂಟುಮಾಡಿಬಿಡುತ್ತವೆ. 'ಮಹಾಶ್ವೇತೆಯ ತಪಸ್ಸು' ಎಂಬ ಲೇಖನ ಆ ಕಾಲದ ರಸವಿಮರ್ಶೆಗೆ ಒಂದು ಮಾದರಿ ಬರೆಹ. ರನ್ನನ ಬಗ್ಗೆ ಬರೆದ ವಿಮರ್ಶೆಯಂತೂ ಸ್ವತಃ ಕುವೆಂಪುವನ್ನೇ ರಸವಶರನ್ನಾಗಿ ಮಾಡಿಬಿಡುವ ಬರೆಹ. ಪರಿಣಾಮವಾಗಿ ಗದ್ಯದಲ್ಲಿರುವ ಆ ವಿಮರ್ಶೆ ಮುಕ್ತಾಯದಲ್ಲಿ ಹೀಗೆ ಪದ್ಯರೂಪಕ್ಕೆ ಹೊರಳಿಬಿಡುತ್ತದೆ :

ರನ್ನನಿರುವ ಕನ್ನಡಕ್ಕೆ
ಅನ್ಯರಿಂದ ಬಹುದೆ ಧಕ್ಕೆ ?
ಬರಿಯ ಕವಿಯೆ, ಸಿಡಿಲ ಚಕ್ಕೆ
ಸಿಡಿದು ಬಂತೊ ನಮ್ಮ ನಾಡ ನುಡಿಯ ಪುಣ್ಯಕೆ
ಬಿತ್ತು ಕಾಣೊ ದಾವಾಗ್ನಿಯ ಕಿಡಿ ಅರಣ್ಯಕೆ!

ಆಡುಮುಟ್ಟದ ಸೊಪ್ಪಿಲ್ಲ ಎನ್ನುವಂತೆ ಕುವೆಂಪು ಕೈಯಾಡಿಸದ ಕನ್ನಡ ಸಾಹಿತ್ಯಪ್ರಕಾರವೇ ಇಲ್ಲ. ಮೇಲೆ ಹೇಳಿದ ಪ್ರಕಾರಗಳಲ್ಲೇ ಅಲ್ಲದೆ ಅವರು ಸಣ್ಣ ಕಥೆ, ಪ್ರಬಂಧ, ಕಾವ್ಯ ಮೀಮಾಂಸೆ, ಜೀವನ ಚರಿತ್ರೆ, ಮಕ್ಕಳ ಸಾಹಿತ್ಯಗಳಲ್ಲೂ ಬೆಲೆಯುಳ್ಳ ಬರೆಹ ಹೊರತಂದಿದ್ದಾರೆ. ಮಾತ್ರವಲ್ಲ, ಘಟನಾಭರಿತವಾದ, ನೆನಪಿನ ದೋಣಿ ಎಂಬ ಹೆಸರಿನ, ಆತ್ಮಕಥನದ ಎರಡು ಭಾಗಗಳನ್ನೂ ಪ್ರಕಟಿಸಿದ್ದಾರೆ.

ಇತರ ಕನ್ನಡ ಲೇಖಕರಿಂದ ಕುವೆಂಪು ಅವರನ್ನು ಸ್ಪಷ್ಟವಾಗಿ ಪ್ರತ್ಯೇಕಿಸುವ ಒಂದು ವಿಶಿಷ್ಟ ಸಂಗತಿ ಎಂದರೆ ಅವರ ಅಪಾರ ಕನ್ನಡ ಅಭಿಮಾನ. ಅದನ್ನು ಅವರು ನಾಡಿನ ಉದ್ದಗಲಕ್ಕೂ ಹಬ್ಬಿಸಿದರು. ಕನ್ನಡಕ್ಕಾಗಿ ಕೈಯೆತ್ತು, ನಿನ್ನ ಕೈ ಗೋವರ್ಧನ ಗಿರಿಧಾರಿಯಾಗುತ್ತದೆ; ಕನ್ನಡಕ್ಕಾಗಿ ಕೊರಳೆತ್ತು, ನಿನ್ನ ದನಿ ಪಾಂಚಜನ್ಯವಾಗುತ್ತದೆ ಎಂದು ಘೋಷಿಸಿದ ಕವಿ ಅವರು. ಇನ್ನೂ ಯುವಕರಾಗಿದ್ದಾಗಲೇ ಅವರು ಬರೆದ ಪದ್ಯ ಇದು :

ಕನ್ನಡವೆನೆ ಕುಣಿದಾಡುವುದೆನ್ನೆದೆ
ಕನ್ನಡವೆನೆ ಕಿವಿ ನಿಮಿರುವುದು
ಕಾಮನಬಿಲ್ಲನು ಕಾಣುವ ಕವಿವೊಲು
ತೆಕ್ಕನೆ ಮನ ಮೈ ಮರೆಯುವುದು
ಕನ್ನಡ ಕನ್ನಡ ಹಾ ಸವಿಗನ್ನಡ
ಬಾಳುವುದೇತಕೆ ನುಡಿಯೆಲೆ ಜೀವ
ಸಿರಿಗನ್ನಡ ಕವಿತೆಯ ಮಾಡೆ
ಸಿರಿಗನ್ನಡದೇಳಿಗೆಯನು ನೋಡೆ

ಜೀವನದ ಪರಮಧ್ಯೇಯವೆಂದರೆ ಕನ್ನಡದ ಏಳಿಗೆಯನ್ನು ನೋಡುವುದೇ ಎಂದು ಭಾವವಶರಾಗಿ ಹಾಡಿದವರು ಅವರೊಬ್ಬರೇ. ಈಗ ಕನ್ನಡ ಪ್ರೇಮ ತೋರಿಸುವವರು ಕಾಸಿಗೊಬ್ಬರು ಕೊಸರಿಗೊಬ್ಬರು ಸಿಗ್ತಾರೆ. ಕುವೆಂಪು ಈ ಪದ್ಯ ಬರೆದಾಗ ಅವರನ್ನು ಹಾಸ್ಯ ಮಾಡಬಹುದಾದ ವಾತಾವರಣ ಇತ್ತು. ಆದರೆ ಅವರು ಅದಕ್ಕೆ ಲಕ್ಷ್ಯ ಕೊಟ್ಟವರೇ ಅಲ್ಲ. ಮುಂದೆ ಉಪಕುಲಪತಿಯಾದಾಗ ಅವರು ಪದವಿ ತರಗತಿಗಳಲ್ಲಿ ಕನ್ನಡ ಮಾಧ್ಯಮ ಜಾರಿಗೆ ತಂದರು. ದ್ವಿತೀಯ ಭಾಷೆಯಾಗಿ ಕನ್ನಡದ ಬೋಧನೆಯನ್ನು ವಾರಕ್ಕೆ ಎರಡರಿಂದ ನಾಲ್ಕು ಗಂಟೆಗಳಿಗೆ ಹೆಚ್ಚಿಸಿದರು. ಮೈಸೂರು ಮಹಾರಾಣಿ ಕಾಲೇಜಿನಲ್ಲಿ ಐದಾರು ಜನ ಹೆಣ್ಣುಮಕ್ಕಳು ಪದವಿ ತರಗತಿಗೆ ಧೈರ್ಯವಾಗಿ ಕನ್ನಡ ಮೀಡಿಯಮ್ ಆಯ್ಕೆ ಮಾಡಿಕೊಂಡಾಗ ಅವರಿಗಾದ ಸಂತೋಷ ಅಷ್ಟಿಷ್ಟಲ್ಲ. ನೋಡಲು ಸಹ ಯಾರಿಗೂ ಸುಲಭವಾಗಿ ಸಿಗದೆ ಇರುತ್ತಿದ್ದ ಕುವೆಂಪು ಆ ವಿದ್ಯಾರ್ಥಿನಿಯರ ಜೊತೆ ಕೂತು ಟೀ ತೆಗೆದುಕೊಳ್ಳಲು ಏರ್ಪಾಟು ಮಾಡಿದರು. ವಿದ್ಯಾಕ್ಷೇತ್ರದಲ್ಲಿ ಅವರು ಮಾಡಿದ ಹಿರಿಯ ಸಾಧನೆಗೆ ಮಾನಸಗಂಗೋತ್ರಿ ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗಗಳೇ ಸಾಕ್ಷಿ.

ಕುವೆಂಪು ಕಣ್ಮರೆಯಾಗಿದ್ದಾರೆ ನಿಜ. ಆದರೆ ಇನ್ನೊಂದು ರೀತಿಯಲ್ಲಿ ಅವರು ಸದಾ ನಮ್ಮೆದುರಿಗೇ ಇದ್ದಾರೆ. ಕನ್ನಡ ಇರುವವರೆಗೆ ಅವರ ಹೆಸರು ಅಜರಾಮರವಾಗಿರುತ್ತದೆ, ಕನ್ನಡವೇ ಆಗಿರುತ್ತದೆ.

*(ಇದು ಬೆಂಗಳೂರು ಆಕಾಶವಾಣಿಯ ಕೋರಿಕೆ ಮೇರೆಗೆ 'ಕನ್ನಡದ ಕಣ್ಮಣಿಗಳು' ಎಂಬ ಉಪನ್ಯಾಸ ಮಾಲೆಗಾಗಿ ಕುವೆಂಪು ಕುರಿತ ಒಂದು ಸರಳ ಪರಿಚಯ . ಏಪ್ರಿಲ್ – ೨೦೦೭)*

ಡಾ॥ ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ
ನಂ. ೨೨೬೩, ೨೨ನೇ ಅಡ್ಡರಸ್ತೆ, ಬಿ.ಎಸ್.ಕೆ. ೩ನೇ ಹಂತ
ಬೆಂಗಳೂರು - ೫೬೦ ೦೭೦

ಮಾನ್ಯ ಓದುಗರೇ,

ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕುರಿತಂತೆ ಅನೇಕ ಅಭಿಪ್ರಾಯಗಳನ್ನು ನಾವು ಗಮನಿಸುತ್ತಿರುತ್ತೇವೆ. ಸ್ವಾತಂತ್ರ್ಯಕ್ಕೆ ಮಿತಿ ಇರುವುದು ಸಹಜ, ಇತರರ ಸ್ವಾತಂತ್ರ್ಯಕ್ಕೆ ಚ್ಯುತಿ ಬಾರದಂತೆ ಸ್ವಾತಂತ್ರ್ಯವನ್ನು ಮಿತಿಗೊಳಿಸಿಕೊಳ್ಳುವುದು ಅವಶ್ಯಕ. ಆದರೆ ಈಚಿನ ಕೆಲವು ಸಂದರ್ಭಗಳಲ್ಲಿ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕುವ ಕೆಲಸವನ್ನು ಸ್ವಯಂಘೋಷಿತ ನಿಯಂತ್ರಕರು ವಹಿಸಿಕೊಂಡುಬಿಟ್ಟಿದ್ದಾರೆ. ಯಾವುದೋ ಭಾವನೆಗಳಿಗೆ ಆಘಾತವಾಗಿದೆ ಎಂದು ಹೇಳುತ್ತಾ ಕಲಾವಿದರ, ಸಂಶೋಧಕರ, ಸಾಹಿತಿಗಳ, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮೊಟಕುಗೊಳಿಸಲು ರಾಜಕೀಯ ಕ್ಷೇತ್ರದ ಮಧ್ಯಪ್ರವೇಶವಾಗಿದೆ, ಜಾತೀಯ ಹಾಗೂ ಮತಧರ್ಮೀಯ ಶಕ್ತಿಗಳು ದಾಂಧಲೆ ನಡೆಸಿವೆ. ಸಂಶೋಧನೆ, ಇತಿಹಾಸ ಗ್ರಂಥಗಳ ರಚನೆ ಇತ್ಯಾದಿಗಳ ಮೇಲೆ ಸಹ ಪ್ರಹಾರ ನಡೆದಿದೆ. ಕಾನೂನಿನ ರಕ್ಷಕರಾಗಿ ಇವರನ್ನು ಯಾರೂ ನೇಮಿಸಿಲ್ಲದಿದ್ದರೂ ತಾವೇ ರಕ್ಷಕರೆಂಬಂತೆ ನಡೆದುಕೊಳ್ಳುವ ಪ್ರವೃತ್ತಿಯೂ ಕಂಡುಬಂದಿದೆ. ಸರ್ಕಾರ ಮತ್ತು ನ್ಯಾಯಾಲಯ ಇಂಥವರ ಪರವಾಗಿ ತೀರ್ಮಾನ ಕೊಟ್ಟಿರುವುದೂ ಉಂಟು. ಅಷ್ಟಕ್ಕೂ 'ಆಘಾತ' ಎಂದರೇನು ? ಯಾವ ವಿಚಾರದಲ್ಲೂ ಮುಕ್ತ ಚರ್ಚೆ ಇಲ್ಲದಂತೆ ಮಾಡಲು ಇದೊಂದು ಆಯುಧವಾಗುತ್ತಿದೆಯೇ ? ಇದೆಲ್ಲದರ ಬಗ್ಗೆ ನಿಮಗೇನನಿಸುತ್ತದೆ ?

'ಹೊಸತು' ಜನವರಿ ೨೦೦೮ರ ವಾರ್ಷಿಕ ಸಂಚಿಕೆಯಲ್ಲಿ ಈ ವಿಷಯವನ್ನು ಕುರಿತಂತೆ ನಮ್ಮ ಓದುಗರ ಅನಿಸಿಕೆಗಳನ್ನು ಪ್ರಕಟಿಸುವ ಉದ್ದೇಶವಿದೆ. ನಿಮ್ಮ ಅಭಿಪ್ರಾಯವನ್ನು ನವೆಂಬರ್ ೧೫ರೊಳಗೆ ಕಳಿಸಿಕೊಡಿ. ಆಯ್ದ ಕೆಲವು ಲೇಖನಗಳನ್ನು ಪ್ರಕಟಿಸಲಾಗುತ್ತದೆ. ನಿಮ್ಮ ಲೇಖನವು ೨೫೦ ಪದಗಳನ್ನು ಮೀರಬಾರದು.

– ಸಂಪಾದಕ



**ಸ್ವಾತಂತ್ರ್ಯಯೋಧ ಶ್ರೀ ಅರವಿಂದ**

*ಕೋ. ಚೆನ್ನಬಸಪ್ಪ*

**ಪುಟ : xii + ೧೬೬** ಬೆಲೆ : ರೂ. ೯೦

**ಕರ್ನಾಟಕ ನಿಲಯಂ ಟ್ರಸ್ಟ್** ರಿ., ನಂ. ೧, ಮೊಂಟೆಸ್ಸರಿ ರಸ್ತೆ, ಪಾಂಡಿಚೇರಿ - ೬೦೫ ೦೦೧

ಶ್ರೀ ಅರವಿಂದರು ಯೋಗಿಯಾಗುವುದಕ್ಕೆ ಮೊದಲು ಸ್ವಾತಂತ್ರ್ಯಯೋಧರೂ ಆಗಿದ್ದರೆಂಬುದು ಹಲವರಿಗೆ ತಿಳಿಯದ ವಿಚಾರ. ರಾಜಕೀಯ ಕ್ಷೇತ್ರಕ್ಕೆ ಅರವಿಂದರು ನೀಡಿರುವ ಅನುಪಮ ಕೊಡುಗೆಯನ್ನು ಎಳೆಯರಿಗೆ ಪರಿಚಯಿಸುವ ಪುಸ್ತಕ. ಅರವಿಂದರ ಯೋಧಜೀವನ ಇಂದಿಗೂ ಪ್ರಸ್ತುತವೆಂದು ಅರಿತು ಕರ್ನಾಟಕ ನಿಲಯಂ ಟ್ರಸ್ಟ್ ಈ ಪುಸ್ತಕವನ್ನು ಪ್ರಕಟಿಸಿದೆ. ೧೪ ಅಧ್ಯಾಯಗಳ ಪುಟ್ಟ ಹೊತ್ತಗೆ. ಪುಸ್ತಕದ ಗಾತ್ರ, ಮೇಲು ಹೊದಿಕೆ, ಅಕ್ಷರ ಜೋಡಣೆ ಎಲ್ಲವೂ ಸರಳ ಹಾಗೂ ಚೊಕ್ಕವಾಗಿವೆ.

**ಕಾವೇರಿ** – ಒಂದು ಚಿಮ್ಮು : ಒಂದು ಹೊರಳು



*ಶೇಷನಾರಾಯಣ*

**ಪುಟ : xxii + ೩೧೪** ಬೆಲೆ : ರೂ. ೧೬೦

**ಭಾಗ್ಯಲಕ್ಷ್ಮೀ ಪ್ರಕಾಶನ,** ೮೭, ೩ನೇ ಅಡ್ಡರಸ್ತೆ, ೪ನೇ ಬ್ಲಾಕ್, ಬನಶಂಕರಿ ೩ನೇ ಹಂತ, ೩ನೇ ಫೇಸ್, ಬೆಂಗಳೂರು - ೮೫

ಈ ಪುಸ್ತಕದಲ್ಲಿ ಏನಿದೆ, ಇದರ ಆಳ, ಅಳತೆಯನ್ನು ವಿವರಿಸುವುದು ಕಷ್ಟ. 'ಕಾವೇರಿ' ವಿಷಯವೇ ಅದರ ಹರವನ್ನು ತಿಳಿಸಬಲ್ಲುದು. ಇಲ್ಲಿಯ ಅಧ್ಯಾಯಗಳಲ್ಲಿ ಕೆಲವನ್ನಾದರೂ ಪಟ್ಟಿ ಮಾಡಿದರೆ ಸಹಾಯಕವಾದೀತು: ಕಾವೇರಿಯ ಉಗಮ, ತಮಿಳುನಾಡಿನಲ್ಲಿ ಕಾವೇರಿಯ ಕಥೆ, ಶಾಸನ, ಜಾನಪದದಲ್ಲಿ ಕಾವೇರಿ, ಅಣೆಕಟ್ಟುಗಳು ಪ್ರಾರಂಭವಾದದು ಹೇಗೆ ? ಎಲ್ಲಿಂದ ? ವಿಶ್ವೇಶ್ವರಯ್ಯನವರು, ಮೈಸೂರಿನ ಮೇಲೆ ಮದರಾಸಿನ ಕರಡಿ ಹಿಡಿತ, ಕೃಷ್ಣರಾಜಸಾಗರ ಜಲಾಶಯ, ೧೮೯೨ರ ಕಾವೇರಿ ಒಪ್ಪಂದಕ್ಕೆ ಮೊದಲಿದ್ದ ಮೈಸೂರಿನ ಪರಿಸ್ಥಿತಿ, ೧೮೯೨ರ ಮತ್ತು ೧೯೨೪ರ ಅನ್ಯಾಯದ ಒಪ್ಪಂದಗಳು ಆದದ್ದು ಹೇಗೆ ? ಮೆಟ್ಟೂರು ಜಲಾಶಯ, ಯಾರಿಂದ ಯಾರಿಗೆ ಅನ್ಯಾಯ ? ಗಂಗಾ ಕಾವೇರಿ ಯೋಜನೆ, ಕಾವೇರಿ ಪ್ರಶ್ನೆಗೆ ಪರಿಹಾರ ಇಲ್ಲವೆ ? ಕಾವೇರಿ ಬಗ್ಗೆ ಇತ್ತೀಚಿನ ಬೆಳವಣಿಗೆಗಳು, ಕನ್ನಡಿಗರ ದೌರ್ಬಲ್ಯ, ಕಾವೇರಿ ತೀರದಲ್ಲಿರುವ ಕೆಲವು ಪ್ರಮುಖ ಸ್ಥಳಗಳು ಮತ್ತು ಪುಣ್ಯಕ್ಷೇತ್ರಗಳು, ಅಳತೆ ಪ್ರಮಾಣಗಳು ಇತ್ಯಾದಿ. ಎರಡನೆಯ ಮುದ್ರಣವನ್ನು ಕಾಣುತ್ತಿರುವ ಕೃತಿ. ಶೇಷನಾರಾಯಣರೊಂದಿಗೆ ಒಂದು ಸುದೀರ್ಘವಾದ ಚರ್ಚೆಯಲ್ಲಿ ತೊಡಗಿದ್ದೇವೆನಿಸುವ ಸರಾಗ ಶೈಲಿ.



**ಇರುವುದೆಲ್ಲವ ಬಿಟ್ಟು** (ಕಾದಂಬರಿ)

*ಡಾ॥ ಪ್ರಭಾಕರ ಶಿಶಿಲ*

ಪುಟ : ೧೬೦ (೧೨+೧೪೮) ಬೆಲೆ : ರೂ. ೧೦೦

ದಾಮಿನಿ ಸಾಹಿತ್ಯ, ನಂ. ೫೫೯, ೯ನೇ ಮುಖ್ಯರಸ್ತೆ, ಎಮ್.ಸಿ. ಲೇಔಟ್, ವಿಜಯನಗರ, ಬೆಂಗಳೂರು - ೫೬೦ ೦೪೦

ಪರಿಸರ ಪ್ರೇಮ, ಸ್ತ್ರೀವಾದಿ ನಿಲುವು ಮತ್ತು ಕಲೆಯ ಸಂರಕ್ಷಣೆಯ ಪ್ರಾಮುಖ್ಯತೆಯನ್ನು ತಿಳಿಸುವ ವಿಶಿಷ್ಟ ಕಾದಂಬರಿ. ಒಂದು ನದಿಯ ದಡದಲ್ಲಿ ಕಥೆ ಜರುಗುತ್ತದೆ. ಕಥಾನಾಯಕಿ ಇಲ್ಲಿ ಯಕ್ಷಗಾನ ಭಾಗವತಳು. ಕಲೆಯನ್ನು ಆರಾಧಿಸುವವರು ಮತ್ತು ತಿರಸ್ಕರಿಸುವವರ ನಡುವೆ ಆಕೆಯ ಬದುಕು. ಪ್ರಕೃತಿ, ಸಮಾಜದ ಜೀವನಾಡಿಗಳಾದ ನದಿಗಳು ಮಲಿನವಾಗುತ್ತಿರುವುದರ ಎಚ್ಚರಿಕೆ ಇಲ್ಲಿದೆ. ಯಕ್ಷಗಾನದ ವಿಶಿಷ್ಟತೆ, ಸೌಂದರ್ಯ ಮತ್ತು ಮಾನವನ ಸಂಪೂರ್ಣ ಬೆಳವಣಿಗೆಗೆ ಕಲೆಯ ಕಲಿಕೆಯ ಅಗತ್ಯವನ್ನು ಕಾದಂಬರಿ ತಿಳಿಸುತ್ತದೆ. ಉತ್ತರ ಕರ್ನಾಟಕದ ಗ್ರಾಮೀಣ ಸೊಗಡನ್ನು ಇಲ್ಲಿ ಕಾಣಬಹುದು. ಕಥಾನಾಯಕಿ ಅಮ್ಮಣ್ಣಿಯ ದಿಟ್ಟ ನಿರ್ಧಾರ ಶೋಷಿತ ಮಹಿಳೆಯರಿಗೆ ಆದರ್ಶವಾಗಲಿ.

**ಗೂಡು ಕಟ್ಟುವ ಚಿತ್ರ** (ಕವನ ಸಂಕಲನ)



*ವಿಕ್ರಮ ವಿಸಾಜಿ*

**ಪುಟ : xii + ೫೦** ಬೆಲೆ : ರೂ. ೩೫

**ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ**

೩೩ ಕವಿತೆಗಳ ಸಂಕಲನ. 'ಗುಬ್ಬಿ ಪುರಾಣ' ಕವಿತೆಯ ಕೆಲವು ಸಾಲುಗಳು :

ಗುಬ್ಬಿಯನ್ನು ಮುಟ್ಟಬಾರದೆಂದಿದ್ದಳು ಅಜ್ಜಿ
ಮುಟ್ಟಿದರೆ ಉಳಿದ ಗುಬ್ಬಿಗಳು ಸೇರಿ ಕೊಲ್ಲುತ್ತವಂತೆ,
ಉಗುರು ತೆಗೆದು ಎಲ್ಲೆಂದರಲ್ಲಿ ಚೆಲ್ಲಬಾರದೆಂದಳು ಅವ್ವ
ಅಕ್ಕಿ ಅಂತ ಭಾವಿಸಿ ತಿಂದು ಸಾಯುತ್ತವಂತೆ

ಇಲ್ಲಿಯ ಅನೇಕ ಕವಿತೆಗಳು ಹಿಂಸೆ, ಸಂಸ್ಕೃತಿ, ಪರಿಸರ ನಾಶದ ಭೀಕರತೆಯನ್ನು ಕಟ್ಟಿಕೊಡುತ್ತವೆ. ಇಲ್ಲಿಯ ಕವಿತೆಗಳಲ್ಲಿ ಹಿಂಸೆಗೆ ಕವಿ ಕಂಡುಕೊಳ್ಳುವ ಪರಿಹಾರ ಸಾತ್ವಿಕತೆಯೆಡೆಗೆ ಪರಿವರ್ತನೆ.

**ಮೈಸೂರು** - ನೂರಿನ್ನೂರು ವರ್ಷಗಳ ಹಿಂದೆ

*ಪ್ರೊ॥ ಪಿ. ವಿ. ನಂಜರಾಜ ಅರಸು*

**ಪುಟ : xxiv + ೩೭೬ = ೪೦೦** ಬೆಲೆ : ರೂ. ೪೫೦

**ಅಭಿರುಚಿ ಪ್ರಕಾಶನ,** ನಂ. ೩೮೬, ೧೪ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಸರಸ್ವತಿಪುರ, ಮೈಸೂರು - ೯

ಮೈಸೂರು ಅರಮನೆ, ರಾಜಮನೆತನದ ಇತಿಹಾಸ, ಪರಂಪರೆಯನ್ನು ತೆರೆದಿರಿಸಿರುವ ಸಮಗ್ರ ಕೃತಿ. ಅತ್ಯಂತ ಸರಳ ಭಾಷೆ. ಮಕ್ಕಳೂ ಸುಲಭವಾಗಿ ಓದಿಕೊಂಡು ಹೋಗುವಂತೆ ಕುತೂಹಲ ಕೆರಳಿಸುತ್ತೆ. ವಿಷಯಗಳು, ಅಧ್ಯಾಯಗಳು ಒಂದಕ್ಕೊಂದು ಬೆಸೆದುಕೊಂಡು ನಿರರ್ಗಳವಾಗಿ ಹರಿದಂತಿದೆ ಶೈಲಿ. ಅರಮನೆಗಳು, ಕೋಟೆ, ಚಾಮುಂಡಿ ಬೆಟ್ಟ, ಉದ್ಯಾನಗಳು, ಅರಸು ಮನೆತನದ ಸಮಾಧಿ ಸ್ಥಳ, ದೇವಸ್ಥಾನಗಳು, ಶಾಲಾ-ಕಾಲೇಜುಗಳು, ಗ್ರಂಥಾಲಯಗಳು, ಆಸ್ಪತ್ರೆಗಳು, ಮಸೀದಿಗಳು, ಬಸದಿಗಳು, ಕಾರಾಗೃಹ, ಬಲಮುರಿ, ಕನ್ನಂಬಾಡಿ ಕಟ್ಟೆ, ಕಛೇರಿಗಳು, ಧರ್ಮಶಾಲೆ, ಚರ್ಚ್‌ಗಳು, ಗಡಿಯಾರ ಗೋಪುರ, ಗಂಧದೆಣ್ಣೆ ಕಾರ್ಖಾನೆ, ಡೈರಿ ಫಾರ್ಮ್, ಖೆಡ್ಡಾ, ಗೊಮ್ಮಟಗಿರಿ, ಶಿಲಾಶಾಸನಗಳು, ಹಬ್ಬಗಳು, ಸಿಂಹಾಸನದ ಬಿಡಿಭಾಗಗಳ ವಿವರಗಳು, ರಾಜ-ರಾಣಿಯರ ಆಭರಣಗಳು, ಶಸ್ತ್ರಾಗಾರದಲ್ಲಿರುವ ಏಳುನೂರ ಇಪ್ಪತ್ತೈದು ಆಯುಧಗಳು... 'ಮೈಸೂರು' ಹೆಸರು ಕೇಳಿದಾಗ ಏನೆಲ್ಲದರ ಬಗ್ಗೆ ಕುತೂಹಲ ಕೆರಳುತ್ತೋ ಅದೆಲ್ಲದರ ಸೂಕ್ಷ್ಮ ವಿವರ ಇಲ್ಲಿದೆ. ಹಿಂದಿನ ಕೃತಿ ದಾಖಲೆಗಳ ಅಧ್ಯಯನ, ಸ್ವಂತ ಪರಿಶೀಲನೆಯ ನಂತರ ರೂಪುಗೊಂಡ ಈ ಕೃತಿಯ ಹಿಂದಿನ ಶ್ರಮ ಅಗಾಧವಾದದ್ದು. ಸಾಮಾನ್ಯರಿಂದ ಹಿಡಿದು ಅಧ್ಯಯನಾಕಾಂಕ್ಷಿಗಳು, ಸಂಶೋಧಕರವರೆಗೆ ಎಲ್ಲರಿಗೂ ಉಪಯುಕ್ತವಾದ ಅಪೂರ್ವ ಗ್ರಂಥ. ಪುಟಪುಟದಲ್ಲೂ ಇರುವ ಸುಂದರ ಚಿತ್ರಗಳು ಪುಸ್ತಕದ ಮೆರುಗನ್ನು ಹೆಚ್ಚಿಸಿವೆ.

**ತತ್ರಾಣಿ** (ಕವನ ಸಂಕಲನ)



*ಬಸವರಾಜ ಹೂಗಾರ*

**ಪುಟ : ೮೦** ಬೆಲೆ : ರೂ. ೩೦

**ಲಡಾಯಿ ಪ್ರಕಾಶನ,** ೪೨, ಪ್ರಸಾದ್ ಲಾಡ್ಜ್, ಗದಗ

ಮುಖಪುಟ, ಸಂಕಲನದ ಹೆಸರು, ಪ್ರಕಾಶನ ಸಂಸ್ಥೆಯ ಹೆಸರು ಎಲ್ಲವೂ ಪುಸ್ತಕವನ್ನು ಕೈಗೆತ್ತಿಕೊಳ್ಳುವಂತೆ ಪ್ರೇರೇಪಿಸುತ್ತವೆ. ಇದು ಹೂಗಾರ ಅವರ ಮೊದಲ ಕವನ ಸಂಕಲನ. ೨೦೦೭ನೇ ಸಾಲಿನ ಕಡೆಂಗೋಡ್ಲು ಪ್ರಶಸ್ತಿ ಪಡೆದ ಕೃತಿ. ಜಿ. ಪಿ. ಬಸವರಾಜು ಅವರ ಮುನ್ನುಡಿಯಿಂದ ಎರಡು ಸಾಲು : ಸ್ಥಳೀಯ ಗುಣ, ಮಣ್ಣಿನ ಬಣ್ಣ, ಭಾಷೆ, ಜನಗಳ ಬಣ್ಣ, ದೇಸೀಯ ಬೆಡಗು ಇಲ್ಲಿ ಗರಿಬಿಚ್ಚುತ್ತವೆ. ಬಿಡುಗಣ್ಣಿನಿಂದ ಬದುಕನ್ನು ನೋಡುತ್ತ ಅದನ್ನು ಹುರುಪಿನಿಂದ ದಾಖಲಿಸುವ ಈ ಕವಿಯ ಕಾವ್ಯದಲ್ಲಿ ಲವಲವಿಕೆ, ಸಹಜಗತಿ, ಸರಳ ಚೆಲುವು ಉದ್ದಕ್ಕೂ ಕಾಣಸುತ್ತವೆ.

– ಸಹನ, ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್
'ದೇವರಕೆರೆ' ಎಕ್ಸ್‌ಟೆನ್ಷನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮

# ‘ನಮಸ್ಕಾರ’ದಲ್ಲಿ ಸಂಸ್ಕೃತಿ ಚಿಂತನೆ

ಸಮಕಾಲೀನ ಕನ್ನಡ ಸಾಹಿತ್ಯ ವಿಮರ್ಶಾ ವಲಯದಲ್ಲಿ ಡಾ|| ಎಚ್. ಎಸ್. ರಾಘವೇಂದ್ರ ರಾವ್ ಅವರು ಪ್ರಧಾನವಾಗಿ ಕಾಣಿಸುತ್ತಾರೆ. ಎಪ್ಪತ್ತರ ದಶಕದ ಮೊದಲ ಭಾಗದಲ್ಲಿ ವಿಮರ್ಶೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಎಚ್.ಎಸ್.ಆರ್. ಅವರು ವಿಶ್ಲೇಷಣೆ (೧೯೮೧), ನಿಲುವು (೧೯೮೯), ಪ್ರಗತಿಶೀಲತೆ (೧೯೯೦), ಹಾಡೇ ಹಾದಿಯ ತೋರಿತು (ಪಿಎಚ್.ಡಿ. ಪ್ರಬಂಧ ೧೯೯೫), ತರುತಳೆದ ಪುಷ್ಪ (೨೦೦೪) ಹೀಗೆ ಅವರ ವಿಮರ್ಶಾ ವ್ಯವಸಾಯ ಮುಂದುವರೆದು ಈಗ ‘ನಮಸ್ಕಾರ’ (೨೦೦೬) ಪ್ರಕಟಿಸಿದ್ದಾರೆ. ಪ್ರಾಯಃ ಅವರ ಪ್ರವಾಸಕಥನ ‘ಜನಗಣಮನ’ವನ್ನು ಹೊರತುಪಡಿಸಿದರೆ ಎಚ್.ಎಸ್.ಆರ್. ಹೆಚ್ಚು ನಂಬಿಕೊಂಡು ಉತ್ತಮ ಕೆಲಸ ಮಾಡಿರುವುದು ವಿಮರ್ಶೆಯಲ್ಲೇ.

ಯಾವುದೇ ಒಬ್ಬ ವಿಮರ್ಶಕ ತಾನು ಬರೆಯುವ ಹಲವು ಕಾಲಘಟ್ಟಗಳಲ್ಲಿ ಸ್ಫೋಟಗೊಳ್ಳುವ ಪ್ರಭಾವಗಳನ್ನು, ಸಮಕಾಲೀನ ಸಂಗತಿಗಳನ್ನು ತನ್ನ ದೃಷ್ಟಿಕೋನದಲ್ಲಿರಿಸಿಕೊಂಡಿರುತ್ತಾನೆ. ಮುಂದೆ ಕಾಲಕ್ಕೆ ತಕ್ಕಂತೆ ತನ್ನ ನಿಲುವುಗಳಲ್ಲಿ ಕೆಲವು ಬದಲಾವಣೆಗಳನ್ನು ಕಂಡುಕೊಳ್ಳಬಹುದು. ಅಥವಾ ಕೆಲವು ವಿಚಾರಗಳಲ್ಲಿ ಆ ಬದಲಾವಣೆಗಳನ್ನು ಮಾರ್ಪಡಿಸಿಕೊಳ್ಳದೇ ಇರಬಹುದು. ಕನ್ನಡದ ಬಹುತೇಕ ವಿಮರ್ಶಕರು ಈ ಸವಾಲನ್ನು ಎದುರಿಸಿದ್ದಾರೆ. ಎಚ್.ಎಸ್.ಆರ್. ಕೂಡ ಇದಕ್ಕೆ ಅಪವಾದವಲ್ಲ. ನಮ್ಮ ಕಾಲದ ಬಹುದೊಡ್ಡ ವಿಮರ್ಶಕರಾದ ಪ್ರೊ|| ಕಿ. ರಂ. ನಾಗರಾಜ ಅವರು ಅಭಿಪ್ರಾಯಪಡುವಂತೆ ‘ಆಕೃತಿ ಕೇಂದ್ರಿತ ವಿಮರ್ಶೆಯನ್ನು ಎಂ.ಜಿ.ಕೆ. ತುಂಬಾ ಗಂಭೀರವಾಗಿ ಮಾಡಿದ್ರು ಅನ್ನುವುದು ನಿಜ. ಜಿ. ಎಚ್. ನಾಯಕ, ಎಚ್. ಎಸ್. ರಾಘವೇಂದ್ರ ರಾವ್ ಇವರೂ ತಮ್ಮ ಬರವಣಿಗೆಯ ಆರಂಭದಲ್ಲೇ ರೂಪನಿಷ್ಠೆಯೆಡೆಗೆ ಆಸಕ್ತರಾಗಿದ್ದವರೇ. ಆದರೆ ನಂತರದ ಇವರ ಬರವಣಿಗೆಯಲ್ಲಿ ಖಂಡಿತವಾಗಿಯೂ ಒಂದು ಷಿಫ್ಟ್ ಕಾಣಿಸುತ್ತೆ.'' (ಮಾತು-ಮಂಥನ. ಸಂದರ್ಶನ : ಎಂ. ಎಸ್. ಆಶಾದೇವಿ, ಮಯೂರ, ಜುಲೈ - ೨೦೦೬). ಈ ಮಾತುಗಳು ಎಚ್.ಎಸ್.ಆರ್.ರವರ ವಿಚಾರದಲ್ಲಿ ಹೆಚ್ಚು ಅರ್ಥಪೂರ್ಣವಾದುವು. ಅವರ ‘ವಿಶ್ಲೇಷಣೆ’ಯಲ್ಲಿ ಬರುವ ಬಹುಮಟ್ಟಿಗೆ ಎಲ್ಲಾ ಲೇಖನಗಳು ರೂಪನಿಷ್ಠ ವಿಮರ್ಶೆಗೆ ಸೇರಿವೆ. ಹಾಗೆ ನೋಡಿದರೆ ‘ನಿಲುವು’ ಕೃತಿಯ ಕೆಲವು ಲೇಖನಗಳಲ್ಲಿ ಈ ರೂಪನಿಷ್ಠತೆ ಮುಂದುವರಿದಿದೆ ಎನ್ನಬಹುದು. ಕಾಳೇಗೌಡ ನಾಗವಾರರ ಕಥೆಗಳು, ನಿರಂಜನರ ಕಾದಂಬರಿಗಳು, ಇನಾಂದಾರ್ ಸೃಷ್ಟಿಸುವ ಸಂಬಂಧಗಳ ಬಗ್ಗೆ, ಮಾಸ್ತಿ ಕಥಾ ಪರಂಪರೆ, ಲಂಕೇಶ್ ಕಾವ್ಯ, ಇಂತಹ ಲೇಖನಗಳನ್ನು ಹೊರತುಪಡಿಸಿದರೆ, ಅವರು ಚರ್ಚೆಗೆ ಎತ್ತಿಕೊಳ್ಳುವ ಲೇಖಕರೂ ಕೂಡ ಬಹುಮಟ್ಟಿಗೆ ರೂಪನಿಷ್ಠತೆಯನ್ನು ಅಪೇಕ್ಷಿಸುತ್ತಾರೆ. ಇದರಿಂದ ಪ್ರೊ|| ಕಿ. ರಂ. ನಾಗರಾಜ ಅವರು ಹೇಳುವ ಬಹುದೊಡ್ಡ ‘ಷಿಫ್ಟ್’ ಎನ್ನುವುದರ ನಿಲುವು ಕೃತಿಯಿಂದಲೇ ಪ್ರಾರಂಭವಾಗಿದೆ. ಹಾಗ ನೋಡಿದರೆ ವಿಶ್ಲೇಷಣೆ ‘ನಿಲುವು’ ವಿಮರ್ಶಾ ಕೃತಿಗಳು ೮೦ರ ದಶಕದ ಪ್ರಮುಖ ಕೃತಿಗಳು. ಈ ಕಾಲಘಟ್ಟದ ವಿಮರ್ಶೆಯನ್ನು ಕುರಿತು ಒಂದು ಲೇಖನವನ್ನು ಬರೆದಿರುವ ಆರ್ಕೆ ಮಣಿಪಾಲ ಅವರು ಎಚ್.ಎಸ್.ಆರ್. ಅವರ ಈ ಎರಡೂ ಕೃತಿಗಳನ್ನು ಪ್ರಸ್ತಾಪಿಸದೇ ಇರುವುದು ಅಚ್ಚರಿ ಉಂಟುಮಾಡುತ್ತದೆ. (ನೋಡಿ – ಲೋಕಗ್ರಹಿಕೆ ಮತ್ತು ಅಭಿವ್ಯಕ್ತಿ. ಸಂಕ್ರಮಣ, ಆರ್ಕೆ ಮಣಿಪಾಲ). ಏಕೆಂದರೆ ಅವೆರಡೂ ಕೃತಿಗಳು ಕನ್ನಡದ ಒಟ್ಟು ವಿಮರ್ಶೆ ದೃಷ್ಟಿಯಿಂದಲೂ ಹೊಸ ಆಯಾಮಗಳನ್ನು ಪರಿಪ್ರೇಕ್ಷ್ಯದಲ್ಲಿಟ್ಟುಕೊಂಡಿವೆ.

‘‘ಕೃತಿ ರಚನೆಯ ಸ್ವರೂಪದ ವಿವಿಧ ರೀತಿಗಳು (ಉದಾಹರಣೆಗೆ, ಭಾಷೆ, ಶೈಲಿ, ತಾತ್ವಿಕ ಸ್ವರೂಪಗಳು) ಅಧ್ಯಯನದ ಮುಖ್ಯ ನೆಲೆಯಾದಾಗ ಮಾತ್ರ ಸಾಂಸ್ಕೃತಿಕ ವಿನ್ಯಾಸಗಳ ರೂಪವು ಬಿಚ್ಚಿಕೊಳ್ಳಲು ಸಾಧ್ಯ. ಸಾಹಿತ್ಯ ಕೃತಿಯ ಇಂಥ ಅಧ್ಯಯನದ ಸ್ವರೂಪವನ್ನು ಕುರಿತು, ಲಿವೀಸ್‌ನೂ ಒತ್ತಿ ಹೇಳುತ್ತಾನೆ. ಅವನ ಪ್ರಕಾರ ಸಾಹಿತ್ಯ ಕೃತಿಯ ಭಾಷೆಯ ಸೂಕ್ಷ್ಮಗಳನ್ನು ತಿಳಿಯದ ಹೊರತು ಅದರ ಸಾಂಸ್ಕೃತಿಕ ನೆಲೆಗಳ ಕಾಣ್ಕೆ ಅಸಾಧ್ಯ'' (ಡಾ|| ಬಸವರಾಜ ಕಲ್ಗುಡಿ. ನಕ್ಷೆ-ನಕ್ಷತ್ರ, ಪುಟ-೩೦). ಡಾ||ಎಚ್.ಎಸ್.ಆರ್. ಅವರ ವಿಮರ್ಶೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ, ಅವರ ಆಲೋಚನ ವಿಧಾನಗಳು ಮೇಲಿನ ಮಾತುಗಳಿಗೆ ಹೆಚ್ಚು ಹತ್ತಿರವಾಗಿವೆ ಅನಿಸುತ್ತದೆ. ನವೋದಯ ಘಟ್ಟದ ಪ್ರಮುಖ ಪ್ರತಿನಿಧಿಗಳೆನಿಸಿದ ಕುವೆಂಪು, ಬೇಂದ್ರೆ, ಮಧುರಚೆನ್ನರ ಬಗ್ಗೆ ಬರೆಯುವಾಗ ಅವರ ಗ್ರಹಿಕೆಯ ಕ್ರಮಗಳನ್ನು ಗಮನಿಸಬೇಕು. ವಸಾಹತು ಸ್ವರೂಪವನ್ನು ಈ ಮೂವರು ಯಾವ ಬಗೆಯಲ್ಲಿ ಎದುರಿಸಿದರು ಎಂಬುದರ ಬಗ್ಗೆ ಎಚ್.ಎಸ್.ಆರ್. ಆರಿಸಿಕೊಳ್ಳುವ ಚಿಂತನಾಕ್ರಮಗಳು ಭಿನ್ನವಾಗಿವೆ. ಮತ್ತು ಈ ಮೂವರೂ ಆ ಕಾಲಘಟ್ಟದ ಭಾರತೀಯ ಅಧ್ಯಾತ್ಮ ಹಾಗೂ ತಾತ್ವಿಕ ಚಿಂತನೆಗಳನ್ನು ಹೇಗೆ ಒಳಗುಮಾಡಿಕೊಂಡಿದ್ದಾರೆ ಎಂಬುದನ್ನು ಚೆನ್ನಾಗಿಯೇ ಗ್ರಹಿಸಿದ್ದಾರೆ. ಕುವೆಂಪು ಅವರಿಗೆ ಬ್ರಿಟಿಷ್ ಅಧಿಕಾರಕ್ಕಿಂತ ಶಿಕ್ಷಣ ಕ್ರಮಗಳು ಹೆಚ್ಚು ಹತ್ತಿರವಾದುವು ಎಂದು ಹೇಳುತ್ತಾ, ‘ಕುವೆಂಪು ಬ್ರಿಟಿಷ್ ಮೌಲ್ಯಗಳ ಆರಾಧಕರಾಗಬಹುದಿತ್ತು, ಆಗಲಿಲ್ಲ. ಆದರೆ ‘ಕೂಲಿ ಮಠ’ ಮತ್ತು ಪ್ರೈಮರಿ ಶಾಲೆಗಳ ನಡುವೆ ಅವರ ಆಯ್ಕೆ ಎರಡನೆಯದೇ ಆಗಿರುತ್ತಿತ್ತು, (ನಮಸ್ಕಾರ. ಪುಟ - ೭) ಎಂದಿದ್ದಾರೆ. ಪ್ರಾಯಃ ಆಧುನಿಕ ಸಾಹಿತ್ಯದ ಮೊದಲ ಶೂದ್ರ ಪ್ರತಿಭೆಯಾದ ಕುವೆಂಪು ಅವರಿಗೆ ಅಂದಿನ ಸಾಂಸ್ಕೃತಿಕ ಸಂದರ್ಭದಲ್ಲಿ ಇದು ಅನಿವಾರ್ಯವೂ ಅನಿಸಿರಬಹುದು. ಆದರೆ ಅಧ್ಯಾತ್ಮ ಮತ್ತು ಅನುಭಾವದ ವಿಚಾರದಲ್ಲಿ ಭಿನ್ನವಾಗಿಯೇ ಕಾವ್ಯರಚನೆ ಮಾಡಿದ ಬೇಂದ್ರೆ, ಮಧುರಚೆನ್ನರ ಒಟ್ಟು ಕಾವ್ಯ ಪರಂಪರೆಯ ಹಿನ್ನೆಲೆಯಲ್ಲಿಯೇ ಕೆಲವು ವಿನೂತನ ಹೇಳಿಕೆಗಳನ್ನು ಎಚ್.ಎಸ್.ಆರ್. ನೀಡುತ್ತಾರೆ. ಬೇಂದ್ರೆಯವರ ಕಾವ್ಯ ಪ್ರತಿಭೆಯ ಚರ್ಚೆ ಅವರ ಲಯಗಾರಿಕೆಯಿಂದ ಮುಂದುವರೆದು ಅರವಿಂದರ ಪ್ರಭಾವವನ್ನು ಮನಸ್ಸಿನಲ್ಲಿಟ್ಟುಕೊಂಡೆ, ‘‘ಬೇಂದ್ರೆಯವರ ಕಾವ್ಯದ ಅನುಭಾವಿಕ ಆಕಾರಗಳನ್ನು ಒದಗಿಸಿಕೊಟ್ಟಿದ್ದು ದ್ರಾವಿಡ ಸಂಸ್ಕೃತಿಯಾದರೆ, ಪ್ರಾಯಶಃ ಅವರ ಹಿಂದಿನ ವೈಚಾರಿಕ ಆಕಾರಗಳು ಮಾತ್ರ ವೈದಿಕ ಸಂಸ್ಕೃತಿಯಿಂದಲೇ ದತ್ತವಾದವು. ಆಲಂಕಾರಿಕವಾಗಿ ಹೇಳುವುದಾದರೆ ಅವರದು ದ್ರಾವಿಡ ದೇಹ ಮತ್ತು ಆರ್ಯ ಮನಸ್ಸುಗಳ ಸಂಯೋಜನೆಯಾಗಿತ್ತು'' (ಪುಟ-೧೬) ಎಂದು ಅಭಿಪ್ರಾಯಪಡುತ್ತಾರೆ.

ಈ ಹಿನ್ನೆಲೆಯಲ್ಲಿ ನಾವು ‘ನಮಸ್ಕಾರ’ದ ಈ ಮೂವರು ನವೋದಯದ ಬಹುದೊಡ್ಡ ಲೇಖಕರ ಬಗೆಗಿನ ಲೇಖನಗಳನ್ನು ಗಮನಿಸಿದಾಗ, ಬೇಂದ್ರೆ - ಮಧುರ ಚೆನ್ನರ ಮೇಲೆ ಭಕ್ತಿ ಕಾವ್ಯ, ಮೌಖಿಕ ಸಾಹಿತ್ಯ ಪ್ರಭಾವ ಬೀರಿರುವಷ್ಟು ಕುವೆಂಪು ಅವರ ಮೇಲೆ ಬೀರಿಲ್ಲವೆ ಎಂಬ ಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಬೇಂದ್ರೆಯವರಂತೂ ವಸಾಹತುಶಾಹಿಯಿಂದ ಸಾಕಷ್ಟು ದೂರವೇ ಉಳಿಯುತ್ತಾರೆ ಎಂದು ಎಚ್.ಎಸ್.ಆರ್. ಸ್ಪಷ್ಟವಾಗಿಯೇ ಹೇಳುತ್ತಾರೆ. ಹಾಗೆಯೇ ಮಧುರಚೆನ್ನರ ಕಾವ್ಯದ ವೈಶಿಷ್ಟ್ಯತೆಗಳಂತೂ ಅಚ್ಚರಿ

ಎನ್. ಸುರೇಶ್ ನಾಗಲಮಡಿಕೆ



ಲೇಖಕರು
**ಎಚ್. ಎಸ್. ರಾಘವೇಂದ್ರ ರಾವ್**

ಪ್ರಕಾಶಕರು
**ಅಭಿನವ**
೧೭/೧೮-೨, ೧ನೇ ಮುಖ್ಯರಸ್ತೆ, ಮಾರೇನಹಳ್ಳಿ
ವಿಜಯನಗರ, ಬೆಂಗಳೂರು - ೫೬೦ ೦೪೦

**ಪುಟ : ೩೦೪ ಬೆಲೆ : ರೂ. ೧೫೦**

ಹುಟ್ಟಿಸುತ್ತವೆ. ಅವರ ಕಾವ್ಯ ಒಂದು ರೀತಿಯಲ್ಲಿ 'ಒಳಗಣ್ಣಿನ ಶೋಧನೆ' ಎಂದು ಹೇಳಬಹುದು. ಇಂತಹ ವ್ಯಾಕುಲ ಸಾಧಕನ ಕುರಿತು ಎಚ್.ಎಸ್.ಆರ್. ಅವರ ಆಲೋಚನಾ ವಿಧಾನಗಳು ಇಡೀ ಕನ್ನಡ ವಿಮರ್ಶೆಯಲ್ಲೇ ವಿಶಿಷ್ಟವಾಗಿವೆ. ಲೇಖನದ ಉದ್ದಕ್ಕೂ ಮಧುರಚೆನ್ನರ ಒಟ್ಟು ಸಾಹಿತ್ಯ ಹಾಗೂ ಕನ್ನಡ ಅನುಭಾವ ಸಾಹಿತ್ಯದ ಹಿನ್ನೆಲೆಯಲ್ಲಿಯೇ ಚರ್ಚೆಯಾಗುತ್ತದೆ. ಅದನ್ನು ಸೂಕ್ಷ್ಮವಾಗಿ ಗ್ರಹಿಸಿದಾಗ, ಅರವಿಂದರನ್ನು ಬೇಂದ್ರೆಯವರು ಎದುರುಗೊಳ್ಳುವ ಬಗೆಗೂ, ಮಧುರಚೆನ್ನರು ಮುಖಾಮುಖಿಯಾಗುವ ರೀತಿಗಳು ಸ್ಪಷ್ಟವಾಗಿ ಅನಾವರಣಗೊಳ್ಳುತ್ತವೆ. ''ಕೊನೆಗೂ ಅವರ ಅಂತಿಮ ಮಾನದಂಡವು ಸ್ವಾನುಭವ ಸ್ವಾಧ್ಯಾಯಗಳೇ ಹೊರತು ಗುರುಕರಣೆ-ಅನುಕರಣೆಗಳಲ್ಲ'' (ಪುಟ-೩೦) ಎಂದು ಮಧುರಚೆನ್ನರ ಬಗೆಗೆ ನಿಲುವು ತಾಳುತ್ತಾರೆ.

-೨-

'ನಮಸ್ಕಾರ' ವಿಮರ್ಶಾ ಸಂಕಲನದಲ್ಲಿ ಇನ್ನೂ ಅನೇಕ ಹಿರಿಯ ಲೇಖಕರ ಬಗೆಗಿನ ಪರಿಶೀಲನೆ ಇದೆ. ಡಿ.ವಿ.ಜಿ., ಗೊರೂರು ರಾಮಸ್ವಾಮಿ ಅಯ್ಯಂಗಾರ್, ಪು.ತಿ.ನ. ಅವರ ಬಗ್ಗೆ ಎಚ್.ಎಸ್.ಆರ್. ಅವರು ಸಮಗ್ರವಾಗಿಯೇ ಅನುಸಂಧಾನ ಮಾಡಿದ್ದಾರೆ. ಪ್ರಾಯಶಃ ಮೇಲಿನ ಲೇಖಕರನ್ನು ವಿದ್ವಾಂಸರ ಒಂದು ವಲಯ ಕೇವಲ ವೈದಿಕ ಚಿಂತನಾಕ್ರಮಗಳ ನೆಲೆಗಳನ್ನಿಟ್ಟುಕೊಂಡೇ, ಕನ್ನಡದ ಒಟ್ಟು ಸಂಸ್ಕೃತಿ ಸಮುದಾಯದಲ್ಲಿ ಅವರನ್ನು ಅಪಾಯಕ್ಕೆ ತಳ್ಳುತ್ತಿರುವ ಈ ಸಂದರ್ಭದಲ್ಲಿ ಎಚ್.ಎಸ್.ಆರ್. ಆ ಲೇಖಕರ ಕುರಿತಾದ ಹೊಸ ಸಂಗತಿಗಳನ್ನು ದಾಖಲಿಸಿದ್ದಾರೆ. ಡಿ.ವಿ.ಜಿ.ಯವರ ಒಟ್ಟು ಸಾಂಸ್ಕೃತಿಕ ವ್ಯಕ್ತಿತ್ವವನ್ನು ಪಲರಿಶೀಲಿಸುತ್ತಾ ಭಾರತೀಯ ಚಿಂತನೆಯ ಮೂಲ ಆಕರಗಳನ್ನು ನಿಷ್ಠೆಯಿಂದ, ಗುರುಮುಖೇನ ಕಲಿಯಬೇಕೆಂಬ ಅಪೇಕ್ಷೆಯು ಅವರನ್ನು ಸಂಪ್ರದಾಯಶರಣರಾದ ವೈದಿಕರನ್ನಾಗಿ ರೂಪಿಸಲಿಲ್ಲ ಎನ್ನುವುದನ್ನು ನಾವು ಮರೆಯಬಾರದು. ಅವರ ಜ್ಞಾಪಕಚಿತ್ರಶಾಲೆಯಲ್ಲಿ ಅನುಪಮವಾಗಿ ದಾಖಲೆಯಾಗಿರುವಂತೆ, ಅವರು ಮಡಿ ಮನೋಭಾವವನ್ನು ಲಘುಹಾಸ್ಯದ ನೆಲೆಯಿಂದಲೇ ನೋಡಿದವರು (ಪುಟ-೧೨೫). ಇಂತಹ ಮಾತುಗಳು ಲೇಖಕನ ಮುಖ್ಯ ಸಂದರ್ಭಗಳಲ್ಲಿ ಬರುತ್ತವೆ. ಸರಿಸುಮಾರು ಇವರ ಸಮಕಾಲೀನ ಲೇಖಕರಾದ ಗೊರೂರರ ಬಗೆಗೂ ಇದೇ ತರಹದ ನಿಲುವು ವ್ಯಕ್ತವಾಗುತ್ತದೆ. ಗೊರೂರರ ಬಗೆಗೆನ ಒಟ್ಟು ಕೃತಿಗಳ ಕುರಿತು ನಿಸ್ವಾರ್ಥ ವಿಮರ್ಶೆ ಇನ್ನೂ ಬಂದಿಲ್ಲ ಎಂಬುದು ಎಚ್.ಎಸ್.ಆರ್.ಗಿದೆ ಎನಿಸುತ್ತದೆ. ಗೊರೂರರ ಸಾಹಿತ್ಯದಲ್ಲಿ ಬರುವ ಪಾತ್ರಗಳನ್ನು ಅವರು ಹೇಗೆ ಅನುಸಂಧಾನ ಮಾಡಿದರೆಂಬುದಕ್ಕೆ ಎಚ್.ಎಸ್.ಆರ್. ಅಭಿಪ್ರಾಯ ಹೀಗಿದೆ : ''ಕಮ್ಮಾರ ವೀರಭದ್ರಾಚಾರಿ, ರಂಗೇಗೌಡ, ಬೆಸ್ತರ ಕರಿಯ, ಸುಬ್ಬೇಗೌಡ, ಶಾಲುಸಾಬಿ ಮುಂತಾದವರೆಲ್ಲರೂ ಅವರ ಗಮನಕ್ಕೆ ಬಂದಿರುವವರೇ. ಕೆಲವೊಮ್ಮೆ ಗೌರವಕ್ಕೆ ಕೆಲವೊಮ್ಮೆ ಗೇಲಿಗೆ ಪಾತ್ರರಾಗುವ ಈ ಪಾತ್ರಗಳು ವ್ಯಕ್ತಿಗಳಾಗಿ ಬರುವವರೇ ಹೊರತು ತಮ್ಮ ತಮ್ಮ ಸಮುದಾಯಗಳ ಪ್ರತಿನಿಧಿಗಳಾಗಿ ಅಲ್ಲ'' (ಪುಟ-೧೬೪). ಹಾಗಂತ ಕೃತಿಗಳ ಎಲ್ಲಾ ಆಯಾಮಗಳನ್ನೂ ಎಚ್.ಎಸ್.ಆರ್. ಒಪ್ಪಿಕೊಳ್ಳಲು ನಿರಾಕರಿಸುತ್ತಾರೆ. ಪು.ತಿ.ನ. ಅವರ ಶ್ರೀಹರಿ ಚರಿತೆಯ ಆಧುನಿಕತೆಯ ನೆಲೆಗಳನ್ನು ಹಲವು ಆಯಾಮಗಳಲ್ಲಿ ವಿಶ್ಲೇಷಿಸುವಾಗ ಅವರ ಮಿತಿಗಳನ್ನು ಗುರುತಿಸಲು ಹಿಂಜರಿಯುವುದಿಲ್ಲ. ಶಿವರಾಮ ಕಾರಂತರ ಬಾಲಸಾಹಿತ್ಯವನ್ನು ಚರ್ಚಿಸುವಾಗಲೂ ಈ ಮಾತು ಸತ್ಯ.

ಆದರೆ ನಮ್ಮ ನಡುವಿನ ಖ್ಯಾತ ಅಂತಾರಾಷ್ಟ್ರೀಯ ಭಾಷಾ ವಿಜ್ಞಾನಿಯಾದ ಡಿ.ಎನ್. ಶಂಕರಭಟ್ಟರ ಭಾಷಾ ಚಿಂತನೆಗಳ ಪರಿಶೀಲನೆಯಲ್ಲಿ ಭಾಷೆಯ ಮೂಲಕ ಒಟ್ಟು ಸಮುದಾಯದ ಚರ್ಚೆಯಾಗುತ್ತದೆ. ಶಂಕರಭಟ್ಟರು ಭಾಷೆಯ ಹಿನ್ನೆಲೆಯಲ್ಲಿ ಪಂಡಿತರನ್ನು ಎದುರುಗೊಳ್ಳುವುದನ್ನು ಸರಿಯಾಗಿಯೇ ಗುರುತಿಸುತ್ತಾರೆ. ಡಿ.ಎನ್.ಎಸ್. ಅವರ ಭಾಷಾ ಚಿಂತನೆಯಲ್ಲಿ ದ್ರಾವಿಡ ಸಂಸ್ಕೃತಿಯ ನೆಲೆಗಳನ್ನು ಎಚ್.ಎಸ್.ಆರ್ ಅವರು ವಿಶೇಷವಾಗಿ ಪ್ರಸ್ತಾಪಿಸುತ್ತಾರೆ.

''ಕನ್ನಡವು ದ್ರಾವಿಡ ಸಂಸ್ಕೃತಿಯ ಒಡಲಿನಲ್ಲಿ ರೂಪಿತವಾದ ತನ್ನದೇ ಆದ ಪ್ರತ್ಯೇಕ ಅಸ್ತಿತ್ವ ಹಾಗೂ ಲಕ್ಷಣಗಳನ್ನು ಹೊಂದಿರುವ ಭಾಷೆಯೆಂದು ಶೋಧಿಸಿಕೊಡುವುದೇ ಅವರ ಮುಖ್ಯ ಉದ್ದೇಶವಾಗಿದೆ'' (ಪುಟ-೧೭೫).




ವ್ಯಾಕರಣಗಳ ಬಗ್ಗೆ ಹೇಳುವಾಗ ಎಚ್.ಎಸ್.ಆರ್. ಒಂದು ಪ್ರಧಾನ ಪ್ರಶ್ನೆಯೊಂದನ್ನು ಎತ್ತಿಕೊಳ್ಳುತ್ತಾರೆ. 'ಯಾರು, ಯಾವಾಗ, ಎಷ್ಟು ವ್ಯಾಕರಣವನ್ನು ಹೇಗೆ ಕಲಿಯಬೇಕು ಎಂಬ ಪ್ರಶ್ನೆಯನ್ನು ನಮ್ಮ ಶಿಕ್ಷಣ ವ್ಯವಸ್ಥೆಯು ಕೇಳಿಕೊಂಡಿಲ್ಲ. ನಾಡಿನ ಹಿರಿಯ ಭಾಷಾವಿಜ್ಞಾನಿಗಳಲ್ಲೊಬ್ಬರಾದ ಡಿ. ಎನ್. ಶಂಕರಭಟ್ಟರೂ ಕೂಡ ವಿನಯದಿಂದ ಆ ಪ್ರಶ್ನೆಯನ್ನು ಶಿಕ್ಷಣ ತಜ್ಞರಿಗೆ ಬಿಡುತ್ತಾರೆ' (ಪುಟ-೧೮೦).

ಎಚ್.ಎಸ್.ಆರ್.ರವರ ಈ ಲೇಖನದ ಪೂರಕ ವಾದ ಚಿಂತನೆಗಳನ್ನು ಆಸಕ್ತಿವುಳ್ಳವರು 'ಹೊಸತು' ವಿಶೇಷ ಸಂಚಿಕೆಯ (೨೦೦೭) ಅವರದೇ ಲೇಖನವಾದ 'ಕರ್ನಾಟಕ V/s ಕನ್ನಡ'ದಲ್ಲಿ ಗಮನಿಸಬಹುದು.

-೩-

ಈ ಭಾಗದಲ್ಲಿ ಸರಿಸುಮಾರು ಸಮಕಾಲೀನ ಸಾಹಿತಿಗಳಾದ ಕೆ.ಎಸ್.ನ., ಕೆ. ವಿ. ತಿರುಮಲೇಶ್, ಚಂಪಾ, ಲಂಕೇಶ್, ವ್ಯಾಸರಾಯ ಬಲ್ಲಾಳ, ಗಿರಡ್ಡಿ ಗೋವಿಂದರಾಜ, ಬಿ. ವಿ. ಕಾರಂತ, ಪ್ರತಿಭಾ ನಂದಕುಮಾರ್, ಜಿ. ಎಸ್. ಶಿವರುದ್ರಪ್ಪ, ಯಶವಂತ ಚಿತ್ತಾಲ, ಮುಂತಾದವರನ್ನು ಕುರಿತು ಎಚ್.ಎಸ್.ಆರ್.ರವರ ಪ್ರಮುಖ ನಿಲುವುಗಳ ಕಡೆಗೆ ಮಾತ್ರ ಗಮನ ಹರಿಸಬಹುದು. ನಾನು ಪೀಠಿಕೆಯಲ್ಲೇ ಪ್ರಸ್ತಾಪಿಸಿದಂತೆ ರಾಘವೇಂದ್ರರಾವ್ ಅವರು ಯಾವುದೇ ಸಮಕಾಲೀನ ಕವಿಯನ್ನು ಚರ್ಚಿಸುವಾಗ ಅದೇ ಕಾಲಘಟ್ಟದಲ್ಲಿ ರಚನೆ ಮಾಡುತ್ತಿರುವ ಇತರ ಪ್ರಮುಖ ಕವಿಗಳನ್ನು ತಮ್ಮ ಗಮನದಲ್ಲಿರಿಸಿಕೊಂಡಿರುತ್ತಾರೆ. ಇದು ಗಟ್ಟಿ ವಿಮರ್ಶಕನ ಗುಣವೂ ಹೌದು. ಪ್ರಾಯಶಃ ಚಂಪಾ ಅವರ ಕಾವ್ಯವನ್ನು ವಿಶ್ಲೇಷಿಸುವಾಗ ಈ ಮಾತು ಅಪವಾದವಾಗುತ್ತದೆ. ಏಕೆಂದರೆ ಚಂಪಾ ಕಾವ್ಯ ಗರ್ಭೀಕರಿಸಿಕೊಂಡಿರುವ ನೆಲೆಗಳೇ ಆ ತರಹದವು. ಚಂಪಾ ಅವರ ಕಾವ್ಯಕ್ಕೆ ಆ ಕ್ಷಣದ ಕರ್ನಾಟಕದ, ಭಾರತದ, ತಲ್ಲಣಗಳು, ತುಡಿತಗಳೇ ಮುಖ್ಯವಾದವು. ಅವರಿಗೆ ಪರಂಪರೆಯಾಗಲೀ, ಪೌರಾಣಿಕ ನೆಲೆಗಳಾಗಲೀ ಅಷ್ಟಾಗಿ ಪ್ರಭಾವ ಬೀರಲಿಲ್ಲ. ಹೀಗಾಗಿ ಎಚ್.ಎಸ್.ಆರ್. ಕೆಲವು ಹೊಸ ಸಂಗತಿಗಳ ಮುಖೇನವೇ ಚಂಪಾ ಕಾವ್ಯದ ವಿಭಿನ್ನ ನೆಲೆಗಳನ್ನು ಗುರುತಿಸುತ್ತಾರೆ. ಉಳಿದಂತೆ ಪ್ರತಿಭಾ ನಂದಕುಮಾರ್ ಅವರ ಕಾವ್ಯದ ಅನುಸಂಧಾನದಲ್ಲಿ ತನ್ನ ಕಾವ್ಯದ ಅಂತರಂಗದಲ್ಲೇ ಸ್ಫೋಟಗೊಳ್ಳುವ ಕವಯತ್ರಿಯ ಬಗ್ಗೆ ಬಹಳ ಎಚ್ಚರದಿಂದಲೇ ಬರೆಯುತ್ತಾರೆ. ಬಹುಶಃ ಲೈಂಗಿಕ ಪ್ರತಿಮೆಗಳನ್ನು ಇಷ್ಟೊಂದು ಧೈರ್ಯವಾಗಿ ಬಳಸಿರುವುದು ಕನ್ನಡ ಕಾವ್ಯ ಪರಂಪರೆಯಲ್ಲಿ ಅಕ್ಕಮಹಾದೇವಿಯನ್ನು ಬಿಟ್ಟರೆ ಪ್ರತಿಭಾ ಅವರೇ ಇರಬೇಕು. ಈ ಪ್ರತಿಮೆ ಮುಖೇನ ಪುರುಷರ ದಬ್ಬಾಳಿಕೆಗಳಿಗೆ ಮುಖಾಮುಖಿಯಾಗುವ ಬಗೆಯನ್ನು ಎಚ್.ಎಸ್.ಆರ್. ಅವರು ಸರಿಯಾಗಿಯೇ ಪರಿಶೀಲಿಸಿದ್ದಾರೆ. ಈ ಸಂದರ್ಭದಲ್ಲಿ ಪ್ರತಿಭಾ ಅವರ ಕಾವ್ಯದ ಅನನ್ಯತೆಯನ್ನು ಗುರುತಿಸುತ್ತಾ ಇತರ ಸಮಕಾಲೀನ ಕವಿಗಳಾದ ರೇಖಾರಾಣಿ, ಗೀತಾ ನಾಗಭೂಷಣ್, ಎಚ್. ಎಸ್. ಶಿವಪ್ರಕಾಶರನ್ನು ಪ್ರಸ್ತಾಪಿಸುತ್ತಾ, ಪ್ರತಿಭಾ ಅವರು 'ಪ್ರತಿಲೋಕ'ವೊಂದನ್ನು ಹುಡುಕಿ ತೆಗೆದುಕೊಟ್ಟಿದ್ದಾರೆ (ಪುಟ-೧೯೦) ಎಂದು ಅಭಿಪ್ರಾಯಪಡುತ್ತಾರೆ.

ಕರ್ನಾಟಕದ ಹೊರಭಾಗಗಳಲ್ಲಿ ಜೀವಿಸಿದ ಯಶವಂತ ಚಿತ್ತಾಲ, ವ್ಯಾಸರಾಯ ಬಲ್ಲಾಳ, ಕೆ. ವಿ. ತಿರುಮಲೇಶ್ ಮುಂತಾದವರ ಬಗ್ಗೆ ಒಟ್ಟಾರೆ ಇವರ ಧೋರಣೆಗಳನ್ನು ಹಾಗೂ ಇವರ ಅನನ್ಯತೆಗಳನ್ನು ಹೇಳುವಾಗ ಇವರಿಗಿರುವ ಬಹು ದೊಡ್ಡ ನಗರ ಜೀವನ ಕ್ರಮಗಳು ಹಾಗೂ ಹಳ್ಳಿಯ ಬೇರುಗಳು, ಚಳುವಳಿಗಳನ್ನು ಗಮನಕ್ಕೆ ತೆಗೆದುಕೊಳ್ಳುತ್ತಾರೆ. ಉಳಿದಂತೆ 'ನಮಸ್ಕಾರ'ದಲ್ಲಿ ಕೆ. ಎಸ್. ನರಸಿಂಹಸ್ವಾಮಿಯವರ ಸಮಗ್ರಕಾವ್ಯದ ಬಗ್ಗೆ, ಶಂಬಾ, ಮಾಸ್ತಿ ಸಂದರ್ಶನ, ಗಿರಡ್ಡಿಯವರ ವಿಮರ್ಶೆ ಕುರಿತು ವಿವರವಾದ ಲೇಖನಗಳಿವೆ. ಆದರೆ ಇವೆಲ್ಲವನ್ನು ಸಮಗ್ರವಾಗಿ ಪರಿಶೀಲಿಸಲು ನನ್ನ ಲೇಖನಕ್ಕೆ ಸಾಧ್ಯವಾಗಿಲ್ಲ ಎಂಬ ಅತೃಪ್ತಿಯೊಂದಿಗೆ ಮೌಖಿಕ ಸಾಹಿತ್ಯ, ಬುಡಕಟ್ಟು ಜನಾಂಗಗಳ ಕುರಿತು ಬೇರೆಯವರಷ್ಟೇ ತಿಳಿದುಕೊಂಡಿರುವ ಎಚ್.ಎಸ್.ಆರ್. ಮೇಷ್ಟ್ರು ಅದನ್ನು ಬರೆಹರೂಪಕ್ಕೆ ಇಳಿಸಬೇಕೆಂಬುದೇ ನನ್ನ ಹಂಬಲ.

ಎನ್. ಸುರೇಶ್ ನಾಗಲಮಡಿಕೆ
ನಂ. ೬೫, ೮ನೇ ಮುಖ್ಯರಸ್ತೆ, ೪ನೇ ಬ್ಲಾಕ್, ನಂದಿನಿ ಲೇಔಟ್, ಬೆಂಗಳೂರು - ೫೬೦ ೦೯೬

ತಿಳಿವು

# ಅತೃಪ್ತಿ – ಸಂತೃಪ್ತಿ

## ಪ್ರೊ|| ಎಮ್. ಆರ್. ನಾಗರಾಜು

ಅತೃಪ್ತಿ ನಮ್ಮೆಲ್ಲರಿಗೂ ಇದೆ. ಆದರೂ ನಾವು ಸಂತೃಪ್ತರಂತೆ ಸೋಗುಹಾಕುವ ರೂಢಿ ಬೆಳೆಸಿಕೊಂಡಿದ್ದೇವೆ. ಭೂಮಿಯೂ ಹಾಗೆಯೇ. ಮೇಲುಪದರದಲ್ಲಿ ಘನವಾಗಿರುವ ಈ ಭೂಮಿಯು ಆಂತರ್ಯದಲ್ಲಿ ಅತ್ಯಂತ ಹೆಚ್ಚಿನ ತಾಪ ಹಾಗೂ ಒತ್ತಡಗಳಿಂದ ತುಂಬಿದೆ. ಈ ಒತ್ತಡ ಮತ್ತು ತಾಪದ ಅನುಭವ ಆಗಬೇಕಾದರೆ ಜ್ವಾಲಾಮುಖಿ ಸ್ಫೋಟಿಸಿ ಭೂಮಿಯೊಳಗಿನ ಬಿಸಿ ದ್ರವ್ಯ ಹೊರಬರಬೇಕು ಅಥವಾ ಭೂಮಿಯ ತಂಪಾದ ಮೇಲ್ಪದರವನ್ನು ಭೇದಿಸಿ ನಾವು ಭೂಮಿಯ ಅಂತರಾಳಕ್ಕೆ ಹೋಗಬೇಕು. ಈ ಎರಡೂ ಅನುಭವಗಳು ನಮಗಿದ್ದಾಗ್ಯೂ ನಾವು ಅದನ್ನು ಮರೆತು ಭೂಮಿ ಎಂದೊಡನೆಯೇ ತಂಪಾದ ಭೂಮಿಯ ಗಟ್ಟಿಪದರವನ್ನು ನೆನಪಿಸಿಕೊಳ್ಳುತ್ತೇವೆ. ''ಹುಟ್ಟು ಬೆಂಕಿ ನಮ್ಮ ತಾಯಿ ಉಟ್ಟ ಸೀರೆ ಸಾಗರ'' – ಎಂದು ಭೂಮಿಯನ್ನು ಕವಿ ಕೆ. ಎಸ್. ನರಸಿಂಹಸ್ವಾಮಿ ಅವರು ವಿವರಿಸಿರುವುದು ಅದೆಷ್ಟು ವಾಸ್ತವ!

ಕವಿಗಳು ವಿವರಿಸುವುದು ಭೂಮಿಯನ್ನು ಬಣ್ಣಿಸಲೆಂದಲ್ಲ. ಭೂಮಿಯ ರೂಪಕದಲ್ಲಿ ಮಾನವರ ಸ್ಥಿತಿಯನ್ನು ವಿವರಿಸಲು ಎಂಬುದನ್ನು ಮರೆಯದಿರೋಣ. ನಾವೆಲ್ಲರೂ ಭೂಮಿಯ ಹಾಗೆಯೇ ಅತೃಪ್ತಿಯನ್ನು ಒಡಲಲ್ಲೆ ಅಡಗಿಸಿಕೊಂಡು ನಡೆದಾಡುತ್ತಿದ್ದೇವೆ. ಇಲ್ಲಿ ಒಂದಂಶದಲ್ಲಿ ವ್ಯತ್ಯಾಸವಿದೆ. ಭೂಮಿಯಾದರೋ ಹೊರಗಿನ ತಂಪಿನಿಂದಲೇ ಆರಬೇಕು. ನಮ್ಮ ಅತೃಪ್ತಿಯಾದರೋ ಹೊರಗಿನ ಕಾರಣದಿಂದ (ದೊರಕುವ ಭೋಗಭಾಗ್ಯ ಮನ್ನಣೆಗಳು) ಹಾಗೂ ಒಳಗಿನ ಕಾರಣದಿಂದ (ಸಂಯಮ, ನಿತ್ಯಾನಿತ್ಯ ವಿವೇಕಗಳು) ಆರುವ ಅವಕಾಶವಿದೆ. ಹೊರಗಿನ ಸಾಧನೆಯ ಮೂಲಕ ಅತೃಪ್ತಿ ಕಳೆದುಕೊಳ್ಳುವುದನ್ನು ಪ್ರವೃತ್ತಿಮಾರ್ಗವೆಂದೂ, ಆಂತರಿಕ ಜ್ಞಾನದಿಂದ ಅತೃಪ್ತಿ ಕಳೆದುಕೊಳ್ಳುವುದನ್ನು ನಿವೃತ್ತಿಮಾರ್ಗವೆಂದೂ ಹೇಳಲಾಗುತ್ತದೆ.

ನಾವು ಹುಟ್ಟಿದಾಗಲೇ ಅತೃಪ್ತರಾಗಿ ಅಳುತ್ತಾ ಹುಟ್ಟುತ್ತೇವೆ; ನಿಜ. ಆದರೆ ಹೊಟ್ಟೆಗೆ ಆಹಾರ ಬಿದ್ದೊಡನೆಯೇ ಸಂತೃಪ್ತರಾಗಿ ಜಗತ್ತನ್ನೇ ನೋಡತೊಡಗುತ್ತೇವೆ. ಆದ್ದರಿಂದ ಸಂತೃಪ್ತಿ ನಮ್ಮ ಸಹಜ ಗುಣ ಎಂದೊಮ್ಮೆ ಅನಿಸುತ್ತದೆ. ಈಗ ಪ್ರಶ್ನೆಯೆಂದರೆ – ನಾವು ಸಂತೃಪ್ತರೋ? ಅತೃಪ್ತರೋ? ಯಾವುದು ಸಹಜಗುಣ?

ಅತೃಪ್ತಿ ಎಂದರೆ ಬೆಂಕಿ, ಅದು ನಮ್ಮಲ್ಲಿರುವ ಶಕ್ತಿಯ ಸೂಚಿ. ಆ ಶಕ್ತಿಯನ್ನು ಹಾಗೆಯೇ ಬಿಟ್ಟರೆ ಸುಡುವುದು ಖಚಿತ. ಆದರೆ ಅದರ ಸದ್ಬಳಕೆ ಮಾಡಿದರೆ ಅನೇಕ ಉಪಯುಕ್ತ ಕಾರ್ಯಗಳಾದಾವು. ನಮ್ಮ ಕೆಲಸಗಳಿಗೆ ಪ್ರಚೋದನೆ ಸಿಗುವುದೂ ಅತೃಪ್ತಿಯಿಂದಲೇ. ಅತೃಪ್ತಿ ಒಳ್ಳೆಯದೋ? ಕೆಟ್ಟದ್ದೋ? – ಮತ್ತೆ ಗೋಜಲು.

ಕನಸುಗಳಿರುವುದೇ ನನಸು ಮಾಡಲಿಕ್ಕೆ. ಅದರೊಡನೆ ರಾಜಿ ಏಕೆ? – ಎಂದು ಜಾಹಿರಾತು ಹೇಳುತ್ತದೆ. ಅಂದರೆ ಅತೃಪ್ತಿಯಿಂದಲೇ ಕನಸು ಮೂಡಬೇಕು. ಆ ಕನಸನ್ನು ಸಾಕಾರಗೊಳಿಸಿದಾಗ ಅದು ಸಂತೃಪ್ತಿಯಲ್ಲಿ ಪರ್ಯವಸಾನವಾಗುತ್ತದೆ ಎಂದಾಯಿತು. ಸಂತೃಪ್ತಿಯ ಸಾಧನೆಗೂ ಅತೃಪ್ತಿ ಬೇಕು ಎಂದು ಒಂದು ವಾದ – ಜಗದ ಸೊಗದರಸಿಕೆಯ ಫಲ ನೋಡು, ಬರಿ ಕಲಹ। ಮೃಗಗಳಾವೇಶಗೊಳಲಪ್ಪುದಿನ್ನೇನು? – ಎಂದು ಮಂಕುತಿಮ್ಮನ ಕಗ್ಗ ಸಾರುತ್ತದೆ. ಅತೃಪ್ತಿಯಿಂದಾದ ಕನಸು ಮತ್ತಷ್ಟೂ ಅತೃಪ್ತಿಗೆ ದಾರಿ ಮಾಡಿಕೊಡುತ್ತದೆ. ಅತೃಪ್ತಿಯಿಂದಲೇ ತೃಪ್ತಿ; ಅತೃಪ್ತಿಯಿಂದಲೇ ಅತೃಪ್ತಿ ಕಲಹ! ಯಾವುದು ಸಮ್ಮತ?

ಅತೃಪ್ತಿಯಿಂದ ಹೊರಬರಲು ಕನಸುಗಳು ಸಾಕಾರಗೊಳ್ಳಬೇಕು. ಕನಸುಗಳು ಸಾಕಾರವಾಗಲು ಹಣ ಬೇಕು. ಆದ್ದರಿಂದ ಅತೃಪ್ತಿ ಸಂತೃಪ್ತಿಗೆ ದಾರಿ ಮಾಡಿಕೊಡಲು ಸಿರಿತನ ಬೇಕು. ಮಿಗಿಲಾಗಿ ಬಡತನವಿದ್ದರೆ ಸಿರಿವಂತರ ಸುಖಜೀವನ ನಮ್ಮ ಅತೃಪ್ತಿಯನ್ನು ಕೆರಳಿಸುತ್ತದೆ ಎಂದು ಕೆಲವರ ವಾದ.

ಸಿರಿವಂತಿಕೆ ನಮಗಿಂತ ಬಡವರಲ್ಲಿ ಅತೃಪ್ತಿ ಉಂಟುಮಾಡಿ ಅವರನ್ನೂ ಹಿಂಸಿಸುತ್ತದೆ. ನಮಗಿಂತ ಸಿರಿವಂತರೊಡನೆ ನಾವೂ ಸ್ಪರ್ಧಿಸಹೋಗಿ ನಮ್ಮ ಅತೃಪ್ತಿಯೂ ಕೆರಳುತ್ತದೆ. ಸಿರಿವಂತಿಕೆಯ ಗಳಿಕೆ, ಸಂರಕ್ಷಣೆ, ವಿತರಣೆಯಲ್ಲಿ ನಿರಂತರ ತೊಡಗುವ ನಮಗೆ ಸಂತೃಪ್ತಿ ಹಾಗಿರಲಿ ಸರಸಸಲ್ಲಾಪಕ್ಕೂ ಬಿಡುವು ಇರದು. ನಿಸರ್ಗ ವೀಕ್ಷಣೆಯ ಸರಳ ಆನಂದದಿಂದ ವಂಚಿತರಾಗುತ್ತೇವೆ. ನಮ್ಮ ಸಿರಿವಂತಿಕೆಯ ಅಹಮಿಕೆಗೆ ಹೇಸಿ ಜನರು ದೂರ ಸರಿಯುತ್ತಾರೆ. ಮುಗ್ಧವಾದ ಪ್ರಕೃತಿ ಸೌಂದರ್ಯಾಸ್ವಾದನೆ, ಮಾನವ ಸಂಬಂಧಗಳ ಆನಂದವನ್ನು ಕಳೆದುಕೊಂಡ ಮೇಲೆ ಸಂತೃಪ್ತಿ ಎಲ್ಲಿ ಬರಬೇಕು? ''ಇಷ್ಟು ದೊರಕಿದರೆ ಮತ್ತಷ್ಟು ಬೇಕೆಂಬಾಸೆ, ಮತ್ತಷ್ಟು ದೊರಕಿದರೆ ಮಗದಷ್ಟರಾಸೆ, ಕಷ್ಟಬೇಡೆಂಬಾಸೆ, ಕಡುಸುಖವ ಕಾಂಬಾಸೆ, ನಷ್ಟಜೀವನದಾಸೆ'' – ಎಂದು ಹಾಡಿದ ದಾಸರು ಕೊನೆಗೆ ''ಬಡತನವೆಂಬುದು ಕಡೆತನಕ ಇರಲಿ'' ಎನ್ನುತ್ತಾರೆ.

ಹೋಗಲಿ ಅತೃಪ್ತಿ ಕೆರಳುವುದು ಯಾರಿಂದ? ನಮ್ಮ ಆಸೆಗಳಿಂದಾಗಿಯೇ – ಎಂದು ಕೆಲವರ ವಾದ. ಅರಿಷಡ್ವರ್ಗ ಗಳಲ್ಲಿ ಮೊದಲನೆಯದೂ ಉಳಿದ ವೈರಿಗಳ ಬರುವಿಕೆಗೆ ಬಾಗಿಲೂ ಆಸೆ ತಾನೆ? ಎಂದು ಅವರ ಖಚಿತ ನಿಲುವು.

ಇಲ್ಲ ಆಸೆಯು ಪ್ರಕೃತಿಸಹಜವಾದದ್ದು – ಎಂಬುದು ಇನ್ನು ಕೆಲವರ ಅಭಿಪ್ರಾಯ. ''ದಿಸೆದಿಸೆಗೂ ಮುತ್ತಿ ಬರುವ ಪ್ರಕೃತಿಗೆ ಆದಾರು ವಶವಾಗದಿಹ ನರನು ಮಂಕುತಿಮ್ಮ'' ಎಂದು ಡಿ.ವಿ.ಜಿ.ಯವರು ಹೇಳುವುದಕ್ಕೂ ನಾವು ತಲೆದೂಗುತ್ತೇವೆ.

ಅದೂ ಸರಿಯಲ್ಲ – ನಮ್ಮ ನೆರೆಹೊರೆಯವರು, ಸಮಾಜ ಯಾವುದಕ್ಕೆ ಮಾನ್ಯ ಮಾಡುವುದೋ ಅದನ್ನು ಗಳಿಸಬೇಕೆಂಬ ಆಸೆ ನಮಗಾಗುತ್ತದೆ. ಜಾಹಿರಾತು, ವ್ಯಾಪಾರ, ಸಹಮಾನವರೇ ನಮ್ಮ ಆಶೆಗಳನ್ನು ಕೆರಳಿಸುತ್ತಾರೆ ಎಂದು ಇನ್ನೊಂದು ವಾದ.

ಅಂತೂ ಅತೃಪ್ತಿಯು ವ್ಯಕ್ತಿಯ ಒಳಸೆಲೆಯಿಂದ ಬಂದದ್ದೋ? ಹೊರನೆಲೆಯಿಂದ ಬಂದದ್ದೋ? – ಈ ಪ್ರಶ್ನೆಗಳೇ ತಿಳಿಯದಾದಾಗ ನಮಗೆ ಇನ್ನೊಂದು ವಾದವಿರುವುದು ಮರೆತುಹೋಗುತ್ತದೆ. ಅತೃಪ್ತಿ ಮಾಡುವುದು ಒಳಗಣ ಬಯಕೆ, ಹೊರಗಣ ಕೆಣಕುವಿಕೆ ಕೂಡಿದಾಗ ಎಂಬಂಶವೂ ಅನೇಕರ ನಿಲುವು. 'ಪಾಶ ಹೊರಗಿಹುದು, ಕೊಂಡಿ ನಮ್ಮೊಳಗಿಹುದು ದೋಷ ಒಳಗೋ ಹೊರಗೋ – ಮಂಕುತಿಮ್ಮ' ಎಂಬ ಡಿ.ವಿ.ಜಿ.ಯವರ ವಾದವೂ ಉಂಟು. ಅತೃಪ್ತಿಯ ಚಿಲುಮೆ ಇರುವುದು ಜಗತ್ತು – ಜೀವಗಳ ಸಂಗಮ ಬಿಂದುವಿನಲ್ಲಿ ಎಂಬುದು ಈ ವಾದದ ಸಾರಾಂಶ.

ಹೊರಗಿನ ಚೆಲುವಿಗೆ ಒಳಗಿನ ಒಲವು ಬೆರೆತಾಗಲೇ ಸಂತೃಪ್ತಿ. ಆದ್ದರಿಂದ ಸಂತೃಪ್ತಿಯ ಉಗಮವೂ ಜೀವ-ಜಗತ್ತಿನ ಸಂಗಮದಿಂದಲೇ ಎಂದು ಹೇಳುವುದುಂಟು.

ನಮ್ಮ ಅತೃಪ್ತಿಗೆ ಇಂದ್ರಿಯಗಳು ಕಾರಣ. ಇಂದ್ರಿಯಚಾಪಲ್ಯ ನಮ್ಮನ್ನು ಅತೃಪ್ತಿಗೆ ದೂಡುತ್ತದೆ ಎಂದು ಒಂದು ನಿಲುವು. ಇಂದ್ರಿಯಗಳೇ ಜ್ಞಾನದ ಸಾಧನಗಳು. ಅವುಗಳು ಜ್ಞಾನೇಂದ್ರಿಯಗಳಲ್ಲವೆ? ಆದ್ದರಿಂದ ಕಣ್ತುಂಬ ನೋಡಿ ಜ್ಞಾನ ಗಳಿಸಿದರೆ ಸಂತೃಪ್ತಿ ಎಂದು ಹೇಳುವುದುಂಟು.

ನಮ್ಮ ಅತೃಪ್ತಿಗೆ ಈ ಮನಸ್ಸು ಕಾರಣ. ಇದು ಅನೇಕ ಬೇಡಿಕೆಗಳನ್ನು ಮುಂದೊಡ್ಡಿ ಕಾಡುತ್ತದೆ ಎಂದು ವಾದ ಮಾಡುವವರೂ ಇದ್ದಾರೆ. ಇಂದ್ರಿಯ ಚಪಲವನ್ನು ಗೆಲ್ಲಲು ಸಹಾಯ ಮಾಡಿ ನಮಗೆ ಮುದ ನೀಡುವುದೂ ಮನಸ್ಸೇ ಎಂದು ಪ್ರತಿವಾದ ಹೂಡುವವರೂ ಇದ್ದಾರೆ. 'ನಮ್ಮ ಮನಸ್ಸಂತೋಷಪಡಿಸಬೇಕಾಗಿ ವಿನಂತಿ' – ಎಂಬುದು ಪ್ರಸಿದ್ಧ ಪದಪುಂಜವಲ್ಲವೆ?

ನಮ್ಮ ಅತೃಪ್ತಿಗೆ ನಮ್ಮ ಬುದ್ಧಿ – 'ಬೇಕೆಂದರೆ ವಿಪರೀತ ಬುದ್ಧಿ ಎನ್ನಿ' – ಕಾರಣ ಎಂದು ಕೆಲವರ ಅಭಿಪ್ರಾಯ. ಅರಿಯಲು ಹೋದಷ್ಟೂ ಅಜ್ಞಾನದ ಅರಿವು ಸಮಾಂತರವಾಗಿ ಆಗುತ್ತದೆ. ಆ ಜ್ಞಾನದ ಅರಿವು ನಮಗೆ ಮತ್ತಷ್ಟು ಚಿಂತೆಗೆ ಹಚ್ಚುತ್ತದೆ. ಯೋಚಿಸಿದಷ್ಟೂ 'ಹತ್ಕೊಂತ್ಯೆತೆ ಯೋಚ್ನೆಗೆ ಒಂದು ಹೊಸನಾಣೆ' – ಎಂದು ರಾಜರತ್ನಂ ಈ ಸ್ಥಿತಿ ವರ್ಣಿಸಿಲ್ಲವೇ? ಬುದ್ಧಿಯಿಂದ ಬರುವ ವಿವೇಚನೆ, ಮನಸ್ಸು ಹಾಗೂ ಇಂದ್ರಿಯಗಳು ಉಂಟುಮಾಡಿದ್ದ ಬಂಧನದ ಬಿಡುಗಡೆಯ ಆನಂದಬುದ್ಧಿಯಿಂದಲೇ ಅಲ್ಲವೆ? ಅಂದಮೇಲೆ ಬುದ್ಧಿಯೇ ಸಂತೃಪ್ತಿಯ ಆಗರ ಎಂದು ಇನ್ನು ಕೆಲವರು ಹೇಳುತ್ತಾರೆ.

ದೇಹ, ಇಂದ್ರಿಯ, ಮನಸ್ಸು, ಬುದ್ಧಿಗಳೇ – ಅತೃಪ್ತಿ ಹಾಗೂ ಸಂತೃಪ್ತಿಯ ಸೆಲೆಗಳು ಎಂದು ನಾವು ಬೆರಗಾಗಿ ನೋಡುತ್ತಿರುವಾಗಲೇ ಕನಕದಾಸರು

ಕಾಣಿಸುತ್ತಿದ್ದಾರೆ. ನಿಮ್ಮ ಆಸೆ ಅತೃಪ್ತಿಗಳೆಲ್ಲವೂ ಅನ್ನದಿಂದ ಬಂದವು. 'ಅನ್ನದಿಂದ ಬಂದ ಕಾಮ ನಿನ್ನದೇನೆಲೋ?' ಎಂದು ಕೇಳುತ್ತಿದ್ದಾರೆ. ದೇಹ, ಇಂದ್ರಿಯ, ಮನಸ್ಸು, ಬುದ್ಧಿಗಳಿಗೆ ಚೈತನ್ಯ ನೀಡಿದರೆ ತಾನೆ ಅವು ಅತೃಪ್ತಿ ಹಾಗೂ ಸಂತೃಪ್ತಿ ನೀಡುವುದು? 'ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ' ಎಂದು ಭಗವದ್ಗೀತೆಯಲ್ಲಿ (ಅಧ್ಯಾಯ ೨, ಶ್ಲೋಕ ೫೯) ಹೇಳಿದೆ. ನಿರಾಹಾರಿಯಾದರೆ ಆಸೆಗಳೂ ಏನೂ ಮಾಡಲಾರವು – ಎಂದಲ್ಲವೆ ಇದರ ಅರ್ಥ. ಅತೃಪ್ತಿಯ ನೆಲೆ ಆಹಾರ. ನಮ್ಮ ಆಸೆಗಳು ಕೆರಳಿರುವುದು ಹೊಟ್ಟೆ ತುಂಬಿದ್ದರ ಫಲ.

ಇದಕ್ಕೂ ಪ್ರತಿವಾದ ಇದೆ. ನಾವು ಓದಿದ ಸಂಗತಿಗಳೆಲ್ಲವೂ ಉಪವಾಸ ಮಾಡಿದಾಗ ಮರೆತುಹೋಗುತ್ತವೆ. ನಿದ್ದೆಗಳು ಬಾರವು, ಬುದ್ಧಿಗಳು ತಿಳಿಯವು, ಮುದ್ದಿನ ಮಾತು ಸೊಗಸದು – ಬೋನದ ಮುದ್ದೆ ತಪ್ಪಿದರೆ ಸರ್ವಜ್ಞ – ಎಂದು ಸರ್ವಜ್ಞನು ಎಚ್ಚರಿಸುವಾಗ ಜಗತ್ತಿನ ಎಲ್ಲ ಸಂತೃಪ್ತಿಯ ಮೂಲ ಅಗತ್ಯ ಮುದ್ದೆ – ಅರ್ಥಾತ್ ಆಹಾರ ಎಂದು ಹೇಳಿದಹಾಗಾಯಿತು.

ಮಾನ್ಯ ಓದುಗರೆ, ನೀವು ಈ ವಿರುದ್ಧವಾದದಿಂದ ಸಾಕಷ್ಟು ಬೇಸತ್ತಿರಬೇಕಲ್ಲವೆ? ಆದರೂ ಇದು ಕಟು ವಾಸ್ತವ. ಸಿಹಿತಿಂಡಿ ಇರುವ ಗೂಡಿನೊಳಗೇ ಚೇಳೂ ಇದೆ. ಕೈ ಇರಿಸಿದಾಗ ಸಿಹಿ ಸಿಗುವುದೋ ಚೇಳಿನ ಕುಟುಕು ಸಿಗುವುದೋ, ಯಾರಿಗೂ ತಿಳಿಯದ ನಿಗೂಢ. ಅತೃಪ್ತಿ ಸಂತೃಪ್ತಿಗಳ ಆಕರ ಒಂದೇ ಎನ್ನುವುದು ವಿಚಿತ್ರವಾದರೂ ಸತ್ಯ.

ಇನ್ನು ನಮ್ಮ ನಿಲುವು ಯಾವುದು? ನಾವು ಯಾವ ವಾದದ ಪರವಾಗಿ – ನೆನಪಿಸಿಕೊಳ್ಳಿ. ಬೇರೆ ಬೇರೆ ಸಂದರ್ಭಗಳಲ್ಲಿ ಎರಡೂ ವಾದಗಳನ್ನು ನಮ್ಮ ಅನುಕೂಲಕ್ಕೆ ತಕ್ಕಂತೆ ಬಳಕೆ ಮಾಡಿಕೊಂಡಿದ್ದೇವೆ. ಶಿಶುನಾಳ ಶರೀಫರು ನಗೆಯಾಡುತ್ತಾರೆ 'ಅವರನು ಕಂಡರೆ ಅವರಂತಿ, ಮತ್ತಿವರನು ಕಂಡರೆ ಇವರಂತಿ, ಅರಿವೂ ಅರಿಯದೆ ನಿಜವೂ ತಿಳಿಯದೆ ...' ನಮಗೆ ಖಚಿತ ನಿಲುವೇ ಇಲ್ಲ.

ಆದರೆ ಈ ವಾದಗಳ ಗೋಜಲಿಗೆ ಹೋಗದೆ ಶಂಕರಾಚಾರ್ಯರು ಅನ್ನಪೂರ್ಣೆಯನ್ನು ಹೀಗೆ ಪ್ರಾರ್ಥಿಸಿದ್ದಾರೆ: ''ತಾಯಿ ನಾನು ಉಣ್ಣುವ, ನೀನು ನೀಡಿದ ಭಿಕ್ಷೆಯಾದ ಅನ್ನ, ಜ್ಞಾನ, ವೈರಾಗ್ಯಗಳಿಗೆ ಎಡೆ ಮಾಡಿಕೊಡಲಿ.'' (ಚಿಂತೆ ಕಾಮನೆಗಳಿಗೆ ಎಡೆಮಾಡಿಕೊಡದಿರಲಿ ಎಂದು ಅಂತರ್ಗತ ಅರ್ಥ.) ಅಂದರೆ ತತ್ತ್ವಶಾಸ್ತ್ರದ ಈ ದ್ವಂದ್ವದ ಸುಳಿಯ ಎಚ್ಚರದಲ್ಲೇ ಅವರು ಹಾಗೆ ಬರೆದಿರಬೇಕು.

ಅದೇ ಹಾರೈಕೆಯನ್ನು ನಮ್ಮ ದೇಹ, ಇಂದ್ರಿಯ, ಮನಸ್ಸು, ಬುದ್ಧಿಗಳಿಗೂ ಹಾರೈಸೋಣ. ಇವು ನಮಗೆ ಸಂತೃಪ್ತಿಯ ಚಿಲುಮೆಗಳಾಗಲಿ ಅಥವಾ ಸಂತೃಪ್ತಿಯ ಚಿಲುಮೆಗಳಾಗದಿದ್ದರೂ ಸರಿ, ಅತೃಪ್ತಿಯ ಕೆಂಡ ಕಾರುವ ಜ್ವಾಲಾಮುಖಿಗಳಾಗದಿರಲಿ.

*ಪರಿಮಿತಿಯನರಿತಾಶೆ ಪರವಶತೆ ಅಳಿದಸುಖ।*
*ವಿರತಿಯೊಡವೆರೆದ ಲೋಕೋದ್ಯೋಗಯುಕ್ತಿ॥*
*ಪರಿಕಿಸುತ ಜೀವಿತವ ಸತ್ಯವನೆ ಪಿಡಿವ ಮತಿ।*
*ವರಗಳೇ ನಾಲ್ಕವರ – ಮಂಕುತಿಮ್ಮ॥*

*ಆಶೆಗಳ ಕೆಣಕದಿರು ಪಾಶಗಳ ಬಿಗಿಯದಿರು।*
*ಕ್ಲೇಶದ ಪರೀಕ್ಷೆಗಳಿಗೆನ್ನ ಕರೆಯದಿರು॥*
*ಬೇಸರದ ಪಾತಕಸ್ಮೃತಿಯ ಚುಚ್ಚದಿರು ಎನ್ನ।*
*ಈಶನನು ಬೇಡುತಿರೋ – ಮಂಕುತಿಮ್ಮ॥*

**ಪ್ರೊ॥ ಎಮ್. ಆರ್. ನಾಗರಾಜು**
ಎಫ್-೩, ಎಸ್.ಎಫ್.ಎಸ್. ನಿವಾಸಗಳು, ೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು - ೬೪

## ಮೊನ್ನೆ ಸಿಕ್ಕವರು



'ಬರುತಿಹೆವು ನಾವು ಬರುತಿಹೆವು
ಬರುತಲಿಹ ಯೋಧರು ನಾವು
ಬರುತಿರುವೆವು ನಾವು ದಾರಿ ಬಿಡಿ'
ಜೋರಾಗಿ ಕೂಗುವ ಗಟ್ಟಿಧ್ವನಿ ಅಂದು
ಅಸ್ಪಷ್ಟವಾಗಿ ಕೇಳಿದ ನಾನು
ಸಂತೆಯೊಳಗೆ ಸರಿದು ನಿಂತಿದ್ದೆ
ಅವರು ಹೋಗುವ ದಾರಿಗಾಗಿ
ಮಗ್ಗಲಿನವರಿಗೂ ಶಕ್ತಿಯನುಸಾರ
ದೂರ ಸರಿಯಲು ಒಂದಿಷ್ಟು ನೂಕಿ.
ಅವರು ಹೋದರು.
ಹಾಗೆಯೇ ಮುಂದೆ ಹೋದರು.
ಹೋದಾದಮೇಲೆ
ಮತ್ತೆ ದಾರಿ ಇಲ್ಲದ ಸಂತೆ.

ಹಾಗೇ ಹೋದವರು
ಎಲ್ಲಿಗೆ ಹೋದರು ಗೊತ್ತೇ ಆಗಲಿಲ್ಲ.
ನೆನಪಾದಾಗ ಹುಡುಕುತಿದ್ದೆ
ಬಂಗ್ಲೆ ಬುಡದ ಗುಡಿಸಲೊಳಗೆ
ಮುರಿದುಬಿದ್ದ ಜೋಪಡಿಯೊಳಗೆ
ಹಾವು ಆಡಿಸುವ ಹಾದಿಮೇಲಿನ ಮನುಷ್ಯರೊಳಗೆ
ಎಲುಬುಗೂಡಿನ ಬಯಲಿನ ಮಕ್ಕಳೊಳಗೆ
ಬೆತ್ತಲೆ ಮೆರವಣಿಗೆಯ ಹೆಣ್ಣಿನ ಸೀರೆಯೊಳಗೆ
ಬೀದಿಗೆ ಬಿದ್ದ ಪದವಿಧರರ ಫೈಲಿನೊಳಗೆ
ಕುತ್ತಿಗೆಗೆ ಹಗ್ಗಬಿಗಿದ ರೈತನ ಮನೆಯೊಳಗೆ
ಅಲ್ಲಿ ಅವರಾರೂ ಇರಲಿಲ್ಲ
ದೂರದಲ್ಲೆಲ್ಲೋ ಯಾರೋ ನಗುತಿರುವ ಸಪ್ಪಳ.

ಮೊನ್ನೆ ಮೊನ್ನೆ ರಾಜಧಾನಿಯೊಳಗೆ
ವಿಧಾನಸೌಧ ನೋಡಲೆಂದು ಹೋದಾಗ
ಅವರೆಲ್ಲರೂ ಸಿಗಬೇಕೆ?
ಪಾಪ! ಆರಾಮಾಗಿದ್ದಾರೆ,
ಅವರದೇ ಹೆಸರಿನ ಬೋರ್ಡು ಅಂಟಿಸಿಕೊಂಡು.

**ಡಾ॥ ಕೆ. ಎನ್. ದೊಡ್ಡಮನಿ**
ಪತ್ರಕರ್ತ, ಪ್ಲಾಟ್ ನಂ. ೮೦, ಸರಾಫ ಕಾಲನಿ
ಖಾನಾಪೂರ ರಸ್ತೆ, ಟಿಳಕವಾಡಿ, ಬೆಳಗಾವಿ - ೫೯೦ ೦೦೯

ನವಕರ್ನಾಟಕ
ಪ್ರಕಾಶನದ
ವಿಶೇಷ ಕೊಡುಗೆ
2007 ಡಿಸೆಂಬರ್‌ನಲ್ಲಿ
ಲೋಕಾರ್ಪಣೆ

ನೊಬೆಲ್ ಪುರಸ್ಕೃತರು
ಸಮಗ್ರ ಮಾಹಿತಿ ಕೋಶ
ರಚನೆ : ಸಿ. ಆರ್. ಕೃಷ್ಣರಾವ್

ಡೆಮಿ ¼ ಆಕಾರದ 300 ಪುಟಗಳು

ನೊಬೆಲ್ ಪುರಸ್ಕೃತರು

ಸಮಗ್ರ ಮಾಹಿತಿ ಕೋಶ















ಸಿ. ಆರ್. ಕೃಷ್ಣರಾವ್

**ಪ್ರತಿಯೊಂದು ಮನೆ, ಶಾಲಾ-ಕಾಲೇಜು ಗ್ರಂಥಾಲಯದಲ್ಲಿ ಇರಲೇಬೇಕಾದ ಉಪಯುಕ್ತ ಕೃತಿ**

ಮುಖಬೆಲೆ ರೂ. 400
ಪ್ರಕಟಣಪೂರ್ವ ರಿಯಾಯಿತಿ
ಬೆಲೆ ರೂ. 280 ಮಾತ್ರ

ಪ್ರಾರಂಭದಿಂದ ಇಲ್ಲಿಯವರೆಗೆ ವಿಶ್ವಶಾಂತಿ, ಸಾಹಿತ್ಯ, ಭೌತ ವಿಜ್ಞಾನ, ರಸಾಯನ ವಿಜ್ಞಾನ, ವೈದ್ಯ ವಿಜ್ಞಾನ ಮತ್ತು ಅರ್ಥಶಾಸ್ತ್ರ ಕ್ಷೇತ್ರಗಳಿಗಾಗಿ ಪ್ರಶಸ್ತಿ ಪಡೆದ 760ಕ್ಕೂ ಹೆಚ್ಚಿನ ಗಣ್ಯರ ಚಿತ್ರಗಳ ಸಹಿತ ಅವರ ಬದುಕು ಸಾಧನೆಗಳ ಸಮಗ್ರ ಮಾಹಿತಿ ಕೋಶ

*ಅಂಚೆ ವೆಚ್ಚ ರೂ. 20 ಸೇರಿಸಿ ಒಟ್ಟು ರೂ. 300ರ ಡಿ.ಡಿ. ಅಥವಾ ಎಂ.ಒ. ಕಳಿಸಿ ನಿಮ್ಮ ಹೆಸರನ್ನು ಕೂಡಲೇ ನೋಂದಾಯಿಸಿಕೊಳ್ಳಿ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@vsnl.com web : www.navakarnatakabooks.com

ಶಾಖೆಗಳು : ಬೆಂಗಳೂರು © 22251382 :: ಮಂಗಳೂರು © 2441016 :: ಮೈಸೂರು © 2424094 :: ಗುಲ್ಬರ್ಗಾ © 224302

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / November 2007 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.